ಓಂ ನಮಸ್ಸಿದ್ಧೇಭ್ಯಃ.

# ತತ್ವಾರ್ಥಸೂತ್ರ ಕರ್ಣಾಟಕವ್ಯಾಖ್ಯಾನಂ.

ಈ ವ್ಯಾಖ್ಯಾನವು.

ಶ್ರೀಮದ್ವಸುಧಾವಧೂವದನದೇಶೀಯ ಕರ್ಣಾಟಕ
ಜನಪದ ಕರ್ಣಪೂರಾಯಮಾಣ ಚಾಮರಾಜನಗರ
ಮಧ್ಯ ಮಧ್ಯಾಸೀನ ಕಾಶ್ಯಪಗೋತ್ರೋದ್ಭವ
ಶ್ರೀಮದಾರ್ಹತದ್ವಿಜೋತ್ತಮ ಬ್ರಹ್ಮಸೂರಿ
ಪಂಡಿತಾತ್ಮಜ ಪದ್ಮರಾಜಪಂಡಿತರಿಂದ
ರಚಿಸಲ್ಪಟ್ಟು,

( ಮೊದಲನೇ ಛಾಪಾ ೨೫೦ ಕಾಪಿಗಳು )

ಸ್ವಕೀಯ ಶ್ರೀ ಭಾರತೀ ಭವನ ಮುದ್ರಾಕ್ಷರ ಶಾಲೆಯಲ್ಲಿ
ಮುದ್ರಿಸಿ ಪ್ರಕಟಿಸಲ್ಪಟ್ಟಿತು.

೧೯೧೪.

ಮಲ್ಲೇಶ್ವರಂ, ಬೆಂಗಳೂರು.

ಕ್ರಯ ೧-೦-೦ ಟಪಾಲ್ ಹಾಸಲ್ ೦-೧-೦

ವಿಷಯಸೂಚಿಕೆ. ಪುಟ ಸಂ.



ನಯಾನ್ಭಾವಾನ್ಪ್ರಕಾಶಾನಾಂ ದೇವಾನಾಂ ಚಾಸ್ತಿಕಾಯಕಂ ॥
ಆಸ್ರವಂ ಚ ವ್ರತಾನ್ಬಂಧಂ ಸಂವರಾಂ ಜ್ಞಾನಕಾರಣಂ ॥೧॥

೧ ನೇ ಅಧ್ಯಾಯದಿಂದ ೪ ನೇ ಅಧ್ಯಾಯದವರಿವಿಗೂ ಜೀವತತ್ವಲಕ್ಷಣವು ಹೇಳಲ್ಪಡುತ್ತದೆ.

೫ ನೇ ಅಧ್ಯಾಯದಲ್ಲಿ ಅಜೀವತತ್ವ ಲಕ್ಷಣವು ಹೇಳಲ್ಪಡುತ್ತದೆ.

೬ - ೭ ನೇ ಅಧ್ಯಾಯಗಳಲ್ಲಿ ಆಸ್ರವ ತತ್ವಲಕ್ಷಣವುಹೇಳಲ್ಪಡುತ್ತದೆ.

೮ ನೇ ಅಧ್ಯಾಯದಲ್ಲಿ ಬಂಧತತ್ವಲಕ್ಷಣವು ಹೇಳಲ್ಪಡುತ್ತದೆ.

೯ ನೇಅಧ್ಯಾಯದಲ್ಲಿಸಂವರೆ,ನಿರ್ಜರೆ ತತ್ವಲಕ್ಷಣವು ಹೇಳಲ್ಪಡುತ್ತದೆ.

೧೦ ನೇ ಅಧ್ಯಾಯದಲ್ಲಿ ಮೋಕ್ಷತತ್ವಲಕ್ಷಣವು ಹೇಳಲ್ಪಡುತ್ತದೆ.

---



ಬ್ರಿ. ಪ. ಪಂಡಿತ,
ಮಲ್ಲೇಶ್ವರ ಬೆಂಗಳೂರು.

## ಪ್ರಸ್ತಾವನೆ.

ತತ್ವಾರ್ಥಸೂತ್ರ, ಮೋಕ್ಷಶಾಸ್ತ್ರ. ಜೈನವೇದಸೂತ್ರವೆಂಬ
ಪ್ರಖ್ಯಾತಿಯನುಳ್ಳ ಈ ಸೂತ್ರವು ಉಮಾಸ್ವಾಮಿ ಮುನಿಗಳಿಂದ ಬರೆ
ಯಲ್ಪಟ್ಟಿದೆ. ಈ ಗ್ರಂಥಕ್ಕೆ ಶ್ಲೋಕವಾರ್ತಿಕ, ರಾಜವಾರ್ತಿಕ, ಸರ್ವಾ
ರ್ಥಸಿದ್ಧಿ, ಸುಬೋಧೆ, ಮೊದಲಾದ ಸಂಸ್ಕೃತ ವ್ಯಾಖ್ಯಾನಗಳಿವೆ. ಕನ್ನ
ಡದಲ್ಲಿ ತತ್ವರತ್ನಪ್ರದೀಪಿಕೆ, ಕನ್ನಡ ಸುಬೋಧೆ, ಮೊದಲಾದ
ವ್ಯಾಖ್ಯಾನಗಳು ಇವೆ. ಕನ್ನಡಶಬ್ದಾನುಶಾಸನಕಾರರು ತುಂಬುಲಾ
ಚಾರ್ಯರಿಂದ ೯೬೦೦೦ ಗ್ರಂಥಪ್ರಮಾಣವುಳ್ಳ ಚೂಡಾಮಣಿ ಎಂಬ
ವ್ಯಾಖ್ಯಾನವು ಈ ಸೂತ್ರಕ್ಕೆ ಮಾಡಲ್ಪಟ್ಟಿರುತ್ತದೆಂದು ಹೇಳುತ್ತಾರೆ.
ಆದರೆ ಆ ಗ್ರಂಥದಲ್ಲಿಸ್ವಲ್ಪಭಾಗವು ನಮಗೆದೊರೆಯಲಿಲ್ಲಾ. ಈಗಿನ ಕನ್ನ
ಡ ದೇಶದ ಜನರಿಗೆ ಸುಲಭಶೈಲಿಯಿಂದ ತಿಳಿಯುವದಕ್ಕಾಗಿ ಈ ತತ್ವಾ
ರ್ಥಸೂತ್ರಕ್ಕೆ ಅಧಿಕರಣ, ಅವತರಣಿಕೆ, ಪ್ರತಿಪದಾರ್ಥ, ತಾತ್ಪರ್ಯ
ಸಹ ಬರೆಯಲ್ಪಟ್ಟು „ ತತ್ವಾರ್ಥಸೂತ್ರ ಕರ್ಣಾಟಕ ವ್ಯಾಖ್ಯಾನ „ವೆಂ
ಬ ಹೆಸರುಇಡಲ್ಪಟ್ಟಿರುತ್ತದೆ ಮತ್ತು ಅಚ್ಚುಹಾಕಲ್ಪಟ್ಟಿರುತ್ತದೆ. ಇದು
ಪ್ರಥಮಾಭ್ಯಾಸಿಗಳಿಗೆ ಅನುಕೂಲಿಸಬೇಕೆಂದು ಸಂಗ್ರಹವಾಗಿ ಅ
ರ್ಥವುಬರೆಯಲ್ಪಟ್ಟಿದೆ. ಇಷ್ಟರಲ್ಲಿ ಯಾವದಾದರು ಒಂದುಸಂಸ್ಕೃತವ್ಯಾ
ಖ್ಯಾನದೊಡನೆ ತತ್ವರತ್ನಪ್ರದೀಪಿಕೆಯನ್ನಾಗಲಿ ಕನ್ನಡ ಸುಬೋಧೆ
ಯನ್ನಾಗಲಿ ಅಚ್ಚುಹಾಕಬೇಕೆಂದು ಯೋಚನೆಯಿಧೆ. ಈಗಪ್ರಿಂಟು
ಮಾಡಿರುವ ಗ್ರಂಥದಲ್ಲಿ ಪ್ರಮಾದಾದಿಗಳಿಂದ ಸ್ಖಲಿತ್ಯಾದಿ ವ್ಯತ್ಯಾಸಗ
ಳಿದ್ದರೆ ಬುದ್ಧಿಶಾಲಿಗಳುತಿದ್ದಿ ತಿಳಿಸಿದರೆ ಕೃತಜ್ಞತೆಯೊಡನೆ ಸ್ವೀಕರಿಸಿ ಎ
ರಡನೇ ಆವರ್ತಿ ಪ್ರಿಂಟಿನಲ್ಲಿ ಪರಿಷ್ಕರಿಸಲ್ಪಡುತ್ತದೆ. ಈ ತತ್ವಾರ್ಥ
ಸೂತ್ರದಲ್ಲಿ ಕರಣಾನುಯೋಗ ಚರಣಾನುಯೋಗ ದ್ರವ್ಯಾನುಯೋಗ
ವಿಷಯಗಳು ಹೇಳಲ್ಪಟ್ಟಿವೆ. ಆದ್ದರಿಂದ ಪ್ರತಿಒಬ್ಬಗೃಹಸ್ಥನು ಯ
ತಿಗಳುಸಹ ಪ್ರತಿದಿನದಲ್ಲಿಯೂ ಪಾರಾಯಣ ಮಾಡಬೇಕಾದದ್ದು ಅಗತ್ಯ
ವಾಗಿದೆ. ಸಮ್ಯಗ್ದರ್ಶನೋತ್ಪತ್ತಿಗೆ ಕಾರಣವಾದ ದೇವ ಗುರು ಶಾಸ್ತ್ರ
ಗಳಲ್ಲಿ ಇದು ಸೇರಿರುವದ್ದರಿಂದ ದೇವನ್ನು, ಗುರುಗಳಿಗೆ ಯಾವವಿಧಮ
ರ್ಯಾದೆಯನ್ನು ತೋರಿಸಬೇಕೋ ಆಮೇರೆ ಈ ತತ್ವಾರ್ಥಸೂತ್ರದ
ಪುಸ್ತಕಕ್ಕು ಮರ್ಯಾದೆಯನ್ನು ತೋರಿಸಬೇಕು. ಅಂದರೆ ದೇಹ

ಅಶುಚಿಯಾಗಿರುವಾಗಲೂ, ಸೂತಕಾದಿಗಳಲ್ಲಿರುವಾಗಲೂ, ಈ ಸೂತ್ರವನ್ನು ಅಧ್ಯಯನಮಾಡಬಾರದು. ಈ ಪುಸ್ತಕವನ್ನು ಸಹ ಅಶುಚಿ ಸೂತಕ ವಗೈರೆ [illegible] ಜನರ ಕೈಯ್ಯಲ್ಲಿ ಕೊಡಬಾರದು. ಅಶುಚಿಪ್ರದೇಶದಲ್ಲಿ ಇಡಬಾರದು. ಸ್ನಾನಾನಂತರ ಈ ಸೂತ್ರದ ಹತ್ತು ಅಧ್ಯಾಯಗಳನ್ನು ಸಂಪೂರ್ಣವಾಗಿ ಭಕ್ತಿಪುರಸ್ಸರ ಪಾರಾಯಣಮಾಡುವರಿಗೆ ಒಂದು ಉಪವಾಸದ ಫಲ ಉಂಟಾಗುತ್ತದೆ. ಆದ್ದರಿಂದ ಪೂಜ್ಯವಾಗಿಯೂ, ಇಹಪರಜನ್ಮಗಳಲ್ಲಿ ಸ್ವರ್ಗಮೋಕ್ಷಾದಿ ಸುಖಕ್ಕೆ ಕಾರಣವಾಗಿಯೂ ಇರುವ ಈ ಪುಸ್ತಕವನ್ನು ಅಚ್ಚಾದ ಪುಸ್ತಕವಾಗಿದೆಯಲ್ಲಾ ಎಂದು ಉದಾಸೀನತೆಯಿಂದ ಸಿಕ್ಕಿದಡೆ ಬೀಸಾಕುವದು, ಮತ್ತು ಈ ಗ್ರಂಥದಲ್ಲಿ ನಂಬಿಕೆಯಿಲ್ಲದವರ ಕೈಯ್ಯಲ್ಲಿ ಕೊಡುವದು ಸಹ ಬಿಟ್ಟು ಶುಚಿಭೂತವಾಗಿರುವ ಸ್ಥಳದಲ್ಲಿ ಗೌರವದಿಂದ ಇಡಬೇಕೆಂಬುವದೇ ನನ್ನ ಪ್ರಾರ್ಥನೆಯು,

### ಪ್ರಕೃತ ಪ್ರಿಂಟಿಗೆ ಆರಂಭಿಸಿರುವ ಗ್ರಂಥಗಳು.

ಎಲ್ಲಾ ನೋಂಪಿ ಕಥೆಗಳು.

ಮಹಾಪುರಾಣದ ೨ ನೇ ಭಾಗ.

ಪಾಕೀಟು ಕ್ರಿಯಾಪುಸ್ತಕ.



## ಕ್ರಯಕ್ಕೆ ಸಿದ್ಧವಾಗಿರುವ ಪುಸ್ತಕಗಳು.

| ಕ್ರಯ, | ಹೆಸರು. | ಟಪಾಲ್‌ಹಾಸಲು. |
|---|---|---|
| ೩-೮-೦ | ಮಹಾಪುರಾಣ ಕನ್ನಡತಾತ್ಪರ್ಯಸಹಿತ ೧ ನೇಭಾಗ, ಕಿತ್ತಾನಾರು ಬೈಯಿಂಡಿರುವದು. | ೦-೪-೦ |
| ೨-೦-೦ | ಜಿನಭಾರತ | ೦-೨-೬ |
| ೧-೪-೦ | ಜಿನಮುನಿ | ೦-೨-೦ |
| ೧-೮-೦ | ಸ್ಮೃತಿಸಂಗ್ರಹ | ೦-೧-೦ |
| ೧-೪-೦ | ತತ್ವಾರ್ಥಸೂತ್ರ, ಕರ್ಣಾಟಕ ವ್ಯಾಖ್ಯಾನ ಕಿತ್ತಾನಾರು ಬೈಯಿಂಡು. | ೦-೧-೦ |
| ೧-೦-೦ | ಡಿಟೋ ಸಾದಾಬೈಯಿಂಡು | ೦-೧-೦ |
| ೦-೮-೦ | ಅಂಜನಾದೇವಿನಾಟಕ | ೦-೦-೬ |
| ೦-೮-೦ | ದ್ವಾದಶಾನುಪ್ರೇಕ್ಷೆಯಅರ್ಥ | ೦-೦-೬ |
| ೦-೮-೦ | ಸೂಕ್ತಿಮುಕ್ತಾವಳಿ ಕನ್ನಡಅರ್ಥತಾತ್ಪರ್ಯಸಹಿತ | ೦-೦-೬ |
| ೦-೫-೦ | ಶೋಭಾನೆ ಅಥವಾ ಹಾಡು | ೦-೦-೬ |
| ೦-೪-೦ | ಶೋಭಾನೆ ೨ ನೇ ಭಾಗ | ೦-೦-೬ |
| ೦-೫-೦ | ಯಶೋಧರ ಚರಿತ್ರೆ | ೦-೦-೬ |
| ೦-೫-೦ | ವ್ರತಲಕ್ಷಣ | ೦-೦-೬ |
| ೦-೫-೦ | ದಶಭಕ್ತಿ | ೦-೦-೬ |
| ೦-೫-೦ | ತೀರ್ಥಂಕರ ಬಿಂಬಸಹಿತ ಇರುವ ಲಘುಪುರಾಣ | ೦-೦-೬ |
| ೦-೪-೦ | ಚತುರ್ದಶ ನೋಂಪೀಕಥೆ | ೦-೦-೬ |
| ೦-೪-೦ | ಸಟೀಕಾ ಸಮಯಭೂಷಣ | ೦-೦-೬ |
| ೦-೪-೦ | ಸಜ್ಜನಚಿತ್ತವಲ್ಲಭ ಕನ್ನಡ ಅರ್ಥ ತಾತ್ಪರ್ಯ | ೦-೦-೬ |
| ೦-೪-೦ | ಪಾರ್ಶ್ವನಾಥಸ್ವಾಮಿಪುರಾಣ ಕನ್ನಡತಾತ್ಪರ್ಯ | ೦-೦-೬ |
| ೦-೪-೦ | ಅಷ್ಟಾಂಗದ ಪಂಚಾಣುವ್ರತದ ಕಥೆಗಳು | ೦-೦-೬ |
| ೦-೪-೦ | ಜೈನಲಾ ಯೂಸೆಜಸ್ ಇಂಗ್ಲೀಷ್, ಕನ್ನಡ, ಮರಾಟಿ ತಾತ್ಪರ್ಯ ಸಹಿತ | ೦-೦-೬ |
| ೨-೪-೦ | ಸಟೀಕಾ ಭಕ್ತಾಮರಸ್ತೋತ್ರ | ೦-೦-೬ |

| ಕ್ರಯ. | ಹೆಸರು. | ಟಪಾಲ್‌ಹಾಸಲು. |
|---|---|---|
| ೦-೪-೦ | ಸಾಧಾರಣ ಸಂವತ್ಸರದ ಜೈನಬ್ರಾಹ್ಮಣಮಹಾ ಸಭಾ ರಿಪೋರ್ಟು | ೦-೦-೩ |
| ೦-೩-೦ | ಪಂಚಸ್ತೋತ್ರ | ೦-೦-೬ |
| ೦-೩-೦ | ಸ್ತೋತ್ರಸಂಗ್ರಹ | ೦-೦-೩ |
| ೦-೩-೦ | ದೊಡ್ಡಸಮಂತಭದ್ರ ತ್ರಿಷಷ್ಟಿಶಲಾಕಾಪುರುಷರ ಭವಾವಳಿ | ೦-೦-೬ |
| ೦-೩-೦ | ಕಾರ್ಕಳ ಚರಿತ್ರೆ | ೦-೦-೩ |
| ೦-೨-೦ | ಸಹಸ್ರನಾಮಮಂತ್ರ | ೦-೦-೩ |
| ೦-೨-೦ | ಪಂಚ ನೋಂಪೀಕಥೆ | ೦-೦-೬ |
| ೦-೨-೦ | ಸಟೀಕಾ ಅಕಲಂಕಾಷ್ಟಕ ವ್ರತಫಲವರ್ಣನೆ | ೦-೦-೬ |
| ೦-೨-೦ | ಸ್ವರೂಪಸಂಬೋಧನೆ ಕನ್ನಡ ಅರ್ಥ-ತಾತ್ಪರ್ಯ | ೦-೦-೬ |
| ೦-೧-೦ | ಪ್ರಶ್ನೋತ್ತರರತ್ನಮಾಲಾ | ೦-೦-೬ |
| ೦-೧-೦ | ಪರಮಾಗಮಸಾರ | ೦-೦-೬ |
| ೦-೧-೦ | ಸಹಸ್ರನಾಮ ಮೂಲ | ೦-೦-೬ |
| ೦-೧-೦ | ಭವ್ಯಾಮೃತ | ೦-೦-೬ |
| ೦-೧-೦ | ಕನ್ನಡಲೋಕಸ್ವರೂಪ | ೦-೦-೬ |
| ೦-೧-೦ | ಜಿನಮುನಿತನಯ | ೦-೦-೬ |
| ೦-೧-೦ | ದೇವತಾವಂದನಾಕ್ರಮ | ೦-೦-೬ |
| ೦-೧-೦ | ನಂದೀಶ್ವರಭಕ್ತಿ | ೦-೦-೬ |
| ೦-೧-೦ | ಸಟೀಕಾ ಸಾಮಾಯಿಕಾ | ೦-೦-೬ |
| ೦-೧-೦ | ಶಾಂತೀಶ್ವರಸ್ವಾಮಿ ಪ್ರತಿಷ್ಠಾನಾಟಕ | ೦-೦-೬ |
| ೦-೧-೦ | ಮನ್ಮಥಕೊರವಂಜೀ ಕಥೆ | ೦-೦-೬ |
| ೦-೧-೦ | ಉಪದೇಶರಾಗ ವಗೈರೆ | ೦-೦-೬ |
| ೦-೧-೦ | ಜಿನಮತ ಲಕ್ಷಣ | ೦-೦-೬ |
| ೦-೧-೦ | ಬೆಳಗುಳದ ಚರಿತ್ರೆ | ೦-೦-೬ |
| ೦-೧-೦ | ಸಟೀಕಾದೃಷ್ಟಾಷ್ಟಕ | ೦-೦-೬ |

| ಕ್ರಯ, | ಹೆಸರು. | ಟಪಾಲಹಾಸಲು. |
|---|---|---|
| | **ಇಂಗ್ಲೀಷ್ ಭಾಷೆಯಲ್ಲಿರುವ ಪುಸ್ತಕಗಳು.** | |
| ೦-೬-೦ | ಶ್ರವಣಬೆಳಗುಳ ಆಫ್ ಇಂಪಾರ್ಟೆನ್ಸ್ ೧ ನೇಪಾರ್ಟ್ | ೦-೦-೬ |
| ೦-೬-೦ | ಸಾಧಾರಣ ಸಂವತ್ಸರದ ಜೈನಬ್ರಾಹ್ಮಣ ಮಹಾ ಸಭಾ ರಿಪೋರ್ಟು | ೦-೦-೬ |
| | **ಗ್ರಂಥಾಕ್ಷರದಲ್ಲಿರುವ ಪುಸ್ತಕಗಳು.** | |
| ೦-೪-೦ | ಕ್ರಿಯಾಪುಸ್ತಕ ಅಂದರೆ ದಶಭಕ್ತಿ | ೦-೦-೬ |
| ೦-೨-೦ | ಸಹಸ್ರನಾಮಮೂಲ ೧೦೦೮ ಹೆಸರುಗಳುಸಹಿತ | ೦-೦-೬ |
| ೦-೧-೦ | ತಮಿಳತಾತ್ಪರ್ಯಸಹಿತಪ್ರಶ್ನೋತ್ತರರತ್ನಮಾಲಾ | ೦-೦-೬ |
| ೦-೯-೦ | ಭಕ್ತಾಮರ ಭೂಪಾಲಸ್ತೋತ್ರ ಮೂಲ | ೦-೦-೬ |
| | **ಜ್ಯೋತಿಷಗ್ರಂಥಗಳು.** | |
| ೦-೧೦-೦ | ಸಂಸ್ಕೃತ ಜಿನೇಂದ್ರಮಾಲಾ ಚಕ್ರಗಳುಸಹಿತ | ೦-೦-೬ |
| ೦-೮-೦ | ಜ್ಯೋತಿಶ್ಚಿಂತಾಮಣಿ | ೦-೦-೬ |
| ೦-೩-೦ | ನವನೀತಾರಿಷ್ಟ | ೦-೦-೬ |
| ೦=೩-೦ | ಕಣಿಪ್ರಶ್ನ ಶಿಲ್ಪಿ | ೦=೦-೬ |
| ೨=೦-೦ | ಕನ್ನಡ ಅರ್ಥ ತಾತ್ಪರ್ಯಸಹಿತ ಕ್ಷತ್ರಚೂಡಾಮಣಿ ಕಾವ್ಯ | ೦-೦-೬ |
| ೦-೪-೦ | ಲಘುಕೌಮುದಿಯ ಪಂಚಸಂಧಿಗೆ ಕನ್ನಡ ಅರ್ಥಉದಾಹರಣ ಸಮನ್ವಯ ಸಹಿತ | ೦-೦-೬ |
| | **ಬಾಳೋಬಂದು ಅಕ್ಷರದಬುಕ್ಕುಗಳು** | |
| ೦-೨-೬ | ಶಬ್ದದಬುಕ್ಕು | ೦-೦-೬ |
| | **ಪಠಗಳು.** | |
| ೦-೬-೦ | ಸಮವಸರಣಪಠ | ೦-೦-೬ |
| ೦-೪-೦ | ಚತುರ್ವಿಂಶತಿ ತೀರ್ಥಂಕರಪಠ ವರ್ಣಹಾಕಿರುವದು | ೦-೦-೬ |
| ೦-೨ ೦ | ಊರ್ಜಯಂತಗಿರಿ ಮತ್ತು ನೇಮೀಶ್ವರಸ್ವಾಮಿಯವರ ಪಾದಸಹ ಇರುವದು. | ೦-೦-೬ |
| ೦-೧-೦ | ಜ್ವಾಲಾಮಾಲಿನಿದೇವೀಪಠ | ೦-೦-೬ |
| ೦-೧=೦ | ಪದ್ಮಾವತೀದೇವೀಪಠ | ೦-೦-೬ |
| ೦-೧-೦ | ಬ್ರಹ್ಮದೇವರ ಪಠ | ೦-೦=೬ |

# ಗೋ ೦ ಮ ಟ ಸೇ ಕ ಕೆ.

ಶ್ರೀಮನ್ನೇಮಿಚಂದ್ರಸ್ವಾಮಿಗಳಿಂದ ಮಾಡಲ್ಪಟ್ಟಿರುವ „ ಗೋ ಮಟಸಾರ,, ವೆಂಬ ಗ್ರಂಥವು ಮಾಗಧಭಾಷೆಯಲ್ಲಿ ( ಗಾಥೆಗಳಲ್ಲಿ ) ಇರುತ್ತದೆ, ಈ ಗ್ರಂಥವು ಆಗಮಶಾಸ್ತ್ರಭ್ಯಾಸಿಗಳಿಗೆ ಅಮೌಲ್ಯವಾದದ್ದೆಂಬುವದು ಸರ್ವರಿಗೂತಿಳಿದದ್ದಾಗಿಯೇಯಿಧೆ. ಇಂಥಾಆಗಮ ಶಾಸ್ತ್ರವನ್ನು ಸರ್ವಜನರ ತಿಳುವಳಿಕೆಗೆ ತರುವದರಿಂದ ಉಂಟಾಗುವ ಪುಣ್ಯವು ಯಿಷ್ಟೆಂದು ಹೇಳಲು ಶಕ್ತಿಸಾಲದು. ಆದ್ದರಿಂದ ಈ ಗ್ರಂಥವನ್ನು ಪ್ರಸಿದ್ಧಿಮಾಡುವ ವಿಷಯದಲ್ಲಿ ಎಲ್ಲರೂ ಯತ್ನಿಸಬೇಕಾಗಿ ಕೋರುತ್ತೇನೆ.

ಈ ಗೋಮಟಸಾರದಲ್ಲಿ ಜೀವಕಾಂಡವನ್ನು ಕನ್ನಡಅರ್ಥದೊಡನೆ ಪ್ರಿಂಟುಮಾಡಬೇಕೆಂಬ ಇರಾದೆಯಿದೆ. ಈಗ ಆರಂಭಿಸಿರುವ ನೋಂಪೀಕಥೆ, ಮಹಾಪುರಾಣದ ೨ ನೇಭಾಗ ಪೂರ್ತಿಮಾಡಲ್ಲದೆ ಇದನ್ನು ಆರಂಭಿಸಲು ದ್ರವ್ಯಸಹಾಯಸಾಲದ್ದಾಗಿರುತ್ತದೆ. ಆದ್ದರಿಂದ ಧನಿಕರಾದ ಸಮ್ಯಗ್ದೃಷ್ಟಿಗಳು ದ್ರವ್ಯಸಹಾಯಮಾಡಿದರೂ ಸರಿಯೆ. ಅಥವಾ ಅವರೇಸ್ವಯಂ ಪ್ರಿಂಟುಮಾಡಿಸಿದರೂ ಸರಿಯೆ, ಪ್ರಿಂಟುಮಾಡುವ ಖರ್ಚಿನಲ್ಲಿ ಒಂದುಭಾಗಅವರುಕೊಡುವದಾದರೆ ಬಾಕಿ ೧ ಭಾಗದವೆಚ್ಚವನ್ನು ನಾವುಬೇಕಾದರು ಹಾಕುತ್ತೇವೆ. ಅಂಥಾ ಸಂದರ್ಭದಲ್ಲಿ ಪುಸ್ತಕಗಳನ್ನು ಇಬ್ಬರಹೆಸರಿನಿಂದಲೂ ಪ್ರಕಟಿಸಿ ಪುಸ್ತಕಗಳನ್ನು ಬೇಕಾದರು ಹಂಚಿಕೊಳ್ಳಬಹುದು.

ಯಾವಜೈನಮತಗ್ರಂಥಗಳನ್ನು ಸ್ವಯಂಪ್ರಿಂಟು ಮಾಡಿಸಬೇಕೆಂಬ ಇರಾದೆಯುಳ್ಳ ಸಮ್ಯಗ್ದೃಷ್ಟಿಗಳು ನಮ್ಮಲ್ಲಿಗೆಕಳುಹಿಸಿಕೊಟ್ಟರೆತೃಪ್ತಿಕರ್ದಿಸರಿಯಾದ ಛಾರ್ಜಿನಿಂದ ಪ್ರಿಂಟುಮಾಡಿಕೊಡಲ್ಪಡುತ್ತದೆ.

ಶಾಸ್ತ್ರದಾನವನ್ನುಮಾಡುವ ಉದ್ದಿಶ್ಯವಾಗಿ ಯಾರಾದರು ಹೆಚ್ಚು ಪುಸ್ತಕವನ್ನು ಅಪೇಕ್ಷಿಸುವದಾದರೆ ಅಂಥಾವರು ತೆಗದುಕೊಳ್ಳುವ ಪ್ರತಿಗಳ ಸಂಖ್ಯೆಯನ್ನು ಅನುಸರಿಸಿ ಕ್ರಯದಲ್ಲಿ ಸ್ವಲ್ಪ ಬಿಟ್ಟು ಕೊಡಲ್ಪಡುತ್ತದೆ.— ಇಷ್ಟವುಳ್ಳವರುಈ ಕೆಳಗಿನ ವಿಳಾಸಕ್ಕೆ ಬರೆದರೆ ಕಳುಹಿಸಿಕ್ಕೊಡಲ್ಪಡುತ್ತದೆ.

ಬಿ. ಪದ್ಮರಾಜಪಂಡಿತ,
ಮಲ್ಲೇಶ್ವರ ಬೆಂಗಳೂರು.

ಓಂ ನಮಸ್ಸಿದ್ಧೇಭ್ಯಃ,

## ತತ್ವಾರ್ಥ ಸೂತ್ರ ಕರ್ಣಾಟಕ ವ್ಯಾಖ್ಯಾನ.

ಅವತರಣಿಕೆ ‖ ಶ್ರೀಮತ್ ಮೋಕ್ಷಮಾರ್ಗವನ್ನು ಉಪದೇಶಮಾಡಿದ ಅರ್ಹದ್ಭಟ್ಟಾರಕರಿಗೆ ಶ್ರೀಮದುಮಾಸ್ವಾಮಿ ಮುನಿಗಳು (ಗೃಧ್ರಪಿಂಛಾಚಾರ್ಯರು) ಮೋಕ್ಷಶಾಸ್ತ್ರವನ್ನು ಹೇಳುವದಕ್ಕೆ ಆರಂಭಿಸಿ ಮಂಗಳಾರ್ಥವಾಗಿ ನಮಸ್ಕಾರವನ್ನು ಮಾಡುತ್ತಾರೆ.

ಮೋಕ್ಷಮಾರ್ಗಸ್ಯ ನೇತಾರಂ ಭೇತ್ತಾರಂ ಕರ್ಮಭೂಭೃತಾಂ ‖
ಜ್ಞಾತಾರಂ ವಿಶ್ವತತ್ವಾನಾಂ ವಂದೇ ತದ್ಗುಣಲಬ್ಧಯೇ ‖ ೧ ‖

ಅರ್ಥ‖ ಮೋಕ್ಷಮಾರ್ಗಸ್ಯ - ಮೋಕ್ಷ - ಸಮಸ್ತಕರ್ಮ ನಾಶರೂಪವಾದಂಥಮುಕ್ತಿಯ, ಮಾರ್ಗಸ್ಯ - ಪ್ರಾಪ್ತಿಯ ಉಪಾಯವಾದ ರತ್ನತ್ರಯ ಮಾರ್ಗವನ್ನು, ನೇತಾರಂ-ಉಪದೇಶಮಾಡಿದಂಥಾ, ಕರ್ಮಭೂಭೃತಾಂ - ದ್ರವ್ಯಕರ್ಮ ಭಾವಕರ್ಮ ನೋಕರ್ಮಗಳೆಂಬಬೆಟ್ಟಗಳನ್ನು, ಭೇತ್ತಾರಂ - ಒಡೆದಿರುವಂಥಾ, ವಿಶ್ವತತ್ವನಾಂ-ವಿಶ್ವ - ಸಮಸ್ತವಾದಂಥಾ,- ತತ್ವಾನಾಂ - ಜೀವಾದಿತತ್ವಗಳನ್ನು, ಜ್ಞಾತಾರಂ - ತಿಳಿದಂಥಾ ತೀರ್ಥಂಕರಪರಮದೇವರನ್ನು, ತದ್ಗುಣಲಬ್ಧಯೇ-ತದ್ಗುಣ- ಆಪರಮೇಶ್ವರನ ಅನಂತಜ್ಞಾನಾದಿಗುಣಗಳನ್ನು, ಲಬ್ಧಯೇ- ಪಡೆಯುವದಕ್ಕೋಸ್ಕರ, ವಂದೆ - ನಮಸ್ಕರಿಸುತ್ತೇನೆ‖ ಈಗ್ರಂಥದಲ್ಲಿ ಕರ್ಮಣಿಷಷ್ಠಿಯಾಗಿಧೆ ‖

ತಾತ್ಪರ್ಯ ‖ ಭೇದಾಭೇದ ರತ್ನತ್ರಯಾತ್ಮಕ ಮುಕ್ತಿಮಾರ್ಗಕ್ಕೆ ತೆಗೆದುಕೊಂಡು ಹೋಗುತ್ತಿರುವಂಥ, ಘಾತಿಕರ್ಮಗಳೆಂಬ ಬೆಟ್ಟಗಳೆನ್ನು ನಿಜನಿರಂಜನ ಪರಮಾತ್ಮಭಾವನಾ ರೂಪಾತೀತ ಶುಕ್ಲಧ್ಯಾನವೆಂಬ ವಜ್ರದಿಂದ ಸೀಳಿದಂಥ, ಜೀವಾದಿ ಸಮಸ್ತ ತತ್ವಗಳನ್ನು ಸಕಲ ವಿಮಲ ಕೇವಲಜ್ಞಾನದಿಂದ ತಿಳಿದಿರುವಂಥ, ಮಹಾವೀರಸ್ವಾಮಿಯನ್ನು, ಆ ಪರಮೇಶ್ವರನಗುಣಸದೃಶ ನಿಜಪರಮಾತ್ಮ ಗುಣಗಳನ್ನು ಪಡೆಯುವದಕ್ಕೋಸ್ಕರನಿಶ್ಚಯವ್ಯವಹಾರರೂಪ ಭಾವದ್ರವ್ಯಸ್ತೋತ್ರದಿಂದ ನಮಸ್ಕರಿಸುತ್ತೇನೆ. ಸ್ವಭಾವಾತಿಶಯಾದಿ ಸಮಸ್ತಾತಿಶಯ ಕ್ಷಾಯಿಕಜ್ಞಾನಾದಿನವಕೇ

ತಲ ಲಬ್ಧಿಸಿಂಹಾಸನಾದ್ಯಷ್ಟಮಹಾಪ್ರಾತಿಹಾರ್ಯ ಸಮನ್ವಿತ ವಿಗತಾ ಷ್ಟಾದಶದೋಷ ಶ್ರೀವರ್ಧಮಾನತೀರ್ಥಂಕರಪರಮದೇವನೇನಮಸ್ಕಾರ ಕ್ಕೆಯೋಗ್ಯ,ಇತರರಲ್ಲವೆಂದು ಮಂಗಲಸ್ತೋತ್ರದಿಂದ ಹೇಳಲ್ಪಟ್ಟಿತು.||೧||

ಮೋ ಕ್ಷಾ ಧಿ ಕ ರ ಣ ಂ

ಅ|| ಸಮ್ಯಗ್ದರ್ಶನಾದಿಗಳೇ ಮೋಕ್ಷಕ್ಕೆ ಮಾರ್ಗವೆಂದು ಹೇಳುತ್ತಾರೆ.

ಸೂತ್ರ|| ಸಮ್ಯಗ್ದರ್ಶನಜ್ಞಾನಚಾರಿತ್ರಾಣಿ ಮೋಕ್ಷಮಾರ್ಗಃ || ೧ ||

ಅರ್ಥ || ಸಮ್ಯಗ್ದರ್ಶನಜ್ಞಾನಚಾರಿತ್ರಾಣಿ-ಸಮ್ಯಗ್ದರ್ಶನ - ಚಂದಾಗಿ ಪದಾರ್ಥಸ್ವರೂಪದಲ್ಲಿ ನಂಬಿಗೆಯು (ತತ್ವಾರ್ಥಶ್ರದ್ಧಾನರೂಪವಾದ) ಸಮ್ಯಗ್ದರ್ಶನವು, ಜ್ಞಾನ - ಚಂದಾಗಿ ನಂಬಿಗೆಯೊಡನೆಕೂಡಿದಪದಾರ್ಥಗಳ ತಿಳುವಳಿಕೆಯು ( ಮತಿಶ್ರುತಾವಧಿಮನಃಪರ್ಯಯಕೇವಲ ಗಳು) ಸಮ್ಯಜ್ಞಾನವು,ಚಾರಿತ್ರಾಣಿ- ಚಂದಾಗಿ ಆಸಮ್ಯಗ್ದರ್ಶನಜ್ಞಾನಗಳೊಡನೆಕೂಡಿದ ಒಳ್ಳೇನಡತೆಯು ( ನಿಶ್ಚಯ ವ್ಯವಹಾರರೂಪವಾದ ಸಮ್ಯಕ್ಚಾರಿತ್ರವು ), ಮೋಕ್ಷಮಾರ್ಗಃ- ಮೋಕ್ಷ-ಜ್ಞಾನಾವರಣಾದ್ಯಷ್ಟವಿಧಕರ್ಮವನ್ನು ಬಿಡುವದಕ್ಕೆ, ಮಾರ್ಗಃ -ಉಪಾಯವು ॥ ೧ ||

ತಾ || ಪದಾರ್ಥಗಳ ಯಥಾಸ್ವರೂಪವು ತಿಳಿಯುವದಕ್ಕೆ ಕಾರಣ ವಾದ ನಂಬಿಗೆಯನ್ನು ತೆಗದು ಕೊಳ್ಳುವದಕ್ಕಾಗಿ ದರ್ಶನಕ್ಕೆ ಸಮ್ಯಗ್ವಿಶೇಷಣವು || ಜೀವಾದಿಪದಾರ್ಥಗಳು ಹ್ಯಾಗೆ ಇರುವದೊ ಹಾಗೆ ತಿಳಿಯುವದು ಸಮ್ಯಜ್ಞಾನವು, ಅದಕ್ಕೆ ವಿಮೋಹ (ಅನಧ್ಯವಸಾಯ), ಸಂಶಯ, ವಿಪರ್ಯಯವೆಂಬ ಈ ೩ ಇರಕೂಡದೆಂದು ಸಮ್ಯಕ್ ಎಂಬ ವಿಶೇಣವು ಸೇರಿಸಲ್ಪಟ್ಟಿಧೆ. (ಗಚ್ಛತ್ತೃಣಸ್ಪರ್ಶವದ್ವಿಮೋಹಃ) ತಿಳಿದುಕೊಳ್ಳಬೇಕೆಂಬ ಅಪೇಕ್ಷೆಯಿಲ್ಲದ ನಿಶ್ಚಯವಿಲ್ಲದ ವಿಕಲ್ಪವಿಲ್ಲದ ಯಾವಸೂಕ್ಷ್ಮ ಜ್ಞಾನವೊ ಅದು ವಿಮೋಹವು || ಉದಾಹರಣೆ || ಮಾರ್ಗದಲ್ಲಿ ಹೋಗುವಾಗ್ಗ ಕಾಲಿಗೆ ಹುಲ್ಲು ಮುಳ್ಳು ಕಲ್ಲು ಮೊದಲಾದ್ದರ ಸ್ಪರ್ಶನದಂತೆ ||

( ಸ್ಥಾಣುರ್ವಾ ಪುರುಷೋವೇತಿ ನಿರ್ಣಯಾಭಾವಃ ಸಂಶಯಃ ) ಯಾವ ಎರಡು ಪದಾರ್ಥವನ್ನು ತಿಳಿಯುವದರಲ್ಲಿ ಸಮಾನವಾಗ್ಯಿರುವ ಧರ್ಮ ಕಾಣುವದರಿಂದಲೂ, ಆದರ ವಿಶೇಷಧರ್ಮ ಕಾಣದೇಯಿರುವದರಿಂದಲೂ, ಅನೇಕ ಪದಾರ್ಥಗಳ ಅವಲಂಬನೆಮಾಡುವ ಜ್ಞಾನ ಉಂಟಾಗುವದೇ ಸಂಶಯವೆಂಬುವದು. (ಶುಕ್ತಿಕಾಶಕಲೇ ರಜತಜ್ಞಾನಂ ವಿಪರ್ಯಯಃ ) ಸಮಾನವಾದ ಗುರ್ತುಯಿರುವದನ್ನ ನೋಡಿ ಒಂದುಪದಾರ್ಥವನ್ನು ಇಂ

ನೊಂದು ಪದಾರ್ಥವೆಂದು ನಿಶ್ಚಯಿಸುವದು ವಿಪರ್ಯಯವೆಂದು ಹೆಸರು. ಉದಾಹರಣೆ. ಮುತ್ತಿನಚಿಪ್ಪನ್ನು ನೋಡಿ ಬೆಳ್ಳಿಯೆಂದು ತಿಳಿದುಕೊಳ್ಳುವದು. ಹಗ್ಗವನ್ನು ನೋಡಿ ಹಾವು ಇಂತೆಂದು ತಿಳಿದುಕೊಳ್ಳುವದು ॥ ಸಂಸಾರಕಾರಣ ನಿವೃತ್ತಿಯ ಉದ್ಯೋಗಮಾಡುವ ಸಮ್ಯಜ್ಞಾನಿಯ ಕರ್ಮಾಸ್ರವಕಾರಣವಾದ ಹಿಂಸಾದಿಗಳ ನಿವೃತ್ತಿಯುಸಮ್ಯಕ್ಚಾರಿತ್ರವು॥ ಅದಕ್ಕೆ ಅಜ್ಞಾನಪೂರ್ವಕವಾದ ಆಚರಣೆಯ ನಿವೃತ್ತಿನಿಮಿತ್ತವಾಗಿ ಸಮ್ಯಗ್ವಿಶೇಷಣವು ಹೇಳಿರುತ್ತೆ॥ಸಮ್ಯಗ್ದರ್ಶನವೆಂಬಪದವನ್ನುಮೊದಲಲ್ಲಿ ಇಟ್ಟಿರುವದರಿಂದ ಸಮ್ಯಗ್ದರ್ಶನವಿಲ್ಲದೆಯಿರುವನು ಈಶಾಸ್ತ್ರಾರ್ಥವನ್ನು ತಿಳಿದುಕೊಂಡಾಗ್ಯೂ ಆತನ ಜ್ಞಾನಕ್ಕೆ ಸಮ್ಯಜ್ಞಾನವೆಂದು ಹೆಸರಾಗುವದಿಲ್ಲ. ಸಮ್ಯಗ್ದರ್ಶನವು ಸಮ್ಯಜ್ಞಾನವು ಇಲ್ಲದೇ ಕೇವಲಚಾರಿತ್ರವನ್ನು ಅಂಗೀಕರಿಸಿದರೆ ಅದಕ್ಕೆ ಸಮ್ಯಕ್ಚಾರಿತ್ರವೆಂದು ಹೆಸರಾಗುವದಿಲ್ಲ॥ ಮಾರ್ಗಃ ಎಂದು ಏಕವಚನ ಹೇಳಿದ್ದರಿಂದ ಸಮ್ಯಗ್ದರ್ಶನಜ್ಞಾನಚಾರಿತ್ರಗಳೆಂಬುವ ಈ ಮೂರರಸೇರ್ವಿಕೆಯು ಸಂಪೂರ್ಣವಾದ ಸಾಕ್ಷಾನ್ಮೋಕ್ಷಕಾರಣವೆಂದು ತಿಳಿಯತಕ್ಕದ್ದು ॥ ೧ ॥

ಅ ಥ ದ ರ್ಶ ನಾ ಧಿ ಕ ರ ಣಂ.

ಅ ॥ ಸಮ್ಯಗ್ದರ್ಶನ ಸ್ವರೂಪವನ್ನು ಹೇಳುತ್ತಾರೆ.

ಸೂತ್ರ ॥ ತತ್ವಾರ್ಥಶ್ರದ್ಧಾನಂ ಸಮ್ಯಗ್ದರ್ಶನಂ ॥ ೨ ॥

ಅ ॥ತತ್ವಾರ್ಥಶ್ರದ್ಧಾನಂ - ತತ್ವ - ಜೀವಾದಿಪದಾರ್ಥ ಸ್ವರೂಪದಿಂದ, ಅರ್ಥ - ಜೀವಾದಿಪದಾರ್ಥಗಳಲ್ಲಿ, ಶ್ರದ್ಧಾನಂ - ನಿಶ್ಚಯವಾದನಂಬಿಕೆಯು, ಸಮ್ಯಗ್ದರ್ಶನಂ - ಸಮ್ಯಗ್ದರ್ಶನ ವೆಂಬುವದು ಆಗುತ್ತಿಧೆ॥ ೨ ॥

ತಾ ॥ ಸಪ್ತತತ್ವದನಂಬಿಕೆಯು ಸಮ್ಯಗ್ದರ್ಶನವೆಂದು ತಿಳಿಯುವದು ॥ ತತ್ ಅಂದರೆ ಅದು ಎಂಬರ್ಥವು. ಅದು ಯೆಂಬುವದು ಸರ್ವಪದಾರ್ಥಕ್ಕೂ ಬರುತ್ತದೆ. ಆದ್ದರಿಂದ ಇದು ಸರ್ವನಾಮದಲ್ಲಿ ಸೇರಿಯಿಧೆ.ತಚ್ಛಬ್ದದ ಭಾವವೇ ಅಂದರೆ ಅದರ ಸ್ವರೂಪವೇ ತತ್ವವೆನ್ನಿಸಿಕೊಳ್ಳುತ್ತದೆ. ಆದ್ದರಿಂದ ಸರ್ವಪದಾರ್ಥ ಸ್ವರೂಪಗಳು ಯಾವವೋ ಅದು ಯಾವಸ್ವರೂಪದಲ್ಲಿಧೆಯೊ ಅಧಕ್ಕೆ ವ್ಯತ್ಯಾಸವಿಲ್ಲದಂತೆ ಯಥಾರ್ಥದಲ್ಲಿ ನಂಬಿಕೆಯು ಸಮ್ಯಗ್ದರ್ಶನವೆಂದು ಹೇಳಲ್ಪಡುತ್ತೆ. ಅಥವಾ ತತ್ವವೇವ ಅ

ರ್ಥಃ ತತ್ವಾರ್ಥಃ ಎಂದು ತತ್ವವೆಂಬುವ ಅರ್ಥದಲ್ಲಿಯೇ ಭಾವಪ್ರಧಾನಾರ್ಥದಿಂದ ತತ್ವಾರ್ಥವೆಂದು ಕೆಲವರುಹೇಳುತ್ತಾರೆ. ಮತ್ತೆ ಕೆಲವರು ತತ್ವೇನ ಅರ್ಯಂತೆ ಜ್ಞಾಯಂತಇತಿ ತತ್ವಾರ್ಥಾಃ ಅಂದರೆ ಯಾವವದಾರ್ಥವುಯಾವಸ್ವರೂಪದಲ್ಲಿಧೆಯೋ ಆಸ್ವರೂಪದಂತೆ ತಿಳಿಯತಕ್ಕವಸ್ತುವಿನಲ್ಲಿ ಎಂದು ಅರ್ಥಹೇಳುತ್ತಾರೆ, ಆದ್ದರಿಂದ ಯಾವಪದಾರ್ಥ ಯಾವರೀತಿಯಲ್ಲಿಧೆಯೋ ಆರೀತಿಯಾಗಿ ತಿಳಿದುಕೊಳ್ಳುವದಕ್ಕೆ ತತ್ವಾರ್ಥ ವೆಂದು ಹೆಸರು. ಅದರಲ್ಲಿ ನಂಬಿಕೆಯಿದ್ದರೆ ಸಮ್ಯಗ್ದರ್ಶನವು. ಮೋಹ ಸಂಶಯ ವಿಪರ್ಯಾಸವನ್ನು ಹೋಗಲಾಡಿಸುವಂಥ. ದರ್ಶನಮೋಹೋಪಶಮ, ಕ್ಷಯ, ಕ್ಷಯೋಪಶಮ, ಸಮುದ್ಭೂತ ಬೋಧ ಸಮ್ಯಗ್ವಿಶೇಷಣಕಾರಣವಾಗಿಯಿರುವ ಆತ್ಮ ಪರಿಣಾಮ ವಿಶೇಷವು ಸಮ್ಯಗ್ದರ್ಶನವು || ೩ ||

ಅ || ಆ ಸಮ್ಯಗ್ದರ್ಶನೋತ್ಪತ್ತಿ ಎರಡುವಿಧವೆಂದು ಹೇಳುತ್ತಾರೆ.

ಸೂತ್ರ || ತನ್ನಿಸರ್ಗಾದಧಿಗಮಾದ್ವಾ || ೩ ||

ಅ|| ತತ್ - ಆಸಮ್ಯಗ್ದರ್ಶನವು ನಿಸರ್ಗಾತ್ - ಸ್ವಭಾವಶ್ರದ್ಧೆಯಿಂದ, ವಾ-ಹಾಗಲ್ಲದೇಹೋದರೆ,ಅಧಿಗಮಾತ್ -ಮತ್ತೊಬ್ಬರಬೋಧನೆಯಿಂದಆಗುತ್ತೆ||

ತಾ || ಆ ಮೋಕ್ಷ ಪ್ರಥಮೋಪಾಯವಾದ ತತ್ವಾರ್ಥಶ್ರದ್ಧಾನರೂಪವಾದಸಮ್ಯಗ್ದರ್ಶನವು ಸ್ವಭಾವಶ್ರದ್ಧೆಯಿಂದ ಅಂದರೆ ತನ್ನ ಸಪ್ತಪ್ರಕೃತಿಗಳ ಉಪಶಮದಿಂದ ಕಾಲಲಬ್ಧಿ, ಉಪಶಮಲಬ್ಧಿ, ಉಪದೇಶನಾಲಬ್ಧಿ ಪ್ರಾಯೋಗ್ಯತಾಲಬ್ಧಿ, ಕರಣಲಬ್ಧಿ, ಎಂಬ ಪಂಚಲಬ್ಧಿಗಳನ್ನು ಮತ್ತೊಬ್ಬರ ಬೋಧನೆ ಮುಖ್ಯವಾಗಿ ಯಿಲ್ಲದೇಯಿದ್ದಾಗ್ಯೂ ತಾನೇ ಕರ್ಮೋಪಶಮದಿಂದ ಹೊಂದುವದು ನಿಸರ್ಗ ಸಮ್ಯಕ್ತ್ವವೆನ್ನಿಸಿಕೊಳ್ಳುವದು|| ಮತ್ತೊಬ್ಬರ ಮುಖ್ಯಬೋಧನೆಯಿಂದ ಹುಟ್ಟತಕ್ಕದ್ದು ಅಧಿಗಮ ಸಮ್ಯಕ್ತ್ವವೆನ್ನಿಸಿಕೊಳ್ಳುವದು. ಅಂದರೆ ಈತನಿಗೆ ಸಮ್ಯಕ್ತ್ವೋತ್ಪತ್ತಿಯಾಗುವದಕ್ಕೆ ಸ್ವಾಲೋಚನೆಯೇ ಮುಖ್ಯವಾದ್ದೆಂತಲೂ, ಉಪದೇಶವೇ ಮುಖ್ಯವಾದ್ದೆಂತಲೂ, ತಾತ್ಪರ್ಯವು || ೩ ||

ಅ || ಸಪ್ತತತ್ವಗಳನ್ನು ಹೇಳುತ್ತಾರೆ.

ಸೂ|| ಜೀವಾಜೀವಾಸ್ರವ ಬಂಧಸಂವರನಿರ್ಜರಾಮೋಕ್ಷಾಸ್ತತ್ವಂ||೪||

ಅ || ಜೀವಾಜೀವಾಶ್ರವಬಂಧಸಂವರನಿರ್ಜರಾಮೋಕ್ಷಾಃ - ಜೀವ- ಜ್ಞಾ

ನೋಪಯೋಗ ದರ್ಶನೋಪಯೋಗವುಳ್ಳ (ಚೇತನಾಲಕ್ಷಣವುಳ್ಳ) ಜೀವವು, ಅಜೀವ-ಅಚೇತನವಾದ ದ್ರವ್ಯರೂಪಅಜೀವವು, ಆಸ್ರವ - ಪುಣ್ಯಪಾಪಾಗಮರೂಪ ಆಸ್ರವವು (ಜೀವನಿಗೆಕರ್ಮಬರತಕ್ಕದ್ದು ), ಬಂಧ-ಜೀವಕರ್ಮಗಳ ಪರಸ್ಪರಪ್ರದೇಶ ಪ್ರವೇಶಾತ್ಮಕಬಂಧವು, ಸಂವರ - ಪುಣ್ಯ ಪಾಪ ಬರತಕ್ಕಮಾರ್ಗವನ್ನು ಮುಚ್ಚುವ ಸಂವರವು, ನಿರ್ಜರಾ- ಏಕದೇಶಕರ್ಮಕ್ಷಯ ರೂಪನಿರ್ಜರೆಯು, ಮೋಕ್ಷ- ಸಕಲಕರ್ಮಕ್ಷಯರೂಪಮೋಕ್ಷವು ಇವುಗಳು, ತತ್ವಂ- ಏಳುತತ್ವವೆಂದುಹೇಳಲ್ಪಟ್ಟಿಧೆ ‖ ೪ ‖

ತಾ ‖ ವಿಜ್ಞಾನಾದಿ ಅನೇಕವಿಕಲ್ಪದಿಂದಕೂಡಿದಚೇತನಾ ಲಕ್ಷಣವುಳ್ಳದ್ದುಜೀವತತ್ವವು ‖ ಚೇತನಾಲಕ್ಷಣವಿಲ್ಲದ ಅಂದರೆಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ, ಯಿವುಗಳು ಅಜೀವತತ್ವವು ‖ ಶುಭಾಶುಭಕರ್ಮ್ಮಾಗಮ ದ್ವಾರರೂಪವು ಆಸ್ರವತತ್ವವು ‖ ಆತ್ಮಕರ್ಮಗಳೆರಡರ ಪರಸ್ಪರಪ್ರದೇಶಾನು ಪ್ರವೇಶಾತ್ಮಕವಾಗುವುದು ಬಂಧತತ್ವವು‖ ಆಸ್ರವವನ್ನ ತಡೆಯುವಲಕ್ಷಣವು ಸಂವರತತ್ವವು ‖ ಆತ್ಮಪ್ರದೇಶದಿಂದ ಏಕದೇಶಕರ್ಮ್ಮದ ಕ್ಷಯಲಕ್ಷಣವು ನಿರ್ಜರತತ್ವವು ‖ ಕೃತ್ಸ್ನಕರ್ಮ್ಮವಿಪ್ರಮೋಕ್ಷಲಕ್ಷಣ ಅಂದರೆ ಆತ್ಮನುಸಮಸ್ತಕರ್ಮ್ಮಗಳಿಂದ ಬಿಡಲ್ಪಡುವದುಮೋಕ್ಷತತ್ವವು ‖ ಇಂತೆಂದು ಮೋಕ್ಷಾಪೇಕ್ಷಿಗಳು ಏಳುವಿಧವುಳ್ಳ ಪದಾರ್ಥಗಳನ್ನು ತಿಳಿಯತಕ್ಕದ್ದು ಮುಖ್ಯವೆಂದು ಇವೇ ೭ ತತ್ವಗಳು ಹೇಳಲ್ಪಟ್ಟಿಧೆ ‖　　‖ ೪ ‖

ಅ ‖ ಸಮ್ಯಗ್ದರ್ಶನಾಧಿಗಳಗೂ ಜೀವಾದಿಗಳಿಗೂ ಸಂವ್ಯವಹಾರ ವಿಶೇಷ ವ್ಯಭಿಚಾರ ನಿವೃತ್ತಿಗೋಸ್ಕರ ನಿಕ್ಷೇಪಭೇದವನ್ನು ಹೇಳುತ್ತಾರೆ.

ಸೂತ್ರ ‖ ನಾಮಸ್ಥಾಪನಾದ್ರವ್ಯಭಾವತಸ್ತನ್ನ್ಯಾಸಃ ‖ ೫ ‖

ಅರ್ಥ ‖ ನಾಮ - ಹೆಸರು, ಸ್ಥಾಪನಾ - ಪ್ರತಿಕೃತ್ಯಾದಿ ಸ್ಥಾಪನೆಯು, ದ್ರವ್ಯ -ಗುಣಪರ್ಯಾಯವುಳ್ಳ ಪದಾರ್ಥವು, ಭಾವ-ಪರ್ಯಾಯವು ಯಿವುಗಳದೆಶೆಯಿಂದ, ತನ್ಯಾಸಃ - ತತ್ - ಆಸಮ್ಯಗ್ದರ್ಶನಜ್ಞಾನಚಾರಿತ್ರಗಳ ಸಪ್ತತತ್ವಗಳ ನ್ಯಾಸಃ-ನಿಶ್ಚಯಿಸೋಣವು ಆಗುತ್ತಿಧೆ. ‖ ೫ ‖

ತಾ ‖ ಜಾತಿ, ದ್ರವ್ಯ, ಗುಣ, ಕ್ರಿಯೆ, ಯಿವುಗಳನ್ನು ಅಪೇಕ್ಷಿಸದೇ ಹೆಸರಿಡುವದು ನಾಮವೆಂಬುವದು ‖ ಅದರಲ್ಲಿ ಗೋ. ಮನುಷ್ಯ, ಘಟ, ಪಟ, ಸ್ತಂಭ ಮೊದಲಾದ ಸಾದೃಶ್ಯವು ಜಾತಿ ಎಂಬುವದು ‖ ದ್ರವ್ಯವು ಸಂಯೋಗ ದ್ರವ್ಯವೆಂತಲೂ ಸಮವಾಯದ್ರವ್ಯವೆಂತಲೂ ಎರಡು ವಿಧವು.

ತನ್ನಿಂದ ಪ್ರತ್ಯೇಕವಾದ ದಂಡ ಛತ್ರಾದಿಗಳ ಕೂಟದಿಂದ ದಂಡಿ ಛತ್ರಿ ಯೆಂಬುವಷುವೊದಲಾದ್ದು ಸಂಯೋಗದ್ರವ್ಯವು || ಸಮವಾಯದ್ರವ್ಯವು ಉಪಚಿತವೆಂತಲೂ ಅನುಪಚಿತವೆಂತಲೂ ೨ವಿಧವು. ಕಂಠ ಕಪೋಲ ಉದ್ದ ದಕಿವಿ ಇವುಗಳೊಡನೆಕೂಡಿದವನುಎಂಬುವದು ಉಪಚಿತಸಮವಾಯದ್ರವ್ಯವು || ಕುಂಟ ಕುರುಡ ಎಂಬುವದು ಅನುಪಚಿತಸಮವಾಯ ದ್ರವ್ಯವು|| ಕಾಳನು ಕೆಂಚನು ಎಂಬುವದು ಗುಣವೆಂಬುವದು || ಗಾಯಕ ನರ್ತಕ ವಾದಕನು ಎಂಬುವದು ವೊದಲಾದದ್ದು ಕ್ರಿಯೆ ಎಂಬುವದು || ಕಾಷ್ಠ, ಪುಸ್ತಕ, ಚಿತ್ರಕರ್ಮಾಕ್ಷತೆ ವೊದಲಾದ್ದರಲ್ಲಿ ಅದು ಇದೆಂದು ಸ್ಥಾಪಿಸುವದು ಸ್ಥಾಪನೆಯೆಂಬುವದು. ಅದು ಸದ್ಭಾವಸ್ಥಾಪನೆ ಅಸದ್ಭಾವಸ್ಥಾಪನೆ ಎಂದು ಎರಡು ವಿಧವು || ಅತೀತಾನಾಗತಪರ್ಯಾಯಗಳಲ್ಲಿ ಪರಿಣಮಿಸಿದ, ಪರಿಣಮಿಸುವದರಲ್ಲಿದ್ದ ವಸ್ತುವಿಗೆ ದ್ರವ್ಯವೆಂಬು ಹೆಸರು || ಅಂದರೆ ಮುಂದೆ ಧೊರೆಯಾಗುವ ರಾಜಪುತ್ರನನ್ನು ರಾಜನೆಂದು ಹೇಳುವದು.|| ವರ್ತಮಾನಪರ್ಯಾಯೋಪಲಕ್ಷಿತದ್ರವ್ಯವು ಭಾವವು, ಅಂದರೆತತ್ಕಾಲದಲ್ಲಿಪದಾರ್ಥಕ್ಕೆ ಯಾವ ಪರ್ಯಾಯವಿದೆಯೋ ಅದೇರೂಪುಹೇಳುವದುಭಾವವೆನಿಸುವದು || ಈ ನಾಮಾದಿಗಳಿಂದ ಆಸಮ್ಯಗ್ದರ್ಶನ ಜ್ಞಾನ ಚಾರಿತ್ರಗಳ ಸಪ್ತತತ್ವಗಳ ನಿಶ್ಚಯು ಉಂಟಾಗುವುದು || || ೫ ||

ಅ || ಇವುಗಳ ತಿಳುವಳಿಕೆ ಉಂಟಾಗುವದನ್ನು ಹೇಳುತ್ತಾರೆ.

ಸೂತ್ರ || ಪ್ರಮಾಣನಯೈರಧಿಗಮಃ || ೬ ||

ಅರ್ಥ || ಪ್ರಮಾಣ - ಪರೋಕ್ಷ ಪ್ರತ್ಯಕ್ಷವೆಂಬ ಎರಡುವಿಧಪ್ರಮಾಣಗಳಿಂದಲೂ, ನಯೈಃ-ನೈಗಮಾದಿನಯಗಳಿಂದಲೂ, ಅಧಿಗಮಃ-ನಾಮಾದಿನಿಕ್ಷೇಪವಿಧಿಯಿಂದ ಜೀವಾದಿತತ್ವಗಳನಿಶ್ಚಯವು || ೬ ||

ತಾ || ಸಾಮಾನ್ಯವಿಶೇಷಾತ್ಮಕಗಳಾದ ವಸ್ತುಗಳನ್ನು ನಿಶ್ಚಯಿಸುವದು ಪ್ರಮಾಣವೆಂಬುವದು|| ಪ್ರಮಾಣದಿಂದ ಹೇಳಿದ ಅರ್ಥವನ್ನು ಏಕದೇಶದಲ್ಲಿ ವಸ್ತು ನಿರ್ಣಯ ಮಾಡುವದಕ್ಕೆ ನಯವೆಂದು ಹೆಸರು || ೬||

ಅ || ಮಧ್ಯಮ ರುಚಿಗಳನ್ನು ಕುರಿತು ತತ್ವನಿಶ್ಚಯ ಉಪಾಯಾಂತರವನ್ನು ಹೇಳುತ್ತಾರೆ.

ಸೂ || ನಿರ್ದೇಶ ಸ್ವಾಮಿತ್ವಸಾಧನಾಧಿಕರಣಸ್ಥಿತಿವಿಧಾನತಃ || ೭||

ಅ || ನಿರ್ದೇಶ- ಸ್ವರೂಪಾಭಿಧಾನವು, ಸ್ವಾಮಿತ್ವ- ಆಧಿಪತ್ಯವು, ಸಾಧನ -ಉತ್ಪತ್ತಿನಿಮಿತ್ತವು, ಅಧಿಕರಣ- ಅಧಿಷ್ಠಾನವು (ಆಧಾರವು ), ಸ್ಥಿತಿ- ಕಾಲಪರಿಚ್ಛೇದವು (ನೆಲಸುಗೆಯುಂ), ವಿಧಾನತಃ- ಪ್ರಕಾರವು (ವಿಕಲ್ಪ) ಎಂಬ ಇವುಗಳದೆಶೆಯಿಂದ ಅಧಿಗಮ ಉಂಟಾಗುತ್ತದೆ || ೭ ||

ಅ || ಇನ್ನೂ ಆಗಧಿಮೋಪಾಯ(ತತ್ವನಿಶ್ಚಯೋಪಾಯುವನ್ನು) ಹೇಳುತ್ತಾರೆ.

ಸೂ || ಸತ್ಸಂಖ್ಯಾಕ್ಷೇತ್ರಸ್ಪರ್ಶನಕಾಲಾಂತರಭಾವಾಲ್ಪಬಹುತ್ವೈಶ್ಚ || ೮ ||

ಅ || ಸತ್- ಗುಣಸ್ಥಾನ ಮಾರ್ಗಣಸ್ಥಾನಗಳ ಅಸ್ತಿತ್ವವು. ಸಂಖ್ಯಾ- ಭೇದಗಣನೆಯು ಅಂದರೆ ಪ್ರಮಾಣವು, ಕ್ಷೇತ್ರ- ವರ್ತಮಾನಕಾಲ ವಿಷಯನಿವಾಸಸ್ವರೂಪಕ್ಷೇತ್ರವು, ಸ್ಪರ್ಶನ- ತ್ರಿಕಾಲಗೋಚರಸ್ಪರ್ಶನವು, ಕಾಲ- ವಕ್ಷ್ಯಮಾಣ ಮುಖ್ಯವ್ಯವಹಾರರೂಪಕಾಲವು, ಅಂತರ- ವಿರಹಕಾತ್ಮಕಾಂತರವು, ಭಾವ-ಔಪಶಮಿಕಾದಿ ರೂಪಭಾವವು, ಅಲ್ಪಬಹುತ್ವೈಶ್ಚ- ಅನ್ಯೋನ್ಯಾಪೇಕ್ಷೆಯಿಂದ ವಿಶೇಷಪ್ರತಿಪತ್ತಿರೂಪ ಅಲ್ಪಬಹುತ್ವವೆಂಬ ಇವುಗಳಿಂದಲೂ- ಸಮ್ಯಕ್ತ್ವಾದಿ ಸಪ್ತತತ್ವಗಳ ಅಧಿಗಮ ಉಂಟಾಗುವದು || ೮ ||

ಜ್ಞಾ ನಾ ಧಿ ಕ ರ ಣ ಂ.

ಅ || ಈಮೇಲೆ ಸಮ್ಯಗ್ದರ್ಶನವನ್ನು ಹೇಳಿ ಮುಂದೆ ಸಮ್ಯಜ್ಞಾನಲಕ್ಷಣವನ್ನು ಹೇಳುತ್ತಾರೆ.

ಸೂ || ಮತಿಶ್ರುತಾವಧಿಮನಃಪರ್ಯಯಕೇವಲಾನಿ ಜ್ಞಾನಂ || ೯

ಅ || ಮತಿ- ಪಂಚೇಂದ್ರಿಯ ಮನಸ್ಸು ಇವುಗಳಿಂದ ತಿಳಿಯುವದುಮತಿ ಜ್ಞಾನವು, ಶ್ರುತ- ಮತಿಜ್ಞಾನದಿಂದತಿಳಿದ ಅರ್ಥವನ್ನು ಆಧಾರಮಾಡಿಕೊಂಡು ಇನ್ನೊಂದುಅರ್ಥತಿಳಿಯುವ ಶ್ರುತಜ್ಞಾನವು, ಅವಧಿ- ಮೂರ್ತಗಳಾದ ಎಲ್ಲಾ ಪದಾರ್ಥಗಳನ್ನು ಪ್ರತ್ಯಕ್ಷದಿಂದತಿಳಿಯುವದು ಅವಧಿಜ್ಞಾನವು, ಮನಃಪರ್ಯಯ-ಇನ್ನೊಬ್ಬರಮನಸ್ಸಿನಲ್ಲಿರುವ ಅರ್ಥವನ್ನು ಪ್ರತ್ಯಕ್ಷವಾಗಿ ತಿಳಿಯುವದು ಮನಃಪರ್ಯಯಜ್ಞಾನವು, ಕೇವಲಾನಿ- ಕೇವಲಜ್ಞಾನವು ಇಂತೆಂಬ ಈ ಐದು, ಜ್ಞಾನಂ- ಜ್ಞಾನವು || ೯ ||

ಅ || ಈ ಮತ್ಯಾದಿಜ್ಞಾನಗಳೇ ಪ್ರಮಾಣಗಳೆಂದು ಹೇಳುತ್ತಾರೆ.

ಸೂ || ತತ್ಪ್ರಮಾಣೇ|| ೧೦ ||

ಅ || ತತ್- ಆ ಮತ್ಯಾದಿ ೫ ಜ್ಞಾನಗಳು, ಪ್ರಮಾಣೇ- ಪರೋಕ್ಷ ಪ್ರತ್ಯಕ್ಷಗಳೆಂಬ ೨ ವಿಧಪ್ರಮಾಣಗಳು || ೧೦ ||

ಅ || ಪರೋಕ್ಷಜ್ಞಾನಗಳನ್ನು ಹೇಳುತ್ತಾರೆ.

ಸೂ || ಆದ್ಯೇ ಪರೋಕ್ಷಂ ||೧೧ ||

ಅ || ಆದ್ಯೇ- ಮೊದಲನೆವುಗಳಾದ ಮತಿ ಶ್ರುತಿ ಜ್ಞಾನಗಳೆರಡು, ಪರೋಕ್ಷಂ-ಪರೋಕ್ಷಜ್ಞಾನಗಳು. ಪರೇಣ ಕರ್ಮಣಾ ಉಕ್ಷ್ಯತೇ ಸಿಚ್ಯತೈತಿ ಪರೋಕ್ಷಂ. ಅಂದರೆ: ಕರ್ಮದೊಡನೆ ಕೂಡಿದ ಜ್ಞಾನವು ಪರೋಕ್ಷವೆನ್ನಿಸಿಕೊಳ್ಳುತ್ತದೆ||೧೧ ||

ಅ || ಪ್ರತ್ಯಕ್ಷ ಜ್ಞಾನಗಳನ್ನು ಹೇಳುತ್ತಾರೆ.

ಸೂ || ಪ್ರತ್ಯಕ್ಷಮನ್ಯತ್ ||೧೨ ||

ಅ || ಅನ್ಯತ್- ಉಳಿದಂಥಾ ಅವಧಿ ಮನಃಪರ್ಯಯ ಕೇವಲ ಜ್ಞಾನಗಳು, ಪ್ರತ್ಯಕ್ಷಂ- ಪ್ರತ್ಯಕ್ಷಜ್ಞಾನಗಳು. ಪ್ರತ್ಯಾತ್ಮಾನಂ ಅಕ್ಷ್ಣೋತಿ ವ್ಯಾಪ್ನೋತೀತಿ ಪ್ರತ್ಯಕ್ಷಂ. ಅಂದರೆ? ಆತ್ಮನನ್ನು ವ್ಯಾಪಿಸಿರತಕ್ಕ ಜ್ಞಾನವು ಪ್ರತ್ಯಕ್ಷವೆನ್ನಿಸಿಕೊಳ್ಳುತ್ತದೆ || ೧೨ ||

ಅ || ಪರೋಕ್ಷಜ್ಞಾನವನ್ನು ಹೇಳುತ್ತಾರೆ.

ಸೂ ||ಮತಿಸ್ಸ್ಮೃತಿಸ್ಸಂಜ್ಞಾ ಚಿಂತಾಭಿನಿಬೋಧಇತ್ಯನರ್ಥಾಂತರಂ||

ಅ || ಮತಿಃ - ಮತಿಯು, ಸ್ಮೃತಿಃ - ಸ್ಮೃತಿಯು, ಸಂಜ್ಞಾ - ಸಂಜ್ಞೆಯು, ಚಿಂತಾ- ಚಿಂತೆಯು, ಅಭಿನಿಬೋಧಃ- ಅಭಿನಿಬೋಧವು, ಇತಿ-ಹೀಗಿಂತೆಂದು, ಅನರ್ಥಾಂತರಂ- ಅರ್ಥಾಂತರವಿಲ್ಲವು. ಅಂದರೆ ಎಲ್ಲಾ ಮತಿಜ್ಞಾನವೆಂದು ಹೆಸರು || ೧೩ ||

ಅ || ಮತಿಜ್ಞಾನಪರ್ಯಾಯಗಳನ್ನು ಹೇಳುತ್ತಾರೆ.

ಸೂ || ತದಿಂದ್ರಿಯಾನಿಂದ್ರಿಯನಿಮಿತ್ತಂ || ೧೪ ||

ಅ || ತತ್- ಆ ಮತಿಜ್ಞಾನವು, ಇಂದ್ರಿಯ ಪಂಚೇಂದ್ರಿಯಗಳ, ಅನಿಂದ್ರಿಯ- ಮನಸ್ಸು, ನಿಮಿತ್ತಂ- ಕಾರಣವಾಗಿ ಉಳ್ಳಂಥಾದ್ದು || ೧೪ ||

ಅವತರಣಿಕೆ ‖ ಈ ಮತಿಜ್ಞಾನವು ಇಂದ್ರಿಯಾನಿಂದ್ರಿಯ ಭೇದಗಳಿಂದ ಆರುಪ್ರಕಾರವಾಗಿ ಹೇಳಲ್ಪಟ್ಟಿತು. ಈ ಆರುವಿಧಗಳಲ್ಲಿ ಒಂದೊಂದುವಿಧಕ್ಕೆ ಉಂಟಾಗತಕ್ಕ ಭೇದವನ್ನು ಹೇಳುತ್ತಾರೆ ‖

ಸೂತ್ರ ‖ ಅವಗ್ರಹೇಹಾವಾಯಧಾರಣಾಃ ‖ ೧೫ ‖

ಅ ‖ ಅವಗ್ರಹ-ಸಂನಿಧಾನಸಮನಂತರ ಆದ್ಯಗ್ರಹಣರೂಪ ಅವಗ್ರಹವು, ಈಹ-ಅವಗ್ರಹ ದೃಷ್ಟವಾದದ್ದನ್ನು ತಿಳಿಯಬೇಕೆಂದು ಅಪೇಕ್ಷಿಸುವದು ಈಹವು, ಅವಾಯ-ಅದನ್ನು ಪರಿಶೀಲನೆಮಾಡುವದು ಅವಾಯವು, ಧಾರಣ-ಅದುಇತ್ಥಂಎಂದು ನಿರ್ಧರಿಸುವದು ಧಾರಣೆಯು ‖ ೧೫ ‖

ತಾ‖ತಿಳಿಯತಕ್ಕ ಸ್ಥಳದಲ್ಲಿದ್ದ ತಮ್ಮ ತಮ್ಮ ವಿಷಯಗಳನ್ನು ಅಂದರೆ, ಮನುಷ್ಯನು ಎಂಬುವದು ಮೊದಲಾದ ಕೆಲವು ವಿಶೇಷಗಳು ಸೇರಿಸಿ ತಿಳಿಯುವ ಅವಗ್ರಹವು. ಅವಗ್ರಹದಿಂದ ಮನುಷ್ಯನೆಂದುತಿಳಿದ ಈತನು ಕರ್ಣಾಟಕ ನಾಗಬಹುದು ಎಂದು ತಿಳಿಯುವದು ಈಹವು. ಈತನು ಕರ್ಣಾಟಕನೆಂದು ಊಹಿಸಿದ್ದವನ ನಡತೆಮಾತುಗಳಿಂದ ಇವನುಕರ್ಣಾಟಕನೇಯೆಂದು ನಿಶ್ಚಯಿಸುವದು ಅವಾಯವು. ಕಾಲಾಂತರದಲ್ಲೂಕೂಡ ನಿಶ್ಚಯಿಸಲ್ಪಟ್ಟದ್ದ ಅಭಿಪ್ರಾಯವನ್ನು ನೆನಸುವವಕ್ಕೆ ಕಾರಣವಾದ ಸಂಸ್ಕಾರರೂಪವಾದದ್ದು ಧಾರಣೆಯುಎಂಬಇವುಗಳು ಮತಿಜ್ಞಾನಭೇದಗಳು. ಆದ್ದರಿಂದ ೬ × ೪ = ೨೪ ಭೇದಗಳಾದವು ‖೧೫‖

ಅ ‖ ಈ ೨೪ ಪ್ರಕಾರಗಳಲ್ಲಿಯೂ, ಒಂದೊಂದು ಹನ್ನೆರಡು ವಿಧವಾಗುತ್ತೆಂದು ಹೇಳುತ್ತಾರೆ.

ಸೂ ‖ ಬಹುಬಹುವಿಧಕ್ಷಿಪ್ರಾನಿಸೃತಾನುಕ್ತಧ್ರುವಾಣಾಂ ಸೇತರಾಣಾಂ ‖ ೧೬ ‖

ಟೀ‖ ಸೇತರಾಣಾಂ-ತಮ್ಮ ಪ್ರತಿಪಕ್ಷಗಳೊಡನೆಕೂಡಿದಂಥ, (೧)ಬಹು-ಒಂದುಜಾತಿಯಲ್ಲಿ ಅನೇಕಭೇದವನ್ನು ತಿಳಿಯುವಬಹುವು, (೨) ಇದರಪ್ರತಿಪಕ್ಷ, ಏಕ-ಒಂದುಭೇದವನ್ನುತಿಳಿಯುವ ಏಕವು. (೩) ಬಹುವಿಧ-ಅನೇಕಜಾತಿಗಳನ್ನು ತಿಳಿಯುವ ಬಹುವಿಧವು. (೪) ಏಕವಿಧಂ-ಒಂದುಜಾತಿಗೆಸಂಬ ವೊಂದನ್ನು ತಿಳಿಯುವದು ಏಕವಿಧವು. ( ೫ ) ಕ್ಷಿಪ್ರ-

[ ೨ ]

ಜಾಗ್ರತೇತಿಳಿಯುವ ಕ್ಷಿಪ್ರವು. (೬) ಅಕ್ಷಿಪ್ರ-ಮೆಲ್ಲಗೆತಿಳಿಯುವ ಅ ಕ್ಷಿಪ್ರವು, (೭) ಅನಿಸ್ಸೃತ-ಹೊರಗೆಹೊರಡದೇಇರುವದನ್ನು ತಿಳಿಯು ವಅನಿಸ್ಸೃತವು. (೮) ನಿಸ್ಸೃತ-ಹೊರಗೆಹೊರಟದ್ದು ತಿಳಿಯುವ ನಿಸ್ಸೃ ತವು. (೯) ಅನುಕ್ತ - ನೇಮಿಸಲ್ಪಡದೇಯಿರುವದು ಅನುಕ್ತ ವು. (೧೦) ಉಕ್ತಂ - ತನ್ನವಿಷಯತಿಳಿಯುವದುಉಕ್ತವು. (೧೧) ಧ್ರುವಾಣಾಂ- ಸ್ಥಿರವಾಗಿರುವ ಸ್ತಂಭಾದಿಗಳನ್ನು ತಿಳಿಯುವ ಧ್ರು ವವು. (೧೨) ಅಧ್ರುವ-ಸ್ಥಿರವಾಗಿಇಲ್ಲದ ಮಿಂಚುವೊಡಲಾದ್ದನ್ನು ತಿಳಿಯುವ ಅಧ್ರುವವು. ಆದ್ದರಿಂದ ಬಹು, ಏಕ, ಬಹುವಿಧ, ಏಕ ವಿಧ, ಕ್ಷಿಪ್ರ, ಅಕ್ಷಿಪ್ರ, ಅನಿಸ್ಸೃತ, ನಿಸ್ಸೃತ, ಅನುಕ್ತ, ಉಕ್ತ, ಧ್ರುವ,ಅ ಧ್ರುವ ಎಂಬ ಈ ೧೨ ನ್ನು ಪೂರ್ವದಲ್ಲಿಹೇಳಿದ ೨೪ ವಿಧಗಳಿಗೂ ಸೇರಿ ಸಿದರೆ ೧೨×೨೪=೨೮೮ ವಿಧಗಳಾಗುತ್ತವೆ ॥ ೧೬ ॥

ಅ॥ ಯಾವದರ ಬಹ್ವಾದಿಗಳಿಗೆ ಅವಗ್ರಹಾದಿಗಳು ಬರುತ್ತೋ ಅದನ್ನು ಹೇಳುತ್ತಾರೆ

ಸೂ ॥ ಅರ್ಥಸ್ಯ ॥ ೧೭ ॥

ಅ ॥ ಅರ್ಥಸ್ಯ-ಪದಾರ್ಥಕ್ಕೆ, ಯಿಾಹಿಂದೆಹೇಳಿದ ಯಿನ್ನೂರುತೊಂಭ ತ್ತೆಂಟು ಭೇದಗಳುಆಗುತ್ತಿವೆ-ಚಕ್ಷುರಾದಿವಿಷಯವು ಅರ್ಥಎಂಬುವದು॥

ಅ ॥ ವ್ಯಂಜನಾವಗ್ರಹವನ್ನು ಹೇಳುತ್ತಾರೆ.

ಸೂ ॥ ವ್ಯಂಜನಸ್ಯಾವಗ್ರಹಃ ॥ ೧೮ ॥

ಅರ್ಥ ॥ ವ್ಯಂಜನಸ್ಯ-ಶಬ್ದಾದಿಗಳಿಂದ ಉಂಟಾದ ಅವ್ಯಕ್ತವಿಷಯವು ವ್ಯಂಜನವೆಂಬುವದು. ಅದಕ್ಕೆ, ಅವಗ್ರಹಃ-ಅವಗ್ರಹವಂದುಮಾತ್ರವೇ ಯೋಗ್ರಾಹಕವಾಗುತ್ತಿದೆ, ಈಹವೊಡಲಾದವುಗಳು ಆಗುವದಿಲ್ಲ ॥೧೮॥

ಅ॥ ಕಣ್ಣಿಗೂ ಮನಸ್ಸಿಗೂ ವ್ಯಂಜನಾವಗ್ರಹ ಇಲ್ಲವೆಂದು ಹೇಳುತ್ತಾರೆ.

ಸೂ ॥ ನಚಕ್ಷುರನಿಂದ್ರಿಯಾಭ್ಯಾಂ ॥ ೧೯ ॥

ಟೀಕು ॥ ಚಕ್ಷುರನಿಂದ್ರಿಯಾಭ್ಯಾಂ-ಕಣ್ಣು ಮನಸ್ಸು ಇ ವುಗಳದೆಶೆಯಿಂದ, ನ-ವ್ಯಂಜನಾವಗ್ರಹ ಆಗುವದಿಲ್ಲ. ಆದ್ದರಿಂದ ಕ ಣ್ಣು ಮನಸ್ಸು ಇವುಗಳದೆಶೆಯಿಂದ ಹುಟ್ಟತಕ್ಕ ಅವಗ್ರಹಗಳು ಹನ್ನೆರಡು ವಿಧವಾಗುವದಿಲ್ಲವಾದ್ದರಿಂದ, ಸ್ಪರ್ಶನ – ರಸನ – ಘ್ರಾಣ – ಶ್ರೋತ್ರ- ಎಂಬ ೪ ಇಂದ್ರಿಯಗಳಿಗೂ ಹಿಂದೆಹೇಳಿದ

ಬಹ್ವಾದಿ ೧೨ವಿಧಅವಗ್ರಹಗಳು ಆಗುತ್ತಿವೆ.ಆದ್ದರಿಂದ(೪×೧೨=)೪೮ಆ ಯಿತು ಯಿೂ೪೮ ನ್ನು ಹಿಂದೆಹೇಳಿದ ೨೮೮ ವಿಧಗಳಿಗೆ ಸೇರಿಸಿದರೆ ೩೩೬ ಮತಿಜ್ಞಾನಭೇದವಾಗುತ್ತಿವೆ ‖ ೧೯ ‖

ಶ್ರು ತ ಜ್ಞಾ ನಾ ಧಿ ಕ ರ ಣ ೦.

ಅ ‖ ಶ್ರುತಜ್ಞಾನಭೇದವನ್ನು ಹೇಳುತ್ತಾರೆ.

ಸೂ ‖ ಶ್ರುತಂಮತಿಪೂರ್ವಂದ್ವ್ಯನೇಕದ್ವಾದಶಭೇದಂ ‖ ೨೦‖

ಅ ‖ ಮತಿಪೂರ್ವಂ-ಮತಿಜ್ಞಾನಪುರಸ್ಸರವಾದಂಥಾ, ಶ್ರುತಂ-ಶ್ರುತ ಜ್ಞಾನವು, ದ್ವಿ-ಭಾವಶ್ರುತ, ದ್ರವ್ಯಶ್ರುತ ಅಥವಾ ಅಂಗಬಾಹ್ಯ, ಅಂ ಗಪ್ರವಿಷ್ಟ, ಅಥವಾ ಅನಕ್ಷರಾತ್ಮಕ ಅಕ್ಷರಾತ್ಮಕ ವೆಂಬ ಎರಡುಭೇದ ವು, ಅನೇಕ-ಬಹಳವು, ದ್ವಾದಶ-ಹನ್ನೆರಡು, ಭೇದಂ-ವಿಕಲ್ಪವುಳ್ಳಂ ಥಾದ್ದು ‖ ೨೦ ‖

ತಾ ‖ ಶ್ರುತಜ್ಞಾನವೆಂದರೆ ಮತಿಜ್ಞಾನದಿಂದ ತಿಳದುಕೊಂಡಂ ಥಾದ್ದನ್ನು ಆಲೋಚಿಸುವದ್ದರಿಂದ ತನ್ನಲ್ಲಿ ಹುಟ್ಟತಕ್ಕ ವಿಶೇಷಜ್ಞಾನ ವು ಶ್ರುತಜ್ಞಾನವೆನ್ನಿಸಿಕೊಳ್ಳುತ್ತದೆ. ಈ ಶ್ರುತಜ್ಞಾನವು ೧೨ ಪ್ರ ಕಾರವು. ೧ ಆಚಾರಾಂಗ, ೨ ಸೂತ್ರಕೃತಾಂಗ, ೩ ಸ್ಥಾನಾಂಗ, ೪ ಸ ಮವಾಯಾಂಗ, ೫ ವ್ಯಾಖ್ಯಾಪ್ರಜ್ಞಪ್ತ್ಯಂಗ, ೬ ಜ್ಞಾತೃಧರ್ಮಕಥಾಂ ಗ, ೭ ಉಪಸಕಾಧ್ಯಯನಾಂಗ, ೮ ಅಂತಕೃದ್ದಶಾಂಗ, ೯ ಅನುತ್ತರೋ ಪಪಾದಿಕದಶಾಂಗ, ೧೦ ಪ್ರಶ್ನವ್ಯಾಕರಣಾಂಗ, ೧೧ ವಿಪಾಕಸೂತ್ರಾಂಗ, ೧೨ ದೃಷ್ಟಿವಾದಾಂಗ. ವೆಂಬ ೧೨ ದ್ವಾದಶಾಂಗವೇದವು ‖ ೧೨ ನೇ ಅಂಗವಾದ ದೃಷ್ಟಿವಾದಾಂಗವು= ೧ ಪರಿಕರ್ಮ । ೨ ಸೂತ್ರ । ೩ ಪ್ರಥ ಮಾನುಯೋಗ । ೪ ಪೂರ್ವಗತ । ೫ ಚೂಳಿಕ ‖ ಎಂದು ಐದುಭೇದವು ‖ ಪರಿಕರ್ಮವು= ೧ ಚಂದ್ರಪ್ರಜ್ಞಪ್ತಿ । ೨ ಸೂರ್ಯಪ್ರಜ್ಞಪ್ತಿ । ೩ ಜಂ ಬೂದ್ವೀಪಪ್ರಜ್ಞಪ್ತಿ । ೪ ದ್ವೀಪಸಾಗರಪ್ರಜ್ಞಪ್ತಿ । ೫ ವ್ಯಾಖ್ಯಾಪ್ರಜ್ಞ ಪ್ತಿ । ಎಂದು ೫ ಭೇದವು ‖ ಸೂತ್ರ ೮೮ ಪ್ರಕಾರವು ‖ ಪ್ರಥಮಾನು ಯೋಗ ಒಂದೇಯೆ ‖ ಪೂರ್ವಗತವು= ೧ ಉತ್ಪಾತಪೂರ್ವೆ । ೨ ಅಗ್ರ ಹಣೀಯಪೂರ್ವೆ । ೩ ವೀರ್ಯಾನುಪ್ರವಾದ । ೪ ಅಸ್ತಿನಾಸ್ತಿಪ್ರವಾದ । ೫ ಜ್ಞಾನಪ್ರವಾದ । ೬ ಸತ್ಯಪ್ರವಾದ । ೭ ಆತ್ಮಪ್ರವಾದ । ೮ ಕರ್ಮ ಪ್ರವಾದ । ೯ ಪ್ರತ್ಯಾಖ್ಯಾನನಾಮಧೇಯ । ೧೦ ವಿದ್ಯಾನುಪ್ರವಾದ ।

೧೧ ಕಲ್ಯಾಣನಾಮಧೇಯ | ೧೨ ಪ್ರಾಣಾವಾಯ | ೧೩ ಕ್ರಿಯಾವಿಶಾಲ | ೧೪ ಲೋಕಬಿಂದುಸಾರ || ಎಂದು ೧೪ ಭೇದಗಳು || ಚೂಳಿಕೆಯು= ೧ ಸ್ಥಲತಗ | ೨ ಜಲಗತ | ೩ ಮಾಯಾಗತ | ೪ ರೂಪಗತ | ೫ ಆಕಾಶಗತ || ಎಂದು ೫ ಭೇದಗಳು || ಅಂಗಬಾಹ್ಯವಾದ ಯಿತರಗ್ರಂಥದಿಂದ ಹುಟ್ಟತಕ್ಕ ಶ್ರುತಜ್ಞಾನವು ಅನೇಕಪ್ರಕಾರವಾದಂಥಾದ್ದು || ೨೦ ||

ಅ ವ ಧಿ ಜ್ಞಾ ನಾ ಧಿ ಕ ರ ಣ ಂ.

ಅ || ಅವಧಿಜ್ಞಾನವ ಬಹಿರಂಗ ಕಾರಣಸ್ವರೂಪ ಸ್ವಾಮಿತ್ವವಿಶೇಷವನ್ನು ಹೇಳುತ್ತಾರೆ.

ಸೂ || ಭವಪ್ರತ್ಯಯೋಽವಧಿರ್ದೇವನಾರಕಾಣಾಂ || ೨೧ ||

ಅ || ಭವಪ್ರತ್ಯಯಃ-ಭವ-ಆಯುರ್ನಾಮ ಕರ್ಮೋದಯದಿಂದ ಆತ್ಮನ ನರನಾರಕಾದಿಪರ್ಯಾಯವೇ ಭವವೆಂಬುವದು, ಆಭವವೆ-ಪ್ರತ್ಯಯಃ-ಕಾರಣವಾಗಿ ಉಳ್ಳಂಥ,ಅವಧಿಃ-ಅವಧಿಜ್ಞಾನವು,ದೇವನಾರಕಾಣಾಂ-ದೇವತೆಗಳು ನಾರಕರು ಇವರುಗಳಿಗೆ, ಅಂದರೆ ದೇವನಾರಕರುಗಳಿಗೆ, ಭವಪ್ರತ್ಯಯಾವಧಿಜ್ಞಾನವಾಗುತ್ತೆ ಎಂದು ತಾತ್ಪರ್ಯವು || ೨೧ ||

ಅ|| ಕ್ಷಯೋಪಶಮ ನಿಮಿತ್ತದಿಂದ ಆಗುವ ಅವಧಿಜ್ಞಾನದಭೇದವನ್ನು ಅಧಿಕಾರಿಯನ್ನು ಹೇಳುತ್ತಾರೆ.

ಸೂ || ಕ್ಷಯೋಪಶಮನಿಮಿತ್ತಃಷಡ್ವಿಕಲ್ಪಃಶೇಷಾಣಾಂ || ೨೨||

ಅರ್ಥ || ಶೇಷಾಣಾಂ-ಉಳಿದ ತಿರ್ಯ್ಯಗ್ಮನುಷ್ಯರುಗಳಿಗೆ, ಕ್ಷಯೋಪಶಮನಿಮಿತ್ತಃ-ಕ್ಷಯ-ಕರ್ಮ್ಮದ ಕ್ಷಯವು, ಉಪಶಮ-ಕರ್ಮದ ಉಪಶಾಂತಿಯು, ನಿಮಿತ್ತಃ-ಕಾರಣವಾಗಿವುಳ್ಳ ಅವಧಿಜ್ಞಾನವು, ಷಡ್ವಿಧಃ-ಆರುಪ್ರಕಾರವು, ಯಾವವೆಂದರೆ. ೧ ಅನುಗಾಮಿ, ೨ ಅನನುಗಾಮಿ, ೩ ವರ್ಧಮಾನ, ೪ ಹೀಯಮಾನ, ೫ ಅವಸ್ಥಿತ, ೬ ಅನವಸ್ಥಿತ || ಸೂರ್ಯನಪ್ರಕಾಶದಂತೆ ಎಲ್ಲಿಗೆಹೋದರೂಕೂಡಾ ಹೋಗುವದು ಅನುಗಾಮಿಯೆಂಬುವದು | ಮುಗ್ಧಪುರುಷ ಕೇಳಿದಮಾತಿನಂತೆಅಲ್ಲೇಯಿರುವದು ಅನನುಗಾಮಿಯೆಂಬುವದು | ಶುಕ್ಲಪಕ್ಷದ ಚಂದ್ರನಂತೆ ಸಮ್ಯಗ್ದರ್ಶನಾದಿ ವಿಶುದ್ಧಪರಿಣಾಮದಿಂದ ಹುಟ್ಟಿ ಅಲ್ಲಿಂದ ಅಸಂಖ್ಯಾತಲೋಕದವರಿಗೂ ನಿರಂತರಹೆಚ್ಚುವುದು ವರ್ಧಮಾನವೆಂಬುವದು | ಕೃಷ್ಣಪಕ್ಷದ ಚಂದ್ರ

ನಂತೆ ಸಮ್ಯಗ್ದರ್ಶನಾದಿ ಗುಣಗಳಹಾನಿ ಸಂಕ್ಲೇಶಪರಿಣಾಮದ ವೃದ್ಧಿ ಯೋಗದಿಂದ ಕಡಮೆಯಾಗುವಂಥ ಅವಧಿಜ್ಞಾನವು ಹೀಯಮಾನವೆಂಬುವದು। ಸೂರ್ಯಬಿಂಬದಂತೆ ಸಮ್ಯಗ್ದರ್ಶನಾದಿ ಗುಣಸ್ಥಾನದಲ್ಲಿಹುಟ್ಟ ಕಮ್ಮಿಯಾಗದೆ ಕೇವಲಜ್ಞಾನೋತ್ಪತ್ತಿವರಿಗೂ ಇರುವದು ಅವಸ್ಥಿತವೆಂಬುವದು। ವಾಯುವೇಗಪ್ರೇರಿತಸಮುದ್ರದ ತೆರೆಯಂತೆ ಸಮ್ಯಗ್ದರ್ಶನಾದಿ ಗುಣಹಾನಿವೃದ್ಧಿಯಿಂದ ಕಡಮೆಯಾಗುವದು ಹೆಚ್ಚುವದು ಇದಕ್ಕೆ ಅನವಸ್ಥಿತವೆಂದು ಹೆಸರು ॥ ೨೨ ॥

ಮ ನಃ ಪ ರ್ಯ ಯ ಜ್ಞಾ ನಾ ಧಿ ಕ ರ ಣ ೦.

ಅ॥ ಮನಃಪರ್ಯಯಜ್ಞಾನ ಭೇದವನ್ನು ಹೇಳುತ್ತಾರೆ.

ಸೂ ॥ ಋಜುವಿಪುಲಮತಿಮನಃಪರ್ಯಯಃ ॥ ೨೩ ॥

ಅ ॥ ಋಜುವಿಪುಲಮತಿ ಮನಃಪರ್ಯಯಃ-ಋಜು-ವಕ್ರವಿಲ್ಲದಪರಮನೋವಾಕ್ಕಾಯಗತಾರ್ಥವನ್ನು ತಿಳಿಯುವ ಋಜುಮತಿಯು, ವಿಪುಲಮತಿ-ವಕ್ರಾವಕ್ರ ಪರಮನೋವಾಕ್ಕಾಯಗತಾರ್ಥವನ್ನು ತಿಳಿಯುವ ವಿಪುಲಮತಿಯು, ಎಂದು, ಮನಃಪರ್ಯಯಃ-ಮನಃಪರ್ಯಯಜ್ಞಾನವು (ಎರಡುವಿಧವು) ॥ ೨೩ ॥

ಅ ॥ ಈ ಹಿಂದೆಹೇಳಿದ ಎರಡುಕ್ಕೂ ವಿಶೇಷವನ್ನು ಹೇಳುತ್ತಾರೆ.

ಸೂ ॥ ವಿಶುದ್ಧ್ಯಪ್ರತಿಪಾತಾಭ್ಯಾಂತದ್ವಿಶೇಷಃ ॥ ೨೪ ॥

ಅ ॥ ವಿಶುದ್ಧ್ಯಪ್ರತಿಪಾತಾಭ್ಯಾಂ-ವಿಶುದ್ಧಿ-ಆವರಣದ ಕ್ಷಯ ಉಪಶಮದಿಂದ ಆದ ಆತ್ಮಪ್ರಸಾದವು, ವಿಶುದ್ಧಿ ಎಂಬುವದು, ಅಪ್ರತಿಪಾತಾಭ್ಯಾಂ-ಕೇಡಿನಿಂದಇಲ್ಲದೇಯಿರುವ ಅಪ್ರತಿಪಾತ ಎಂಬುವದು ಈ ೨ ಗಳ ದೆಶೆಯಿಂದ, ತದ್ವಿಶೇಷಃ-ಆ ೨ ಭೇದಗಳುಆಗುತ್ತೆ ॥ ೨೪ ॥

ಅ ॥ ಅವಧಿ ಮನಃಪರ್ಯಯ ಜ್ಞಾನಗಳಿಗೆ ಭೇದವನ್ನು ಹೇಳುತ್ತಾರೆ.

ಸೂ ॥ ವಿಶುದ್ಧಿಕ್ಷೇತ್ರಸ್ವಾಮಿವಿಷಯೇಭ್ಯೋವಧಿಮನಃ ಪರ್ಯಯೋಃ ॥ ೨೫ ॥

ಅ ॥ ವಿಶುದ್ಧಿಕ್ಷೇತ್ರಸ್ವಾಮಿವಿಷಯೇಭ್ಯಃ- ವಿಶುದ್ಧಿ-ಪ್ರಸಾಧನವು, ಕ್ಷೇತ್ರ-ಕ್ಷೇತ್ರವು, ಸ್ವಾಮಿ-ಪ್ರಯೋಕ್ತೃವು, ವಿಷಯೇಭ್ಯಃ-ವಿಷಯ

ವುಎಂಬ ಇವುಗಳದೆಶೆಯಿಂದ, ಅವಧಿಮನಃಪರ್ಯಯೋಃ-ಅವಧಿಜ್ಞಾನ ಮನಃಪರ್ಯಯಜ್ಞಾನಗಳೆಂಬ ಎರಡಕ್ಕು ಪರ್ಯಾಯಗಳಾಗುತ್ತೆ ||

ಅ || ಮತಿಶ್ರುತ ಜ್ಞಾನಗಳಿಗೆ ನಿಬಂಧವನ್ನು ಹೇಳುತ್ತಾರೆ.

ಸೂ || ಮತಿಶ್ರುತಯೋರ್ನಿಬಂಧೋದ್ರವ್ಯೇಷ್ವಸರ್ವಪ ರ್ಯಾಯೇಷು || ೨೬ ||

ಟೀ || ಅಸರ್ವಪರ್ಯಾಯೇಷು-ಸರ್ವಪರ್ಯಾಯಗಳು ಅಲ್ಲದೇಯಿ ರುವಂಥ, ದ್ರವ್ಯೇಷು-ದ್ರವ್ಯಂಗಳಲ್ಲಿ, ಮತಿಶ್ರುತಯೋಃ-ಮತಿಜ್ಞಾನ ಶ್ರುತಜ್ಞಾನಗಳಿಗೆ, ನಿಬಂಧಃ-ವಿಷಯನಿಯಮವಾಗುವದು || ಅಂದರೆ, ಮತಿಜ್ಞಾನ ಶ್ರುತಜ್ಞಾನಗಳೆರಡು ಜೀವಾದಿಷಡ್ದ್ರವ್ಯದಲ್ಲಿ ಕೆಲವು ಪ ರ್ಯಾಯಗಳನ್ನು ತಿಳಿಯುತ್ತಿದೆ || ೨೬ ||

ಅ || ಅವಧಿ ಜ್ಞಾನವಿಷಯವನ್ನು ಹೇಳುತ್ತಾರೆ.

ಸೂ || ರೂಪಿಷ್ವವಧೇಃ || ೨೭ ||

ಟೀ || ರೂಪಿಷು-ಅಸರ್ವದ್ರವ್ಯ ಪರ್ಯಾಯವಾದ ದ್ರವ್ಯಂಗಳಲ್ಲಿ, ಅವಧೇಃ-ಅವಧಿಜ್ಞಾನಕ್ಕೆ || ವಿಷಯನಿಬಂಧನೆಯಾಗುವದು || ಅಂದರೆ, ಅವಧಿಜ್ಞಾನವು ಪುದ್ಗಲದ್ರವ್ಯಗಳಲ್ಲಿ ಪುದ್ಗಲಸಂಬಂಧವಾದ ಜೀವದ್ರ ವ್ಯಗಳಲ್ಲಿ ಕೆಲವು ಪರ್ಯಾಯಗಳನ್ನು ತಿಳಿಯುತ್ತೆ. ಮತ್ತು ಪರಮಾಣು ದ್ರವ್ಯಪರ್ಯಂತರ ತಿಳಿಯುತ್ತೆ || ೨೭ ||

ಅ || ಮನಃಪರ್ಯಯಕ್ಕೆ ವಿಷಯನಿಬಂಧವನ್ನು ಹೇಳುತ್ತಾರೆ.

ಸೂ || ತದನಂತಭಾಗೇ ಮನಃಪರ್ಯಯಸ್ಯ || ೨೮ ||

ಟೀ || ತದನಂತಭಾಗೇ-ಆ ಅವಧಿಜ್ಞಾನವಿಷಯಭೂತ ಸಮಸ್ತಪು ದ್ಗಲಗಳ ಅನಂತಭಾಗದಲ್ಲಿ, ಮನಃಪರ್ಯಯಸ್ಯ-ಮನಃಪರ್ಯಯಜ್ಞಾ ನಕ್ಕೆ ವಿಷಯನಿಬಂಧನೆಯು ಆಗುವದು || ೨೮ ||

ಕೇ ವ ಲ ಜ್ಞಾ ನಾ ಧಿ ಕ ರ ಣ ವು

ಅ || ಕೇವಲ ಜ್ಞಾನಕ್ಕೆ ವಿಷಯನಿಬಂಧನೆಯನ್ನು ಹೇಳುತ್ತಾರೆ.

ಸೂ || ಸರ್ವದ್ರವ್ಯಪರ್ಯಾಯೇಷುಕೇವಲಸ್ಯ || ೨೯ ||

ಟೀ || ಸರ್ವದ್ರವ್ಯಪರ್ಯಾಯೇಷು-ಸರ್ವದ್ರವ್ಯ-ಸಮಸ್ತದ್ರವ್ಯಗ ಳಲ್ಲಿ, ಪರ್ಯಾಯೇಷು-ಸಮಸ್ತಪರ್ಯಾಯಗಳಲ್ಲಿ, ಕೇವಲಸ್ಯ-ಕೇವ ಲಜ್ಞಾನಕ್ಕೆ ವಿಷಯನಿಬಂಧನೆಯು ಆಗುತ್ತೆ, ಅಂದರೆ ಕೇವಲಜ್ಞಾನವು

ಸಮಸ್ತವಾದ ಜೀವಾದಿಗಳನ್ನೂ ಸಮಸ್ತವಾದ ನರನಾರಕಾದಿಪರ್ಯಾಯಗಳನ್ನೂ, ಭೂತಾನಾಗತವರ್ತಮಾನಕಾಲಗಳಲ್ಲಿ ಉಂಟಾದ ತ್ರಿಲೋಕದಲ್ಲಿರುವ ಸಮಸ್ತವಸ್ತುಗಳನ್ನೂ ಕ್ರಮಕರಣವ್ಯವಧಾನರಹಿತವಾಗಿಯೂ, ಯುಗಪತ್ತಾಗಿಯೂ, ತಿಳಿಯುತ್ತದೆ ||೨೯||

ಅ || ಒಂದಾತ್ಮನಲ್ಲಿ ಒಂದೇಸಾರಿ ಎಷ್ಟು ಜ್ಞಾನಗಳು ಸಂಭವಿಸುತ್ತವೆ ಎಂಬುವದನ್ನು ಹೇಳುತ್ತಾರೆ.

ಸೂ || ಏಕಾದೀನಿಭಾಜ್ಯಾನ್ಯುಗಪದೇಕಸ್ಮಿನ್ನಾಚತುರ್ಭ್ಯಃ ।

ಟೀ || ಏಕಸ್ಮಿನ್-ಒಂದು ಜೀವನಲ್ಲಿ, ಯುಗಪತ್-ಏಕಕಾಲದಲ್ಲಿ, ಏಕಾದೀನಿ-ಒಂದುಜ್ಞಾನವೇ ಮೊದಲಾದಂಥಾವುಗಳು, ಆಚತುರ್ಭ್ಯಃ-ಆ ನಾಲ್ಕು ಜ್ಞಾನಪರ್ಯಂತರದಲ್ಲೂ, ಭಾಜ್ಯಾನಿ-ಭಾಗಿಸುವದಕ್ಕೆ ಯೋಗ್ಯವಾದಂಥಾವುಗಳು || ಅಂದರೆ ಒಂದೆಂಬುವದು, ಕೇವಲಜ್ಞಾನವು । ಎರಡೆಂಬುವದು-ಮತಿಶ್ರುತಜ್ಞಾನಗಳು । ಮೂರೆಂಬುವದು-ಮತಿಶ್ರುತಿ ಅವಧಿಗಳು । ನಾಲ್ಕೆಂಬುವದು-ಮತಿಶ್ರುತಿ ಅವಧಿಮನಃಪರ್ಯಯಗಳು । ಕೇವಲಜ್ಞಾನವು ಅಸಹಾಯಜ್ಞಾನವಾದ್ದರಿಂದ ಈವುಗಳೊಂದರಲ್ಲಿಯೂ ಕೂಡಿರುವದಿಲ್ಲ ಆದ್ದರಿಂದ ಅದುಬಂದೇಯೆ || ೩೦ ||

ಅ || ಮತ್ಯಾದಿ ೩ ಜ್ಞಾನಗಳು ವಿಪರೀತ ವಾಗುತ್ತೆಂದು ಹೇಳುತ್ತಾರೆ.

ಸೂ || ಮತಿಶ್ರುತಾವಧಯೋ ವಿಪರ್ಯಯಶ್ಚ || ೩೧ ||

ಟೀ || ಮತಿಶ್ರುತಾವಧಯಃ-ಮತಿಶ್ರುತಿಅವಧಿಜ್ಞಾನಗಳು, ವಿಪರ್ಯಯಃ- ಮಿಥ್ಯಾತ್ವಾನಂತಾನುಬಂಧಿಗಳುದಯದಿಂದ, ಕುಮತಿ-ಕುಶ್ರುತಿ-ವಿಭಂಗ-ಗಳೆಂಬ ವಿಪರ್ಯಯವು. ಚ-ಚಶಬ್ದದಿಂದ ಮೇಲಿನಕರ್ಮಗಳ ಉದಯಾಭಾವದಿಂದ ವಿಪರೀತವಿಲ್ಲದೇ ಇರುವಂಥಾವುಗಳೂ ಕೂಡ ಆಗುತ್ತವೆ || ೩೧ ||

ಅ || ಮತಿಶ್ರುತಾವಧಿ ಗಳಿಗೂ, ಅವುಗಳ ವಿಪರ್ಯಯವಾದ ಕುಮತಿಕುಶ್ರುತಿ ವಿಭಂಗ ಜ್ಞಾನಗಳಿಗೂ ವ್ಯತ್ಯಾಸವನ್ನು ಹೇಳುತ್ತಾರೆ.

ಸೂ || ಸದಸತೋರವಿಶೇಷಾದ್ಯದೃಚ್ಛೋಪಲಬ್ಧೇರುನ್ಮತ್ತವತ್ || ೩೨ ||

ಟೀ || ಸದಸತೋಃ-ಸತ್-ಅಸ್ತಿತ್ವದಲ್ಲೂ, ಅಸತೋಃ-ನಾಸ್ತಿತ್ವದ

ಲ್ಲಿಯೂ, ಅವಿಶೇಷಾತ್-ವಿಶೇಷವಿಲ್ಲದೇಯಿರುವದರದೆಶೆಯಿಂದ, ಯದೃ ಚ್ಛೋಪಲಬ್ಧೇಃ-ಯದೃಚ್ಛ-ಸ್ವೇಚ್ಛೆಯಿಂದ, ಉಪಲಬ್ಧೇಃ-ಕೈಕೊಳ್ಳುವ ದರದೆಶೆಯಿಂದ, ಉನ್ಮತ್ತವತ್-ಹುಚ್ಚನೋಪಾದಿಯಲ್ಲಿ ವಿಪರೀತವಾಗು ವದು. ಅಂದರೆ, ಪಿತ್ತೋದಯದಿಂದ ವ್ಯಾಕುಲವಾದ ಬುದ್ಧಿಯುಳ್ಳವ ನು ತಾಯನ್ನುಹೆಂಡತಿಯಾಗಿಯೂ,ಹೆಂಡತಿಯನ್ನು ತಾಯಿಯಾಗಿಯೂ ತಿಳಿಯುತ್ತಾನೆ. ಆಕಸ್ಮಾತ್ತಾಗಿ ತಾಯಿಯನ್ನು ತಾಯಿಯಾಗಿಯೂ,ಹೆಂ ಡತಿಯನ್ನು ಹೆಂಡತಿಯಾಗಿಯೂ ತಿಳಿಯುವಂತೆ, ಕುಮತಿಮೊದಲಾದ ಜ್ಞಾನಗಳು ವಿಪರೀತವು ಆಗುತ್ತವೆ || ಸಮ್ಯಜ್ಞಾನವು ಯಥಾವತ್ತಾಗಿ ಯೇತಿಳಿಯುವದು || ೩೨ ||

ಅ || ನಯಗಳನ್ನು ಹೇಳುತ್ತಾರೆ.

ಸೂ || ನೈಗಮಸಂಗ್ರಹವ್ಯವಹಾರಋಜುಸೂತ್ರಶಬ್ದ
ಸಮಭಿರೂಢೈವಂಭೂತಾನಯಾಃ || ೩೩ ||

ಟೀ || ನೈಗಮಸಂಗ್ರಹವ್ಯವಹಾರಋಜುಸೂತ್ರಶಬ್ದಸಮಭಿರೂಢೈ ವಂಭೂತಾನಯಾಃ-ನೈಗಮ-ನಿಷ್ಪನ್ನವಾಗದೇಇರುವ ಅರ್ಥಗಳನ್ನು ಸಂಕಲ್ಪಮಾತ್ರದಿಂದ ಗ್ರಹಿಸುವದು (ಅಂದರೆ ಹಿಂದೆಆದದ್ದು, ಮುಂ ದೆ ಆಗುವದು, ಈಗ ನಡೆಯುವದು ಇದನ್ನ ಆಗಿರುವಂತಾಗಿ ಹೇ ಳುವದು.) ನೈಗಮನಯವು. || ಉದಾಹರಣೆ || ಕೆರೆಗೆನೀರುತರು ವದಕ್ಕೆ ಹೋಗುವವನನ್ನು ಕುರಿತು ಮತ್ತೊಬ್ಬನು ಏನುಮಾಡುತ್ತೀ ಯೆ ಎಂದುಕೇಳಿದ್ದಕ್ಕೆ ಆತನು ಅಡಿಗೆಮಾಡುತ್ತೇನೆಂದು ಹೇಳಿದನು- ಆ ಸಮಯದಲ್ಲಿ ಅನ್ನಮಾಡುವ ಪರ್ಯಾಯಗಳು ಯಾವವುಸವಿಾ ಪದಲ್ಲಿಲ್ಲದಿದ್ದರೂ ಅನ್ನಾದಿಪಚನವ್ಯಾಪಾರದಲ್ಲಿ ಉಪಯೋಗಿಸಲ್ಪಟ್ಟಿ ತು- ಇದೇಯೇ ನೈಗಮನಯ ವೆಂಬುವದು. || ಸಂಗ್ರಹ-ಸ್ವಕೀ ಯವಾದಜಾತಿಗೆ ವಿರೋಧವಿಲ್ಲದಹಾಗೆ, ಅನೇಕಭೇದಗಳುಳ್ಳ ಪರ್ಯಾ ಯವನ್ನು ಸೇರಿಸಿ ಸಮಸ್ತವನ್ನು ಅಶೇಷವಾಗಿ ಒಂದಾಗಿಗ್ರಹಿಸುವದು ಸಂಗ್ರಹನಯವು || ಉದಾಹರಣೆ|| ದ್ರವ್ಯವೆಂದರೆ, ದ್ರವತಿಗಚ್ಛತಿತಾನ್ ಪರ್ಯಾಯಾನ್ ಎಂಬುವಲಕ್ಷಣದೊಡನೆಕೂಡಿದಂಥಾ ಜೀವಾಜೀವಾದಿಗಳು ಅದರಭೇದಗಳು ಯಾವತ್ತು ಸಂಗ್ರಹಿಸಲ್ಪಡುವದು ಸಂಗ್ರಹನಯವು ||

ವ್ಯವಹಾರ=ಸಂಗ್ರಹನಯದಿಂದಗ್ರಹಿಸಿದಂಥಾಅರ್ಥಗಳನ್ನು ವಿಧಿಪೂರ್ವಕ ವಾಗಿ ವ್ಯವಹರಿಸುವದು ವ್ಯವಹಾರನಯವು,ಯಾವದು ಸತ್ತಾಲಕ್ಷಣವುಳ್ಳದ್ದೋ ಅದುದ್ರವ್ಯವು, ಗುಣವು, ಯಿಂತೆಂದು ಅಥವಾಜೀವದ್ರವ್ಯ ಅಜೀವ ದ್ರವ್ಯವೆಂದು ವ್ಯವಹಾರಮಾಡುವದು, ಅಥವಾ ದೇವನಾರಕರು, ಘಟಪಟಾದಿಯೆಂದು ವ್ಯವಹರಿಸುವದು. ಯೀಪ್ರಕಾರವಾಗಿ ಯೆಷ್ಟುಪರ್ಯಂತರಕ್ಕೂ ವ್ಯವಹರಿಸುವದು ವ್ಯವಹಾರನಯವೆಂಬುವದು ‖ ಋಜುಸೂತ್ರ-ವರ್ತಮಾನಕಾಲವಿಷಯಪರ್ಯಾಯಗಳನ್ನೇಗ್ರಹಿಸುವದು ಋಜುಸೂತ್ರನಯವು. ಹ್ಯಾಗೆಂದರೆ ಮನುಷ್ಯಪರ್ಯಾಯವುಳ್ಳವನು ಮನುಷ್ಯನು, ದೇವಪರ್ಯಾಯವುಳ್ಳವನು ದೇವನು. ಯಿವುಮೊದಲಾದವರ್ತಮಾನ ಪರ್ಯಾಯಗಳನ್ನುತಿಳಿಯುದೇಯೆ ಋಜುಸೂತ್ರನಯವು ‖ ಶಬ್ದ, ಲಿಂಗ, ವಚನ, ಕಾರಕ, ಕಾಲಮೊದಲಾದವುಗಳ ವ್ಯಭಿಚಾರವನ್ನು ಅಂದರೆ ದೋಷವನ್ನುಬಿಟ್ಟು ಶಬ್ದದಅರ್ಥವನ್ನೇತೆಗದುಕೊಳ್ಳುವದು ಶಬ್ದನಯವು, ಹ್ಯಾಗೆಂದರೆ - ಮನೋಕರ್ಮಣಃಜಾತಃಮನುಷ್ಯಃ । ದೀವ್ಯತೀತಿದೇವಃ ಇವೇಮೊದಲಾದವುಗಳು ‖ ಸಮಭಿರೂಢ-ಅನೇಕ ಅರ್ಥವನ್ನುಬಿಟ್ಟು ರೂಢಿಯಾದ ಅರ್ಥವನ್ನೇಹೇಳುವದು, ಇಂದ್ರಶಕ್ರಪುರಂದರಾದಿ ಶಬ್ದಗಳಭೇದದಿಂದ ಅರ್ಥವನ್ನು ಭೇದಮಾಡಿತೆಗದುಕೊಳ್ಳುವದು ಸಮಭಿರೂಢನಯವು. ಗೌಶಬ್ದವು. ಶಬ್ದೇಷುಪಶುವಾಗ್ವಜ್ರ ಎಂದು ಅನೇಕಾರ್ಥವುಳ್ಳದ್ದಾಗಿದ್ದೆ, ಆದರೆ ಪಶುವಿನಲ್ಲಿ ರೂಢಿಯಾಗಿಬರುತ್ತದೆ ‖ ಏವಂಭೂತಾಃ-ಪದಗತವರ್ಣಭೇದದಿಂದ ಅರ್ಥವನ್ನು ನಿಶ್ಚಯಿಸುವದು ಏವಂಭೂತನಯವು, ನಯಾಃ-ಈ ೭ ನಯಗಳು ‖ ಮೇಲೆಹೇಳಿದನಯಗಳು, ದ್ರವ್ಯಾರ್ಥಿಕ ಪರ್ಯಾಯಾರ್ಥಿಕವೆಂದು ೨ ಭೇದವು. ದ್ರವ್ಯ, ಸಾಮಾನ್ಯ, ಉತ್ಸರ್ಗ, ಅನುವರ್ತಿ, ಈ ೪ ಪದಗಳು ವಂದೇಅರ್ಥವು, ಇದನ್ನ ವಿಷಯವಾಗಿರುವದು ದ್ರವ್ಯಾರ್ಥಿಕನಯವು ‖ ಪರ್ಯಾಯವು, ವಿಶೇಷವು, ಅಪವಾದವು, ವ್ಯಾವರ್ತಿಯು, ಈ ೪ ವಂದೇಅರ್ಥವು. ಅದನ್ನೇವಿಷಯವಾಗಿ ಹೇಳುವದು ಪರ್ಯಾಯಾರ್ಥಿಕನಯವು ‖ ನೈಗಮ, ಸಂಗ್ರಹ, ವ್ಯವಹಾರ ಈ ೩ ನಯಗಳು ದ್ರವ್ಯಾರ್ಥಿಕನಯವು ‖ ಋಜುಸೂತ್ರ, ಶಬ್ದ, ಸಮಭಿರೂಢ, ಏವಂಭೂತ, ಈ ೪ ನಯಗಳು ಪರ್ಯಾಯಾರ್ಥಿಕ

ನಯವು ॥ ನಿಶ್ಚಯನಯ, ವ್ಯವಹಾರನಯವೆಂದು ೨ ವಿಧವು ॥ ನಿಶ್ಚಯನಯವು, ಅಶುದ್ಧ ನಿಶ್ಚಯನಯ, ಶುದ್ಧನಿಶ್ಚಯನಯವೆಂದು ೨ ಭೇದವು ॥ ವ್ಯವಹಾರನಯವು, ಸದ್ಭೂತವ್ಯವಹಾರನಯ, ಅಸದ್ಭೂತವ್ಯವಹಾರನಯ, ಉಪಚರಿತವ್ಯವಹಾರನಯವೆಂದು ೩ ವಿಧವು ॥ ಈವ್ಯವಹಾರನಯಕ್ಕೆ ಉಪಚಾರನಯ, ಉಪನಯ ಎಂದು ಹೇಳುತ್ತಾರೆ॥೩೩॥

ಅ ॥ ಈ ಅಧ್ಯಾಯದಲ್ಲಿ ಹೇಳಿರುವದನ್ನ ಹೇಳುತ್ತಾರೆ.

ಶ್ಲೋ ॥ ಜ್ಞಾನದರ್ಶನಯೋಸ್ತತ್ವಂನಯಾನಾಂಚೈವಲ
ಕ್ಷಣಂ ॥ ಜ್ಞಾನಸ್ಯಚಪ್ರಮಾಣತ್ವಮಧ್ಯಾಯೆಸ್ಮಿನ್ನಿರೂಪಿತಂ ॥

ಟೀ ॥ ಜ್ಞಾನದರ್ಶನಯೋಃ-ಸಮ್ಯಜ್ಞಾನ ಸಮ್ಯಗ್ದರ್ಶನಗಳ, ತತ್ವಂ-ತತ್ಸ್ವರೂಪವು, ನಯಾನಾಂ-ನೈಗಮಾದಿನಯಗಳ, ಲಕ್ಷಣಂ ಚೈವ-ಲಕ್ಷಣವೂಕೂಡ, ಜ್ಞಾನಸ್ಯಚ-ಸಮ್ಯಜ್ಞಾನಕ್ಕಾದರೋ, ಪ್ರಮಾಣತ್ವಂ-ಪರೋಕ್ಷಪ್ರತ್ಯಕ್ಷ ಪ್ರಮಾಣಭಾಗವು, ಆಸ್ಮಿನ್ನಧ್ಯಾಯೇ-ಈ ಅಧ್ಯಾಯದಲ್ಲಿ, ನಿರೂಪಿತಂ-ಹೇಳಲ್ಪಟ್ಟಿತು ॥

ಇತಿ ತತ್ವಾರ್ಥಾಧಿ ಗಮೋಮೋಕ್ಷಶಾಸ್ತ್ರೇ ಪ್ರಥಮೋಧ್ಯಾಯಃ ॥ ಶ್ರೀ

---

## ದ್ವಿತೀಯೋಧ್ಯಾಯ ಪ್ರಾರಂಭಃ

### ಜೀವತತ್ವಾಧಿಕರಣಂ.

ಅ ॥ ಸಮ್ಯಗ್ದರ್ಶನಗಳಿಗೆ ವಿಷಯಭಾವದಿಂದ ಹೇಳಿದ ಜೀವಾದಿ ತತ್ವಗಳಲ್ಲಿ ಮೊದಲುಹೇಳಿದ ಜೀವಕ್ಕೆ ತನ್ನತತ್ವವೇನೆಂದರೆ ಹೇಳುತ್ತಾರೆ.

ಸೂ ॥ ಔಪಶಮಿಕಕ್ಷಾಯಿಕೌಭಾವೌಮಿಶ್ರಶ್ಚಜೀವಸ್ಯ
ಸ್ವತತ್ವಮೌದಯಿಕಪಾರಿಣಾಮಿಕೌ ಚ ॥ ೧ ॥

ಟೀ ॥ ಔಪಶಮಿಕಕ್ಷಾಯಿಕೌ-ಔಪಶಮಿಕ-ಕರ್ಮಗಳ ಉಪಶಮದಿಂದಲಾದ ಔಪಶಮಿಕಭಾವವು, (ಕಶ್ಮಲನೀರಿಗೆ ಚಿಲ್ಲಡಬೀಜತೇದುಹಾಕುವದರಿಂದ ಹ್ಯಾಗೆ ಮಷ್ಟನ್ನು ಕೆಳಗೆನಿಲ್ಲಿಸಿ ನೀರನ್ನು ಸ್ವಚ್ಛಮಾಡುತ್ತೋ ಹಾಗೆ ಕರ್ಮಗಳು ನಾಶವಾಗದೇ ಉಪಶಮವಾಗಿರುವದಕ್ಕೆ ಉಪಶಮವೆಂದುಹೆಸರು,) ಕ್ಷಾಯಿಕೌಭಾವೌ-ಕರ್ಮಗಳನಿರ್ಮೂಲಕ್ಷಯದಿಂದ

ಆದ ಕ್ಷಾಯಿಕಭಾವವು, ಎಂಬುವಗಳೆರಡು, ಮಿಶ್ರಶ್ಚ-ಕರ್ಮದ ಮಂದೋದಯದಿಂದ ಆದ ಜೀವನಗುಣವಾದ ಕ್ಷಾಯಿಕೋಪಶಮಿಕಭಾವವು, ಔದಯಿಕಪಾರಿಣಾಮಿಕೌ- ಔದಯಿಕ-ಕರ್ಮದ ಉದಯದಿಂದಆದ ಕರ್ಮಗುಣವಾದ ಔದಯಿಕಭಾವವು, ಪಾರಿಣಾಮಿಕ-ಸ್ವಭಾವದಿಂದಾದ ಪಾರಿಣಾಮಿಕಭಾವವು, (ಎಂಬ ೫ ಭಾವಗಳು) ಜೀವಸ್ಯ-ಜೀವಕ್ಕೆ, ಸ್ವತತ್ವಂ-ಆತ್ಮತತ್ವವಾಗುತ್ತೆ || ಈ ೫ ಭಾವಗಳನ್ನು ಗುಣಸ್ಥಾನದಲ್ಲಿತಿಳಿಯುವ ವಿಧಹ್ಯಾಗೆಂದರೆ || ಮಿಥ್ಯಾದೃಷ್ಟಿ, ಸಾಸಾಧನ, ಸಮ್ಯಗ್ಮಿಥ್ಯಾದೃಷ್ಟಿ, ಈ ೩ ರಲ್ಲುಕ್ಷಾಯಿಕೋಪಶಮಿಕ, ಔದಯಿಕ, ಪಾರಿಣಾಮಿಕ ಎಂಬ ಈ ೩ ಭಾವಗಳು ಆಗುತ್ತೆ || ಅಸಯಂತರುಮೊದಲಾಗಿ ಚತುಷ್ಕದಲ್ಲು ಉಪಶಮಿಕ ಚತುಷ್ಕದಲ್ಲು ಪ್ರತ್ಯೇಕವಾಗಿ ಔಪಶಮಿಕ, ಕ್ಷಾಯಿಕ, ಕ್ಷಾಯೋಪಶಮಿಕ, ಔದಯಿಕ, ಪಾರಿಣಾಮಿಕಗಳೆನ್ನುವ ೫ ಭಾವಗಳುಆಗುತ್ತೆ || ಕ್ಷಪಕಚತುಷ್ಕದಲ್ಲಿ ಕ್ಷಾಯಿಕ, ಕ್ಷಾಯೋಪಶಮಿಕ, ಔದಯಿಕ, ಪಾರಿಣಾಮಿಕಗಳೆಂಬ ೪ ಭಾವಗಳು ಆಗುತ್ತೆ || ಸ್ವಸ್ಥಾನಜಿನರಲ್ಲು ಸಮುದ್ಭೂತಜಿನರಲ್ಲು ಕ್ಷಾಯಿಕ, ಔದಯಿಕ, ಪಾರಿಣಾಮಿಕಗಳೆಂಬ ೩ ಭಾವಗಳುಆಗುತ್ತವೆ || ಸಿದ್ಧಪರಮೇಷ್ಠಿಗಳಲ್ಲಿ ಕ್ಷಾಯಿಕ ಸಹಜಪರಮಪಾರಿಣಾಮಿಕ ಎಂಬ ೨ ಭಾವಗಳುಆಗುತ್ತೆ ||೧||

ಅ || ಆ ೫ ಭಾವಗಳ ಭೇದವನ್ನು ಹೇಳುತ್ತಾರೆ.

ಸೂ || ದ್ವಿನವಾಷ್ಟಾದಶೈಕವಿಂಶತಿತ್ರಿಭೇದಾಯಥಾಕ್ರಮಂ||

ಟೀ || ಯಥಾಕ್ರಮಂ-ಕ್ರಮವನ್ನು ಅತಿಕ್ರಮಿಸದೆ, ದ್ವಿನವಾಷ್ಟಾದಶೈಕವಿಂಶತಿತ್ರಿಭೇದಾಃ- ದ್ವಿ- (ಔಪಶಮಿಕಕ್ಕೆ) ಎರಡು, ನವ- (ಕ್ಷಾಯಿಕಕ್ಕೆ) ಒಂಭತ್ತು, ಅಷ್ಟಾದಶ-(ಕ್ಷಾಯಿಕೋಪಶಮಿಕಕ್ಕೆ) ಹದಿನೆಂಟು, ಏಕವಿಂಶತಿ- (ಔದಯಿಕಕ್ಕೆ) ಇಪ್ಪತ್ತೊಂದು, ತ್ರಿ- (ಪಾರಿಣಾಮಿಕಕ್ಕೆ) ಮೂರು, ಭೇದಾಃ-ಭೇದಗಳು || ೨ ||

ಅ || ಔಪಶಮಿಕ ಭಾವ ಎರಡು ಭೇದವೆಂದು ಹೇಳುತಾರೆ.

ಸೂ.|| ಸಮ್ಯಕ್ತ್ವಚಾರಿತ್ರೆ || ೩ ||

ಟೀ || ಸಮ್ಯಕ್ತ್ವಚಾರಿತ್ರೇ-ಸಮ್ಯಕ್ತ್ವ-ಉಪಶಮಸಮ್ಯಕ್ತ್ವವು, ಚಾರಿತ್ರೇ-ಉಪಶಮಚಾರಿತ್ರವು, (ಈ ಎರಡು ಔಪಶಮಿಕಭಾವವು ||೩||

ತಾ || ಅನಂತಾನುಬಂಧಿಕ್ರೋಧ, ಮಾನ, ಮಾಯಾ, ಲೋಭಗಳು, ಮಿಥ್ಯಾತ್ವ, ಸಮ್ಯಗ್ಮಿಥ್ಯಾತ್ವ, ಸಮ್ಯಕ್ತ್ವಪ್ರಕೃತಿ, ಎಂಬ ದರ್ಶನಮೋಹನೀಯಗಳಾದ ಸಪ್ತಪ್ರಕೃತಿಗಳ ಉಪಶಮದಿಂದಹುಟ್ಟಿದ ಸಮ್ಯಕ್ತ್ವಕ್ಕೆ ಉಪಶಮಸಮ್ಯಕ್ತ್ವವೆಂದುಹೆಸರು || ಅಪ್ರತ್ಯಾಖ್ಯಾನ ಪ್ರತ್ಯಾಖ್ಯಾನ, ಸಂಜ್ವಲನ, ಇವುಗಳಕ್ರೋಧ, ಮಾನ, ಮಾಯಾ, ಲೋಭಗಳು ೩×೪=೧೨ ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸಾ, ಸ್ತ್ರೀ, ಪುಂಸ, ನಪುಂಸಕ, ಗಳೆಂಬ ಒಂಭತ್ತು (ನೋಕಷಾಯ) ಈ ಚಾರಿತ್ರಮೋಹನೀಯಕರ್ಮಗಳಾದ ೨೧ ರಉಪಶಮದಿಂದ ಹುಟ್ಟಿದ ಚಾರಿತ್ರವು ಔಪಶಮಿಕ ಚಾರಿತ್ರವೆಂದುಹೆಸರು || ೩ ||

ಅ || ಕ್ಷಾಯಿಕಭಾವಗಳು ಒಂಭತ್ತು ಪ್ರಕಾರವೆಂದು ಹೇಳುತ್ತಾರೆ

ಸೂ || ಜ್ಞಾನದರ್ಶನದಾನಲಾಭ ಭೋಗೋಪಭೋಗ
ವೀರ್ಯಾಣಿ ಚ || ೪ ||

ಟೀ || ಜ್ಞಾನದರ್ಶನದಾನಲಾಭಭೋಗೋಪಭೋಗವೀರ್ಯಾಣಿ-ಜ್ಞಾನ-ಕ್ಷಾಯಿಕಜ್ಞಾನವು, ದರ್ಶನ-ಕ್ಷಾಯಿಕದರ್ಶನವು, ದಾನ-ಕ್ಷಾಯಿಕದಾನವು, ಲಾಭ-ಕ್ಷಾಯಿಕಲಾಭವು, ಭೋಗ-ಕ್ಷಾಯಿಕಭೋಗವು, ಉಪಭೋಗ-ಕ್ಷಾಯಿಕಉಪಭೋಗವು, ವೀರ್ಯಾಣಿ-ಕ್ಷಾಯಿಕವೀರ್ಯವು ಇವುಗಳು, ಚ-ಚಕಾರದಿಂದಹಿಂದಲಸೂತ್ರದ ಅನುವರ್ತಿಯಿಂದ, ಕ್ಷಾಯಿಕಸಮ್ಯಕ್ತ್ವವು, ಕ್ಷಾಯಿಕಚಾರಿತ್ರವು, ಎಂಬ ಈ ಒಂಭತ್ತು ಕ್ಷಾಯಿಕಭಾವಸ್ವರೂಪಗಳು ||

ತಾ || (೧) ಜ್ಞಾನಾವರ್ಣೀಯಕರ್ಮದಅತ್ಯಂತ ಕ್ಷಯದಿಂದಹುಟ್ಟಿದಂಥ ಕೇವಲಜ್ಞಾನವು ಕ್ಷಾಯಿಕಜ್ಞಾನವು || (೨) ದರ್ಶನಾವರ್ಣೀಯಕರ್ಮದ ಅತ್ಯಂತ ಕ್ಷಯದಿಂದಹುಟ್ಟಿದಂಥ ಕೇವಲಜ್ಞಾನವು ಕ್ಷಾಯಿಕದರ್ಶನವು || (೩) ದಾನಾಂತರಾಯಕರ್ಮದಅತ್ಯಂತಕ್ಷಯದಿಂದ ಹುಟ್ಟಿದಂಥಾ ಪ್ರಾಣಿಗಣಾನುಗ್ರಹವನ್ನು ಮಾಡುವಂಥಾ ಅಭಯದಾನವೆ ಕ್ಷಾಯಿಕದಾನವು || (೪) ಲಾಭಾಂತರಾಯಕರ್ಮದ ಅತ್ಯಂತಕ್ಷಯದಿಂದ ಶರೀರಬಲಾದಾನಹೇತುಗಳು ಅನ್ಯಮನುಜಾ ಸಾಧಾರಣಗಳು ಪರಮ ಶುಭಗಳು ಸೂಕ್ಷ್ಮಗಳು ಅನಂತಗಳು ಆದ ನೋಕರ್ಮವರ್ಗಣಾಯೋ

ಗ್ಯಪುದ್ಗಲಗಳಬಿಡಲ್ಪಟ್ಟ ಕಬಲಾಹಾರಕ್ರಿಯಾಕಲಿತಕೇವಲಿಗಳೊಡನೆ ಪ್ರತಿಸಮಯಸಂಬಂಧಕ್ಕವತರಿಸುವ ವಿಧಾನವು ಕ್ಷಾಯಿಕಲಾಭವು || (೫) ಭೋಗಾಂತರಾಯಕರ್ಮಗಳ ನಿಶ್ಶೇಷನಾಶದಿಂದ ಉಂಟಾದ ಪುಷ್ಪವೃಷ್ಟ್ಯಾದಿವಿಶೇಷಾತಿಶಯರೂಪಗಳೆ ಕ್ಷಾಯಿಕಭೋಗವು || (೬) ಉಪಭೋಗಾಂತರಾಯಕರ್ಮದ ನಿರವಶೇಷಕ್ಷಯದಿಂದ ಉಂಟಾದಂಥ, ಸಿಂಹಾಸನ, ಚತುಷ್ಷಷ್ಟಿಚಾಮರಧವಲಛತ್ರತ್ರಯಾದಿರೂಪವೇ ಕ್ಷಾಯಿಕೋಪಭೋಗವು || (೭) ವೀರ್ಯಾಂತರಾಯಕರ್ಮನಿರ್ಮೂಲನಕ್ಷಯದಿಂದ ಹುಟ್ಟಿದ ಕ್ಷಾಯಿಕವೀರ್ಯವು, ಅನಂತವೀರ್ಯವು || (೮) ಪೂರ್ವೋಕ್ತ ದರ್ಶನಮೋಹನೀಯಗಳಾದ ಸಪ್ತಪ್ರಕೃತಿಗಳ ಅತ್ಯಂತ ಕ್ಷಯದಿಂದಹುಟ್ಟಿದಂಥಾದ್ದು ಕ್ಷಾಯಿಕಸಮ್ಯಕ್ತ್ವವು || (೯)ಚಾರಿತ್ರಮೋಹನೀಯಗಳಾದ ೨೧ ಪ್ರಕೃತಿಗಳಅತ್ಯಂತಕ್ಷಯದಿಂದ ಉಂಟಾದ ಚಾರಿತ್ರವು ಕ್ಷಾಯಿಕಚಾರಿತ್ರವು || ೪ ||

ಅ || ಕ್ಷಾಯೋಪಶಮಿಕಭಾವದ ಹದಿನೆಂಟು ಭೇದಗಳನ್ನು ಹೇಳುತ್ತಾರೆ.

ಸೂ || ಜ್ಞಾನಾಜ್ಞಾನದರ್ಶನಲಬ್ಧಯಶ್ಚತುಸ್ತ್ರಿತ್ರಿಪಂಚ
ಭೇದಾಸ್ಸಮ್ಯಕ್ತ್ವಚಾರಿತ್ರಸಂಯಮಾಸಂಯಮಾಶ್ಚ ||೫||

ಟೀ || ಜ್ಞಾನಾಜ್ಞಾನದರ್ಶನಲಬ್ಧಯಃ-ಜ್ಞಾನ-ಮತಿ, ಶ್ರುತಿ, ಅವಧಿ, ಮನಃಪರ್ಯಯವೆಂಬನಾಲ್ಕುಜ್ಞಾನವು, ಅಜ್ಞಾನ-ಮತ್ಯಜ್ಞಾನ, (ಕುಮತಿ) ಶ್ರುತ್ಯಜ್ಞಾನ, (ಕುಶ್ರುತಿ) ವಿಭಂಗ, ವೆಂಬಮೂರು ಅಜ್ಞಾನವು, ದರ್ಶನ-ಚಕ್ಷುರ್ದರ್ಶನ, ಅಚಕ್ಷುರ್ದರ್ಶನ, ಅವಧಿದರ್ಶನವೆಂಬಮೂರುದರ್ಶನಗಳು, ಲಬ್ಧಯಃ-ಉಪಶಮಲಬ್ಧಿ, ಕಾಲಲಬ್ಧಿ, ಪ್ರಾಯೋಗ್ಯತಾಲಬ್ಧಿ, ಉಪದೇಶನಾಲಬ್ಧಿ, ಕರಣಲಬ್ಧಿ, ಎಂಬ ೫ ಲಬ್ಧಿಗಳು, ಚತುಃ-ನಾಲ್ಕು, ತ್ರಿ-ಮೂರು, ತ್ರಿ-ಮೂರು, ಪಂಚ-ಐದು, ಭೇದಾಃ-ವಿಕಲ್ಪಗಳು, ಸಮ್ಯಕ್ತ್ವಚಾರಿತ್ರಸಂಯಮಾಸಂಯಮಾಶ್ಚ-ಸಮ್ಯಕ್ತ್ವ-ಕ್ಷಾಯೋಪಶಮಿಕ ( ವೇದಕ ) ಸಮ್ಯಕ್ತ್ವವು, ಚಾರಿತ್ರ-ಕ್ಷಾಯೋಪಶಮಿಕಚಾರಿತ್ರವು, ಸಂಯಮಾಸಂಯಮಾಶ್ಚ-ದೇಶಸಂಯಮವೂಕೂಡ. (ಈ ೧೮ ಮಿಶ್ರಭಾವವು ಅಂದರೆ) ಕ್ಷಾಯೋಪಶಮಿಕಭಾವವು || ೫ ||

ಅ ॥ ಔದಯಿಕಭಾವ ಇಪ್ಪತ್ತೊಂದು ಭೇದವೆಂದು ಹೇಳುತ್ತಾರೆ.

ಸೂ ॥ ಗತಿಕಷಾಯಲಿಂಗಮಿಥ್ಯಾದರ್ಶನಾಜ್ಞಾನಾಸಂಯತಾ

ಸಿದ್ಧಲೇಶ್ಯಾಶ್ಚತುಶ್ಚತುಸ್ತ್ರ್ಯೇಕೈಕೈಕಷಡ್ಭೇದಾಃ ॥ ೬ ॥

ಟೀ ॥ ಚತುಃ-ನಾಲ್ಕು, ಚತುಃ-ನಾಲ್ಕು, ತ್ರಿ-ಮೂರು, ಏಕ-ಒಂದು, ಏಕ-ಒಂದು, ಏಕ-ಒಂದು, ಷಟ್-ಆರು, ಭೇದಾಃ-ಭೇದಗಳುಳ್ಳಂಥ, ಗತಿಕಷಾಯಲಿಂಗಮಿಥ್ಯಾದರ್ಶನಾಜ್ಞಾನಾಸಂಯತಾಸಿದ್ಧಲೇಶ್ಯಾಃ-ಗತಿ-ನರಕಗತಿ ತಿರ್ಯಗ್ಗತಿ ಮನುಷ್ಯಗತಿ ದೇವಗತಿ ಯೆಂಬ ೪ ಗತಿಗಳು, ಕಷಾಯ-ಕ್ರೋಧ ಮಾನ ಮಾಯಾ ಲೋಭವೆಂಬ ೪ ಕಷಾಯಗಳು, ಲಿಂಗ-ಸ್ತ್ರೀವೇದ ಪುಂವೇದ ನಪುಂಸಕವೇದ ವೆಂಬ ೩ ವೇದವು, ಮಿಥ್ಯಾದರ್ಶನ-ಮಿಥ್ಯಾತ್ವವು, ಅಜ್ಞಾನ-ಅಜ್ಞಾನವು, ಅಸಂಯತ-ಅಸಂಯತವು, ಅಸಿದ್ಧ-ಅಸಿದ್ಧವು, ಲೇಶ್ಯಾಃ-ಶುಕ್ಲಲೇಶ್ಯ ಪೀತಲೇಶ್ಯ ಪದ್ಮಲೇಶ್ಯ ಕಪೋತಲೇಶ್ಯ ಕೃಷ್ಣಲೇಶ್ಯ ನೀಲಲೇಶ್ಯ ಎಂಬ ೬ ಲೇಶ್ಯಗಳು ॥ ಈ ಇಪ್ಪತ್ತೊಂದು ಔದಯಿಕಭಾವದಭೇದಗಳು ॥೬॥

ಅ ॥ ಪಾರಿಣಾಮಿಕಭಾವದ ಮೂರು ಭೇದವನ್ನು ಹೇಳುತ್ತಾರೆ.

ಸೂ ॥ ಜೀವಭವ್ಯಾಭವ್ಯತ್ವಾನಿಚ ॥ ೭ ॥

ಟೀ ॥ ಜೀವಭವ್ಯಾಭವ್ಯತ್ವಾನಿ-ಜೀವ-ಜೀವತ್ವಪರಿಣಾಮವು, ಭವ್ಯ-ಭವ್ಯತ್ವಪರಿಣಾಮವು, ಅಭವ್ಯತ್ವಾನಿಚ-ಅಭವ್ಯತ್ವಪರಿಣಾಮವು ಕೂಡ ॥ ತಾತ್ಪರ್ಯ ॥ ಚ ಶಬ್ದದಿಂದ ಅಸ್ತಿತ್ವ ನಾಸ್ತಿತ್ವ ಪ್ರದೇಶಿತ್ವ ಪರಿಣಾಮಿತ್ವ ಅಗುರುಲಘುತ್ವ ಪ್ರಮೇಯತ್ವ ಮೊದಲಾದವು ಜೀವಾಜೀವಸಾಧಾರಣ ಪಾರಿಣಾಮಿಕಭೇದಭಾವಗಳು ॥ ಕರ್ಮಗಳ ಉದಯವು, ಉಪಶಮವು, ಕ್ಷಯವು, ಕ್ಷಯೋಪಶಮವು, ಇವುಗಳನ್ನು ಅಪೇಕ್ಷಿಸದೆ ಜೀವದ್ರವ್ಯದಲ್ಲಿ ಇರುವ ಧರ್ಮವೇಪಾರಿಣಾಮಿಕತ್ವವೆಂಬುವದು, ಅವರಲ್ಲಿ ಚೈತನ್ಯವೇಜೀವತ್ವವೆಂಬುವದು. ಸಮ್ಯಗ್ದರ್ಶನಾದಿ ರತ್ನತ್ರಯಗಳನ್ನು ಪಡೆಯುವದಕ್ಕೆ ಯೋಗ್ಯತೆಯುಭವ್ಯತ್ವವೆಂಬುವದು, ಸಮ್ಯಗ್ದರ್ಶನಾದಿಗಳನ್ನು ಯಾವಕಾಲದಲ್ಲಿಯೂ ಪಡೆಯುವದಕ್ಕೆ ಯೋಗ್ಯತೆಇಲ್ಲದೇ ಇರೋಣವೇ ಅಭವ್ಯತ್ವವೆಂಬುವದು. ಈ ೩ ಜೀವದ್ರವ್ಯಕ್ಕೆ ಅಸಾಧಾರಣ ಧರ್ಮವು ॥ ೭ ॥

## ಜೀವಲಕ್ಷಣಾಧಿಕರಣಂ.

ಅ || ಜೀವದ್ರವ್ಯದ ಲಕ್ಷಣವನ್ನು ಹೇಳುತ್ತಾರೆ.

ಸೂ || ಉಪಯೋಗೋಲಕ್ಷಣಂ || ೮ ||

ಟೀ || ಉಪಯೋಗಃ-ಅರ್ಥಗ್ರಹಣವ್ಯಾಪಾರರೂಪವಾದ ಉಪಯೋಗವು (ಚೈತನ್ಯಪರಿಣಾಮವು) ಲಕ್ಷಣಂ-ಜೀವಲಕ್ಷಣವು || ೮ ||

ಅ || ಉಪಯೋಗದ ಭೇದವನ್ನು ಹೇಳುತ್ತಾರೆ.

ಸೂ || ಸದ್ವಿವಿಧೋಷ್ಟಚತುರ್ಭೇದಃ || ೯ ||

ಟೀ || ಸಃ-ಆ ಉಪಯೋಗವು, ದ್ವಿವಿಧಃ-ಜ್ಞಾನೋಪಯೋಗದರ್ಶನೋಪಯೋಗವೆಂದು ಎರಡು ಪ್ರಕಾರವು, ಅಷ್ಟಚತುರ್ಭೇದಃ-ಅಷ್ಟ-ಜ್ಞಾನೋಪಯೋಗಭೇದಗಳಾದ ಮತಿಶ್ರುತಾವಧಿಮನಃಪರ್ಯಯ ಕೇವಲ ಕುಮತಿ ಕುಶ್ರುತಿ ವಿಭಂಗವೆಂಬ ಎಂಟು, ಚತುಃ-ದರ್ಶನೋಪಯೋಗಭೇದಗಳಾದ ಚಕ್ಷು ಅಚಕ್ಷು ಅವಧಿ ಕೇವಲ ವೆಂಬನಾಲ್ಕು, ಭೇದಃ-ಜ್ಞಾನೋಪಯೋಗದರ್ಶನೋಪಯೋಗವೆಂಬಭೇದವು ||೯||

ಅ || ಉಪಯೋಗದಿಂದ ಉಪಲಕ್ಷಿತಗಳಾದ ಜೀವದ್ರವ್ಯದ ಭೇದವನ್ನು ಹೇಳುತ್ತಾರೆ,

ಸೂ || ಸಂಸಾರಿಣೋಮುಕ್ತಾಶ್ಚ || ೧೦ ||

ಟೀ || ಸಂಸಾರಿಣಃ-ಸಂಸಾರಿಜೀವಗಳು, ಮುಕ್ತಾಶ್ಚ-ಮುಕ್ತಜೀವಗಳೂಕೂಡ, (ಇಂತೆಂದು ಜೀವಗಳು ೨ ಭೇದವು) || ೧೦ ||

ಅ || ಸಂಸಾರಿ ಜೀವಭೇದವನ್ನು ಹೇಳುತ್ತಾರೆ.

ಸೂ || ಸಮನಸ್ಕಾಮನಸ್ಕಾಃ || ೧೧ ||

ಟೀ || ಸಮನಸ್ಕಾಮನಸ್ಕಾಃ-ಸಮನಸ್ಕ-ದ್ರವ್ಯಭಾವವೆಂಬ ಎರಡುವಿಧಮನಸ್ಸುವುಳ್ಳಂಥಾವರುಗಳು, ಅಮನಸ್ಕಾಃ-ಮನಸ್ಸು ಇಲ್ಲದವರು. ಅಂದರೆ, ದ್ರವ್ಯಮನಸ್ಸುವುಳ್ಳಂಥಾವರಾದಾಗ್ಯೂ ವೀರ್ಯಾಂತರಾಯನೋಯಿಂದ್ರಿಯಾವರಣಕ್ಷಯೋಪಶಮಾಪೇಕ್ಷೆಯಿಂದಾದ ಆತ್ಮಶುದ್ಧಿಯುಳ್ಳ ಭಾವ ಮನಸ್ಸು ಇಲ್ಲದೇಯಿರುವಂಥಾವರುಗಳು, (ಇಂತೆಂದು ಸಂಸಾರಿಜೀವಗಳು ಎರಡುಪ್ರಕಾರವಾದಂಥಾವರುಗಳು) || ೧೧ ||

ಅ || ಪುನಃ ಸಂಸಾರಿ ಜೀವಗಳ ಭೇದವನ್ನು ಹೇಳುತ್ತಾರೆ.

ಸೂ || ಸಂಸಾರಿಣಃ ತ್ರಸಸ್ಥಾವರಾಃ || ೧೨ ||

ಟೀ || ಸಂಸಾರಿಣಃ-ಸಂಸಾರಿಜೀವಗಳು, ತ್ರಸಸ್ಥಾವರಾಃ-ತ್ರಸ-ತ್ರಸಜೀವಗಳೆಂತಲೂ, ಸ್ಥಾವರಾಃ-ಸ್ಥಾವರಜೀವಗಳೆಂತಲೂ, ಎರಡುಪ್ರಕಾರವು || ತ್ರಸಜೀವಗಳೆಂದರೆ ಚಲನಾತ್ಮಕವಾದ ಗಮನಾ ಗಮನವುಳ್ಳಪ್ರಾಣಿಗಳು || ಗಮನಾ ಗಮನವಿಲ್ಲದೆ ಸ್ಥಿರವಾಗಿರುವಪ್ರಾಣಿಗಳು ಸ್ಥಾವರಜೀವಗಳು || ೧೨ ||

ಅ || ಸ್ಥಾವರ ಜೀವಭೇದವನ್ನು ಹೇಳುತ್ತಾರೆ.

ಸೂ || ಪೃಥುವ್ಯಪ್ತೇಜೋವಾಯುವನಸ್ಪತಯಃ ಸ್ಥಾವರಾಃ ||

ಟೀ || ಪೃಥುವ್ಯಪ್ತೇಜೋವಾಯುವನಸ್ಪತಯಃ-ಪೃಥುವಿ-ಪೃಥ್ವಿಕಾಯಿಕಗಳು, ಅಪ್-ಅಪ್ಕಾಯಿಕಗಳು, ತೇಜಃ-ತೇಜಸ್ಕಾಯಿಕಗಳು, ವಾಯು-ವಾಯುಕಾಯಿಕಗಳು, ವನಸ್ಪತಯಃ-ವನಸ್ಪತಿಕಾಯಿಕಗಳು, ಸ್ಥಾವರಾಃ-ಸ್ಥಾವರಪ್ರಾಣಿಗಳು (೫ ವಿಧವಾದಂಥಾವುಗಳು || ಪೃಥುವಿ, ಪೃಥುವಿಕಾಯ, ಪೃಥುವಿಕಾಯಿಕ, ಪೃಥುವಿಕಾಯಜೀವ, ಯೀ ಪ್ರಕಾರನಾಲ್ಕು ಪ್ರಕಾರ ಭೇದವಾಗುತ್ತೆ ಇದೇ ಮೇರೆ ಬಾಕಿ ೪ವುಗಳಿಗೂ ಆಗುತ್ತೆ || ಇವು ಏಕೇಂದ್ರಿಯಗಳು || ದಶಪ್ರಾಣದಲ್ಲಿ ಇವುಗಗಳಿಗೆ, ಇಂದ್ರಿಯಪ್ರಾಣ, ಕಾಯಬಲಪ್ರಾಣ, ಶ್ವಾಸೋಚ್ಛ್ವಾಸಪ್ರಾಣ, ಆಯುಃಪ್ರಾಣಗಳೆಂಬ ಈ ೪ ಮಾತ್ರ ಇರುತ್ತೆ, ಬಾದರಸೂಕ್ಷ್ಮವೆಂಬ ಭೇಧಗಳುಇರುತ್ತವೆ || ೧೩ ||

ಅ || ತ್ರಸಪ್ರಾಣಿಗಳ ಭೇದಗಳನ್ನು ಹೇಳುತ್ತಾರೆ.

ಸೂ || ದ್ವೀಂದ್ರಿಯಾದಯಸ್ತ್ರಸಾಃ || ೧೪ ||

ಟೀ || ದ್ವೀಂದ್ರಿಯಾದಯಃ-ಎರಡು ಇಂದ್ರಿಯವೇಮೊದಲಾದಂಥಾವುಗಳು, ತ್ರಸಾಃ-ತ್ರಸಜೀವಗಳು || ತಾ || ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಈ ೩ ಕ್ಕು ವಿಕಲತ್ರಯವೆಂಬ ಹೆಸರು || ಪಂಚೇಂದ್ರಿಯವು, ಸಂಜ್ಞಿಪಂಚೇಂದ್ರಿಯ ಅಸಂಜ್ಞಿಪಂಚೇಂದ್ರಿಯವೆಂಬ ೨ ಭೇದವನುಳ್ಳದ್ದು || ದ್ವೀಂದ್ರಿಯಕ್ಕೆ, ಸ್ಪರ್ಶನೇಂದ್ರಿಯಪ್ರಾಣ, ಕಾಯಬಲಪ್ರಾಣ, ಉಚ್ಛ್ವಾಸನಿಚ್ಛ್ವಾಸಪ್ರಾಣ,

ಆಯುಃಪ್ರಾಣ, ರಸನೇಂದ್ರಿಯಪ್ರಾಣ, ವಾಗ್ಬಲಪ್ರಾಣ, ಅಂತು ಈ ಆರುಪ್ರಾಣಗಳು || ತ್ರೀಂದ್ರಿಯಕ್ಕೆ ದ್ವೀಂದ್ರಿಯಕ್ಕೆ ಹೇಳಿದ ಆರು, ಘ್ರಾಣೇಂದ್ರಿಯವೆಂದು ಅಂತು ಏಳು ಪ್ರಾಣಗಳು || ಚತುರಿಂದ್ರಿಯಕ್ಕೆ ತ್ರೀಂದ್ರಿಯಕ್ಕೆಹೇಳಿದ, ಏಳು, ಚಕ್ಷುರಿಂದ್ರಿಯವೆಂದು ಅಂತು ಎಂಟುಪ್ರಾಣಗಳು || ಅಸಂಜ್ಞಿಪಂಚೇಂದ್ರಿಯಕ್ಕೆ ಚತುರಿಂದ್ರಿಯಕ್ಕೆ ಹೇಳಿದ ಎಂಟು ಶ್ರೋತ್ರೇಂದ್ರಿಯವೆಂದು ಅಂತು ವೊಂಭತ್ತು ಪ್ರಾಣಗಳು || ಸಂಜ್ಞಿಪಂಚೇಂದ್ರಿಯಕ್ಕೆ ಅಸಂಜ್ಞಿಪಂಚೇಂದ್ರಿಯಕ್ಕೆ ಹೇಳಿದವೊಂಭತ್ತು ಮನೋಬಲಪ್ರಾಣವೆಂದು ಅಂತು ಹತ್ತುಪ್ರಾಣಗಳು || ೧೪ ||

ಇಂದ್ರಿಯಾಧಿಕರಣಂ.

ಅ || ಇಂದ್ರಿಯಗಳು ಇಷ್ಟೆಂಬು ಹೇಳುತ್ತಾರೆ.

ಸೂ || ಪಂಚೇಂದ್ರಿಯಾಣಿ || ೧೫ ||

ಟೀ || ಪಂಚೇಂದ್ರಿಯಾಣಿ-ಇಂದ್ರಿಯಗಳು ಐದು ವಿಧವು ||

ಅ || ಆ ಇಂದ್ರಿಯಗಳ ಭೇದವನ್ನು ಹೇಳುತ್ತಾರೆ.

ಸೂ || ದ್ವಿವಿಧಾನಿ || ೧೬ ||

ಟೀ || ದ್ವಿವಿಧಾನಿ-ಹಿಂದೆಹೇಳಿದ ಸ್ಪರ್ಶನ, ರಸನ, ಘ್ರಾಣ, ಚಕ್ಷು, ಶ್ರೋತ್ರವೆಂಬ ಐದು ಇಂದ್ರಿಯಗಳೂ ದ್ರವ್ಯೇಂದ್ರಿಯ, ಭಾವೇಂದ್ರಿಯ ವೆಂಬ ಭೇದಗಳುಳ್ಳವು || ೧೬ ||

ಅ || ದ್ರವ್ಯೇಂದ್ರಿಯದ ಭೇದವನ್ನು ಹೇಳುತ್ತಾರೆ.

ಸೂ || ನಿರ್ವೃತ್ಯುಪಕರಣೇದ್ರವ್ಯೇಂದ್ರಿಯಂ || ೧೭ ||

ಟೀ || ದ್ರವ್ಯೇಂದ್ರಿಯಂ-ದ್ರವ್ಯೇಂದ್ರಿಯವು, ನಿರ್ವೃತ್ತ್ಯುಪಕರಣೇ-ನಿರ್ವೃತ್ತಿ-ನಿರ್ವೃತ್ತಿಎಂತಲೂ, ಉಪಕರಣೇ-ಉಪಕರಣವೆಂತಲೂ, ಎರಡುಭೇದವು || ತಾ || ನಿರ್ವೃತ್ತಿಯು, ಅಭ್ಯಂತರನಿರ್ವೃತ್ತಿ, ಬಾಹ್ಯನಿರ್ವೃತ್ತಿ, ಎಂದು ಎರಡುವಿಧವು || ಉಪಕರಣವು, ಅಭ್ಯಂತರ ಉಪಕರಣ, ಬಾಹ್ಯಉಪಕರಣವೆಂದು ಎರಡು ವಿಧವು || ಐದ್ದಿಂದ್ರಿಯಗಳ ತಿಳಿಯುವ ಸ್ಥಾನದಆಕಾರವು ಅಲ್ಲಿ ಕ್ಷಯೋಪಶಮದಿಂದ ಕೂಡಿದಂಥ ಜೀವಪ್ರದೇಶಗಳೂ ಆದಂಥ ಬಾಹ್ಯಾಭ್ಯಂತರನಿರ್ವೃತ್ತಿಯು, ನಿರ್ವೃತ್ತಿ ಎಂಬುವದು || ನಿರ್ವೃತ್ತಿಗಾಧಾರವಾದಂಥ ಬಾಹ್ಯಾಭ್ಯಂತರೋಪಕರ

ಣವೇಯೇ ಉಪಕರಣವು ॥ ಈ ನಿರ್ವೃತ್ತಿಯು, ಉಪಕರಣವು ದ್ರ ವ್ಯೇಂದ್ರಿಯವು ॥ ೧೭ ॥

ಅ ॥ ಭಾವೇಂದ್ರಿಯ ಸ್ವರೂಪವನ್ನು ಹೇಳುತ್ತಾರೆ.

ಸೂ ॥ ಲಬ್ಧ್ಯುಪಯೋಗೌಭಾವೇಂದ್ರಿಯಂ ॥ ೧೮ ॥

ಟೀ ॥ ಲಬ್ಧ್ಯುಪಯೋಗೌ-ಲಬ್ಧಿ-ಅರ್ಥಗ್ರಹಣಶಕ್ತಿರೂಪ ಲಬ್ಧಿ ಯು, ಉಪಯೋಗೌ-ಅರ್ಥಗ್ರಹಣವ್ಯಾಪಾರರೂಪ ಉಪಯೋಗವು, ಭಾವೇಂದ್ರಿಯಂ-ಈ ಎರಡು ಭಾವೇಂದ್ರಿಯವು ॥ ಜ್ಞಾನಾವರಣಕ್ಷ ಯೋಪಶಮ ವಿಶೇಷ ಸಂನಿಧಾನಪ್ರೇಕ್ಷೆಯಿಂದ ಆತ್ಮನು ದ್ರವ್ಯೇಂದ್ರಿಯ ರೂಪವಾದ ಪುದ್ಗಲಪಿಂಡವಾದ ಚಕ್ಷುರಾದಿಗಳನ್ನು ಕುರಿತು ವ್ಯಾಪಾರ ಮಾಡುವದು ಯಾವದುಂಟೋ ಅದು ಲಬ್ಧಿಎಂಬುವದು ॥ ಆ ಲಬ್ಧಿಯ ನ್ನೇ ನಿಮಿತ್ತವಾಗಿಯುಳ್ಳ ಆತ್ಮನ ಪರಿಣಾಮವೇ ಉಪಯೋಗವು ॥೧೮॥

ಅ ॥ ಇಂದ್ರಿಯಗಳು ಯಾವಸ್ವರೂಪವುಳ್ಳ ಹೆಸರನ್ನು ಪಡೆದಿವೆಯೆಂ ಬುವದನ್ನು ಹೇಳುತ್ತಾರೆ.

ಸೂ ॥ ಸ್ಪರ್ಶನರಸನಘ್ರಾಣಚಕ್ಷುಃಶ್ರೋತ್ರಾಣಿ ॥ ೧೯ ॥

ಟೀ ॥ ಸ್ಪರ್ಶನರಸನಘ್ರಾಣಚಕ್ಷುಃಶ್ರೋತ್ರಾಣಿ-ಸ್ಪರ್ಶನ-ಸ್ಪ ರ್ಶನೇಂದ್ರಿಯವು, ರಸನ-ರಸನೇಂದ್ರಿಯವು, ಘ್ರಾಣ-ಘ್ರಾಣೇಂದ್ರಿಯ ವು, ಚಕ್ಷುಃ-ಚಕ್ಷುರಿಂದ್ರಿಯವು, ಶ್ರೋತ್ರಾಣಿ-ಶ್ರೋತ್ರೇಂದ್ರಿಯವು ಇಂತೆಂದು ೫ ಇಂದ್ರಿಯಗಳು ॥ ೧೯ ॥

ಅ ॥ ಆ ಇಂದ್ರಿಯಗಳಿಗೆ ವಿಷಯಗಳನ್ನು ಹೇಳುತ್ತಾರೆ.

ಸೂ ॥ ಸ್ಪರ್ಶರಸಗಂಧವರ್ಣಶಬ್ದಾಸ್ತದರ್ಥಾಃ ॥ ೨೦ ॥

ಟೀ ॥ ಸ್ಪರ್ಶರಸಗಂಧವರ್ಣಶಬ್ದಾಃ ಸ್ಪರ್ಶ- ಶರೀರದಿಂದ ಮು ಟ್ಟೋಣವು, ರಸ-ನಾಲಿಗೆಯಿಂದ ರುಚಿನೋಡುವ ಷಡ್ರಸವು, ಗಂಧ- ಮೂಗಿನಿಂದ ತಿಳಿಯುವಎರಡುಗಂಧವು, ವರ್ಣ-ಕಣ್ಣಿನಿಂದತಿಳಿಯುವ ಪಂಚವರ್ಣವು, ಶಬ್ದಾಃ-ಕಿವಿಯಿಂದತಿಳಿಯುವ ಸಪ್ತಸ್ವರಾದಿಧ್ವನಿಗಳು ತದರ್ಥಾಃ-ತತ್-ಆ ಇಂದ್ರಿಯಗಳ, ಅರ್ಥಾಃ-ವಿಷಯಪದಾರ್ಥಗಳು॥೨೦॥

ಅ ॥ ಆ ಇಂದ್ರಿಯಗಳ ಉಪಯೋಗಕ್ಕೆ ಉಪಕಾರಿಯಾದ ಮನೋ ಇಂದ್ರಿಯಕ್ಕೆ ವಿಷಯವನ್ನು ಹೇಳುತ್ತಾರೆ.

ಸೂ ॥ ಶ್ರುತಮನಿಂದ್ರಿಯಸ್ಯ ॥ ೨೧ ॥

ಟೀ || ಶ್ರುತಂ-ಶಾಸ್ತ್ರಜ್ಞಾನವು, ಅನಿಂದ್ರಿಯಸ್ಯ-ಮನಸ್ಸಿಗೆ ವಿಷಯವಾಗುವದು || ೨೧ ||

ಅ || ಸ್ಪರ್ಶನೇಂದ್ರಿಯಕ್ಕೆ ಸ್ವಾಮಿತ್ವವನ್ನು ಹೇಳುತ್ತಾರೆ.

ಸೂ || ವನಸ್ಪತ್ಯಂತಾನಾಮೇಕಂ || ೨೨ ||

ಟೀ || ವನಸ್ಪತ್ಯಂತಾನಾಂ-ಪೃಥುವಿಮೊದಲಾದ ವನಸ್ಪತಿಯೇ ಕೊನೆಯಲ್ಲಿವುಳ್ಳ ಐದು ಸ್ಥಾವರಜೀವಗಳಿಗೆ, ಏಕಂ-ವಂದೇಸ್ಪರ್ಶನೇಂದ್ರಿಯವು || ೨೨ ||

ಅ || ದ್ವೀಂದ್ರಿಯಾದಿಗಳಿಗೆ ಸ್ವಾಮಿತ್ವವನ್ನು ಹೇಳುತ್ತಾರೆ.

ಸೂ || ಕ್ರಿಮಿಪಿಪೀಲಿಕಾಭ್ರಮರಮನುಷ್ಯಾದೀನಾಮೇಕೈಕವೃದ್ಧಾನಿ || ೨೩ ||

ಟೀ || ಕ್ರಿಮಿಪಿಪೀಲಿಕಾಭ್ರಮರಮನುಷ್ಯಾದೀನಾಂ-ಕ್ರಿಮಿ- ಹುಳು ಮೊದಲಾದವುಗಳು, ಪಿಪೀಲಿಕಾ-ಇರುವೆಮೊದಲಾದವುಗಳು, ಭ್ರಮರ-ತುಂಬಿಮೊದಲಾದವುಗಳು, ಮನುಷ್ಯಾನೀನಾಂ-ಮನುಷ್ಯರೇಮೊದಲಾದವುಗಳಿಗೆ, ಏಕೈಕವೃದ್ಧಾನಿ-ಏಕೈಕ-ವೊಂದೊಂದು ಇಂದ್ರಿಯವು, ವೃದ್ಧಾನಿ-ವೃದ್ಧಿಯನ್ನು ಹೊಂದಿದಂಥಾವುಗಳು || ಅಂದರೆ, ಕ್ರಿಮಿ ಮೊದಲಾದವುಗಳಿಗೆ ಸ್ಪರ್ಶನ, ರಸನವೆಂಬ ಎರಡು ಇಂದ್ರಿಯಗಳು || ಇರುವೆಮೊದಲಾದವುಗಳಿಗೆ ಸ್ಪರ್ಶನ, ರಸನ, ಘ್ರಾಣ, ವೆಂಬ ಮೂರು ಇಂದ್ರಿಯಗಳು || ತುಂಬಿಮೊದಲಾದವುಗಳಿಗೆ ಸ್ಪರ್ಶನ, ರಸನ, ಘ್ರಾಣ, ಚಕ್ಷುಃ ಎಂಬ ನಾಲ್ಕುಇಂದ್ರಿಯಗಳು || ಮನುಷ್ಯರೇಮೊದಲಾದವುಗಳಿಗೆ ಸ್ಪರ್ಶನ, ರಸನ, ಘ್ರಾಣ, ಚಕ್ಷುಃ, ಶ್ರೋತ್ರವೆಂಬ ಐದು ಇಂದ್ರಿಯಗಳು || ೨೩ ||

ಅ || ಮನಸ್ಸುಳ್ಳ ಸಂಸಾರಿಜೀವಗಳನ್ನು ಹೇಳುತ್ತಾರೆ.

ಸೂ || ಸಂಜ್ಞಿನಃಸಮನಸ್ಕಾಃ || ೨೪ ||

ಟೀ || ಸಂಜ್ಞಿನಃ-ಹಿತಾಹಿತಪ್ರಾಪ್ತಿಪರಿಹಾರ ಪರೀಕ್ಷಾ ಕಲಿತಮನೋವ್ಯಾಪಾರವುಳ್ಳ ಸಂಜ್ಞಿಜೀವಗಳು. ಸಮನಸ್ಕಾಃ-ಭಾವಮನಸ್ಸಿನೊಡನೆಕೂಡಿದಂಥಾವುಗಳು || ಮನೋಇಂದ್ರಿಯದೊಡನೆ ಕೂಡಿದಂಥಾಜೀವಗಳೆಲ್ಲ ಸಂಜ್ಞಿಜೀವಗಳು || ಉಳಿದಸಂಸಾರಿಜೀವಗಳೆಲ್ಲಾ ಅಸಂ

ಜ್ಞಿ ಜೀವಗಳು ॥ ಹಿತಾಹಿತಗಳನ್ನು ಪರೀಕ್ಷೆಮಾಡುವ ವಿವೇಕಜ್ಞಾನವೇ ಸಂಜ್ಞೆಯೆಂಬುವದು ॥ ೨೪ ॥

ಪರಲೋಕಗಮನಾಧಿಕರಣಂ.

ಅ ॥ ನೂತನವಾದ ಶರೀರಭವಗ್ರಹಣವನ್ನು ಕುರಿತು ಉಪ್ಯುಕ್ತನಾದ ಬಿಡಲ್ಪಟ್ಟ ಪೂರ್ವಶರೀರವುಳ್ಳಂಥ ಮನೋಇಂದ್ರಿಯವಿಲ್ಲದ ಜೀವನಿಗೆ ವಿಗ್ರಹಗತಿಯಲ್ಲಿ ಉಂಟಾಗುವವ್ಯಾಪಾರವು ಯಾವದರಿಂದಶಯಿಂದ ಉಂಟಾಗುತ್ತೆ ಎಂಬುವದನ್ನು ಹೇಳುತ್ತಾರೆ.

ಸೂ ॥ ವಿಗ್ರಹಗತೌಕರ್ಮಯೋಗಃ ॥ ೨೫ ॥

ಟೀ ॥ ವಿಗ್ರಹಗತೌ-ಒಂದುಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಪಡೆಯುವದರಲ್ಲಿ, ಕರ್ಮಯೋಗಃ- ಕಾರ್ಮಣಕಾಯ ಯೋಗವು ॥ ೨೫ ॥

ಅ ॥ ಗಮನವುಳ್ಳ ಜೀವಪುದ್ಗಲಗಳ ಗಮನಹ್ಯಾಗೆ ಆಗುವದೋ ಅದನ್ನು ಹೇಳುತ್ತಾರೆ.

ಸೂ ॥ ಅನುಶ್ರೇಣೀಗತಿಃ ॥ ೨೬ ॥

ಟೀ ॥ ಗತಿಃ-ಕಾಲದೇಶನಿಯಮದಿಂದ ಆಗುವ ಜೀವಪುದ್ಗಲಗಳ ಗಮನವು, ಅನುಶ್ರೇಣೀ-ಆಕಾಶಪ್ರದೇಶಪಙ್ಕ್ತಿಕ್ರಮದಿಂದ ( ಆಗುತ್ತೆ ) ಕಾಲನಿಯಮವೆಂದರೆ, ಜೀವಪುದ್ಗಲಗಳಿಗೆ ಮರಣಕಾಲದಲ್ಲಿ ಭವಾಂತರಸಂಕ್ರಮಣದಲ್ಲಿ ಮತ್ತು ಮುಕ್ತರಿಗೆ ಊರ್ಧ್ವಗಮನಕಾಲದಲ್ಲೂ ಅನುಶ್ರೇಣಿ ಗತಿಯು, ದೇಶನಿಯಮವೆಂದರೆ ಊರ್ಧ್ವಲೋಕದಿಂದಅಧೋಲೋಕಗಮನವು, ಅಧೋಲೋಕದಿಂದ ಊರ್ಧ್ವಲೋಕಗಮನವು, ತಿರ್ಯಗ್ಲೋಕದಿಂದಊರ್ಧ್ವಲೋಕ ಗಮನವು ಪುದ್ಗಲಗಳಿಗೆ ಅನುಶ್ರೇಣಿಯಿಂದಲೇ ಆಗುತ್ತೆ ॥ ಅನುಶ್ರೇಣಿಗತಿ ಅಂದರೆ ಲೋಕಾಂತರವನ್ನು ಪಡೆಯುವದು ॥ ೨೬ ॥

ಅ ॥ ಮುಕ್ತಾತ್ಮನಿಗೆ ವಿಶೇಷವನ್ನು ಹೇಳುತ್ತಾರೆ.

ಸೂ ॥ ಅವಿಗ್ರಹಾಜೀವಸ್ಯ ॥ ೨೭ ॥

ಟೀ ॥ ಜೀವಸ್ಯ-ಮುಕ್ತಜೀವನಿಗೆ, ಅವಿಗ್ರಹಾ-ವಕ್ರವಿಲ್ಲದೇಯಿರುವ ಗತಿಯು ಅಂದರೆ ಮುಕ್ತಾತ್ಮನಿಗೆ ಲೋಕಾಂತಪರ್ಯಂತರವು ವಕ್ರವಿಲ್ಲದೇ ಏಕಸಮಯವುಳ್ಳಂಥಾಗತಿಯು ಉಂಟಾಗುತ್ತೆ ॥ ೨೭ ॥

ಅ || ಸಂಸಾರಿಜೀವಗತಿ ಸ್ವರೂಪವನ್ನು ಹೇಳುತ್ತಾರೆ.

ಸೂ||ವಿಗ್ರಹವತೀ ಚ ಸಂಸಾರಿಣಃ ಪ್ರಾಕ್‌ಚತುರ್ಭ್ಯಃ ||

ಟೀ || ಸಂಸಾರಿಣಃ-ಸಂಸಾರಿಜೀವಗಳಿಗೆ, ಪ್ರಾಕ್‌ಚತುರ್ಭ್ಯಃ-ನಾಲ್ಕುಸಮಯಗಳಗಿಂತಲೂ ಮೊದಲೇ, ವಿಗ್ರಹವತೀಚ-ವಕ್ರವುಳ್ಳಂಥಾ, ಚ-ಶಬ್ದದಿಂದ ವಕ್ರವಿಲ್ಲದಂಥಾಗತಿವುಳ್ಳಂಥಾದ್ದು || (೧) ಬಾಣದಂತೆ ನೆಟ್ಟಗೆ ಹೋಗುವದು-ಇಷುಗತಿಯು || (೨) ಇಟ್ಟಗುಂಡಿನಂತೆ ಒಂದು ವಕ್ರವುಳ್ಳ ಪಾಣಿಮುಕ್ತಗತಿಯು || (೩) ನೇಗಿಲಂತೆರಡು ವಕ್ರವುಳ್ಳ-ಲಾಂಗಲಗತಿಯು || (೪) ಗೋಮೂತ್ರದಂತೆ ೩ ವಕ್ರವುಳ್ಳ ಗೋಮೂತ್ರಗತಿಯು || ಎಂದು ನಾಲ್ಕು ಪ್ರಕಾರಗತಿಯು || ೨೮ ||

ಅ || ಋಜುಗತಿಕಾಲವನ್ನು ಹೇಳುತ್ತಾರೆ.

ಸೂ || ಏಕಸಮಯಾವಿಗ್ರಹಾ || ೨೯ ||

ಟೀ || ಏಕಸಮಯಾ-ಒಂದುಸಮಯವುಳ್ಳಂಥಾದ್ದು, ವಿಗ್ರಹಾ-ವಕ್ರವಿಲ್ಲದೇಯಿರುವಂಥಾಗತಿ ಯಾಗುವದು || ೨೯ ||

ಅ || ಅನಾದಿಕರ್ಮಬಂಧ ಸಂತತಿಯಲ್ಲಿ ಮಿಥ್ಯಾದರ್ಶನಾದಿ ಕಾರಣವಶದಿಂದ ಕರ್ಮಗತಿಗಳನ್ನು ಸ್ವೀಕರಿಸುವಂಥಾಜೀವಕ್ಕೆ ವಿಗ್ರಹಗತಿಯಸಮಯವನ್ನು ಹೇಳುತ್ತಾರೆ.

ಸೂ || ಏಕಂ ದ್ವೌ ತ್ರೀನ್ವಾ ನಾಹಾರಕಃ ||೩೦||

ಟೀ | ಏಕಂವಾ-ಒಂದುಸಮಯವನ್ನಾದರೂ, ದ್ವೌವಾ-ಎರಡುಸಮಯಗಳನ್ನಾದರೂ, ತ್ರೀನ್ವಾ-ಮೂರುಸಮಯವನ್ನಾದರೂ, ಅನಾಹಾರಕಃ-ಅನಾಹಾರಕನಾಗುತ್ತಾನೆ || ಔದಾರಿಕ, ವೈಕ್ರಿಯಿಕ, ಆಹಾರಕ, ಈ ೩ ಶರೀರಗಳಿಗೂ, ಆರುಪರ್ಯಾಪ್ತಿಗಳಿಗೂ ಯೋಗ್ಯಪುದ್ಗಲಗಳನ್ನು ಅಂಗೀಕರಿಸುವದಕ್ಕೆ ಆಹಾರಕವೆಂದು ಹೆಸರು || (ತ್ರಯಾಣಾಂ ಶರೀರಾಣಾಂ ಷಣ್ಣಾಂ ಪರ್ಯಾಪ್ತಿನಾಂ ಗ್ರಹಣಮಾಹಾರಃ) || ಇದನ್ನು ಅಂಗೀಕರಿಸದೇ ಇರುವದಕ್ಕೆ ಅನಾಹಾರಕವೆಂದು ಹೆಸರು || ೩೦ ||

ಜನ್ಮಾಧಿಕರಣಂ.

ಅ || ಅಭಿನವಶರೀರಾಂತರ ನಿಷ್ಪತ್ತಿಪ್ರಕಾರವನ್ನು ಹೇಳುತ್ತಾರೆ.

ಸೂ || ಸಂಮೂರ್ಚ್ಛನಗರ್ಭೋಪಪಾದಾಜ್ಜನ್ಮ || ೩೧ ||

ಟೀ || ಸಂಮೂರ್ಚ್ಛನಗರ್ಭೋಪಪಾದಾತ್-ಸಂಮೂರ್ಚ್ಛನ-ಸುತ್ತಲುಇದ್ದ ಪುದ್ಗಲಗಳನ್ನು ಶರೀರರೂಪದಿಂದ ಅಂಗೀಕರಿಸುವದು, ಗ

ರ್ಭ-ಶುಕ್ಲ ಶೋಣಿತಮಿಶ್ರನಾದಸ್ಥಿರೇಜಠವು, ಉಪಪಾದ-ದೇವನಾರಕ ರುಹುಟ್ಟತಕ್ಕ ಪ್ರದೇಶವು, ಇವುಗಳದೆಶೆಯಿಂದ, ಜನ್ಮ-ಉತ್ಪತ್ತಿಯು ||

ಅ || ಜನ್ಮವಿಶೇಷಗಳಿಗೆ ಆಧಾರವಿಶೇಷವನ್ನು ಹೇಳುತ್ತಾರೆ.

ಸೂ || ಸಚಿತ್ತಶೀತಸಂವೃತಾಸ್ಸೇತರಾಮಿಶ್ರಾಶ್ಚೈಕಶಸ್ತ ದ್ಯೋನಯಃ || ೩೨ ||

ಟೀ || ಸಚಿತ್ತಶೀತಸಂವೃತಾಃ-ಮೊದಲು ಮತ್ತೊಬ್ಬಜೀವನಿಂದ ಶರೀರರೂಪದಿಂದ ಅಂಗೀಕರಿಸಿರುವ ಪುದ್ಗಲಸ್ಕಂಧವು, ಶೀತ-ಶೀತಲಗುಣ ವಿಶಿಷ್ಟವಾದ ಪುದ್ಗಲಸ್ಕಂಧವು, ಸಂವೃತಾಃ-ಒಳಗೆ ಬಚ್ಚುಲಾಗಿ ಬಾಗಿಲಿಲ್ಲದ ಪುದ್ಗಲಸ್ಕಂಧವು, ಎನ್ನುವ ಇವುಗಳು, ಸೇತರಾಃ-ಇವುಗಳಿಗೆ ಪ್ರತಿಕೂಲಗಳಾದ ಅಚಿತ್ತ, ಉಷ್ಣ, ವಿವೃತ, ಗಳೊಡನೆಕೂಡಿದವುಗಳು, ಏಕಶಃ-ಹಿಂದೆಹೇಳಿದ ಮೂರುರಲ್ಲಿಯೂ, ಮಿಶ್ರಾಃ-ಮಿಶ್ರಗಳಾದ, ಸಚಿತ್ತಾಚಿತ್ತ, ಶೀತೋಷ್ಣ, ಸಂವೃತವಿವೃತ, ಗಳೆಂಬುವಗಳು, ತದ್ಯೋನಯಃ-ಆಸಂಮೂರ್ಚ್ಛನಾದಿಗಳಿಗೆ ಉತ್ಪತ್ತಿಸ್ಥಾನಗಳು || ಮೇಲೆಹೇಳಿದ ಒಂಭತ್ತುಗಳು ವಿಸ್ತಾರದಿಂದ ೮೪ ಲಕ್ಷ ಯೋನಿಗಳಾಗುತ್ತವೆ || ಮತ್ತು, ಶಂಖಾವರ್ತ, ಕೂರ್ಮೋನ್ನತ, ವಂಶಪತ್ರ, ಎಂಬ ೩ ಭೇದಗಳುಉಂಟು || ೩೨ ||

ಅ || ಗರ್ಭಜನ್ಮಭೇದವನ್ನು ಹೇಳುತ್ತಾರೆ.

ಸೂ || ಜರಾಯುಜಾಂಡಜಪೋತಾನಾಂ ಗರ್ಭಃ || ೩೩ ||

ಟೀ || ಜರಾಯುಜಾಂಡಜಪೋತಾನಾಂ- ಜರಾಯು-ಮಾಸಿನಲ್ಲಿಮುಚ್ಚಿಕೊಂಡುಹುಟ್ಟುವದು, ಅಂಡಜ-ಮೊಟ್ಟೆಯಾಗಿಹುಟ್ಟುವುದು, ಪೋತಾನಾಂ-ಸ್ವಲ್ಪ ಆವರಣವಿಲ್ಲದೇ (ಪರಿಪೂರ್ಣಅವಯವವುಳ್ಳದ್ದಾಗಿ) ಹುಟ್ಟಿದವಾತ್ರದಲ್ಲೇ ಚಲನಾದಿವ್ಯಾಪಾರವುಳ್ಳಂಥಾವು ಈ ೩ ಗಳಿಗೆ, ಗರ್ಭಃ-ಗರ್ಭಜನ್ಮವು ಆಗುತ್ತೆ || ೩೩ ||

ಅ || ಉಪಪಾದ ಜನ್ಮೋತ್ಪನ್ನರನ್ನು ಹೇಳುತ್ತಾರೆ.

ಸೂ || ದೇವನಾರಕಾಣಾಮುಪಪಾದಃ || ೩೪ ||

ಟೀ || ದೇವನಾರಕಾಣಾಂ-ದೇವತೆಗಳಿಗೂ ನಾರಕರುಗಳಿಗೂ, ಉಪಪಾದಃ-ಉಪಪಾದವು ಉತ್ಪತ್ತಿಸ್ಥಾನವು || ೩೪ ||

ಅ || ಸಮ್ಮೂರ್ಚ್ಛನಯಾರಿಗೆಂಬುವದನ್ನ ಹೇಳುತ್ತಾರೆ.

ಸೂ || ಶೇಷಾಣಾಂ ಸಂಮೂರ್ಚ್ಛನಂ || ೩೫ ||

ಟೀ || ಶೇಷಾಣಾಂ-ಉಳಿದಜೀವಗಳಿಗೆ, ಸಂಮೂರ್ಚ್ಛನಂ-ಸಂಮೂರ್ಚ್ಛನಜನ್ಮವಂದೇಆಗುತ್ತೆ || ೩೫ ||

ಶ ರೀ ರಾ ಧಿ ಕ ರ ಣ ಂ.

ಅ || ಶರೀರಭೇದಗಳನ್ನು ಹೇಳುತ್ತಾರೆ.

ಸೂ || ಔದಾರಿಕವೈಕ್ರಿಯಿಕಾಹಾರಕತೈಜಸಕಾರ್ಮಣಾನಿ ಶರೀರಾಣಿ || ೩೬ ||

ಟೀ || ಔದಾರಿಕವೈಕ್ರಿಯಿಕಾಹಾರಕತೈಜಸಕಾರ್ಮಣಾನಿ-ಔದಾರಿಕ-ಔದಾರಿಕ ಶರೀರವೆಂತಲೂ, ವೈಕ್ರಿಯಿಕ-ವೈಕ್ರಿಯಿಕ ಶರೀರವೆಂತಲೂ, ಆಹಾರಕ-ಆಹಾರಕ ಶರೀರವೆಂತಲೂ, ತೈಜಸ-ತೈಜಸ ಶರೀರವೆಂತಲೂ, ಕಾರ್ಮಣಾನಿ-ಕಾರ್ಮಣ ಶರೀರವೆಂತಲೂ, ಶರೀರಾಣಿ-ಶರೀರಗಳು ೫ ಪ್ರಕಾರವು || ಇವುಗಳು ತಂಮತಂಮ ಶರೀರನಾಮಕರ್ಮೋದಯದಿಂದ ಆಗುತ್ತವೆ || ಉದಾರವೆಂಬುವದು ಸ್ಥೂಲ, ಅದರಲ್ಲಿಆದದ್ದು ಔದಾರಿಕವು || ಅಷ್ಟಗಣೈಶ್ವರ್ಯಸಂಬಂಧದಿಂದ, ವೊಂದು-ಅನೇಕ, ಅಣು, ಮಹತ್‌ಶರೀರವಿಕರಣವೇ ವೈಕ್ರಿಯಿಕ-ಇದು ಪೃಥಗ್ವಿಕ್ರಿಯೆ, ಏಕತ್ವವಿಕ್ರಿಯೆ ಎಂದು ಎರಡುವಿಧವು ! ತನ್ನ ಶರೀರದಿಂದಹೊರಗೆ ಪೃಥಗ್ವಿಕ್ರಿಯೆಯು । ಶರೀರದಿಂದ ಬೇರೆಯಲ್ಲದ್ದೇ ಏಕತ್ವವಿಕ್ರಿಯೆಯು । ಅದಕ್ಕೆ ಪ್ರಯೋಜನಇದು ಎಂದು ವೈಕ್ರಿಯಿಕ || ಸೂಕ್ಷ್ಮಪದಾರ್ಥಗಳ ತಿಳಿಯುವದಕ್ಕೋಸ್ಕರಲೂ, ಜಿನರನ್ನು. ಜಿನಗೃಹಗಳನ್ನು ನಮಸ್ಕಾರಮಾಡುವದಕ್ಕೋಸ್ಕರಲೂ, ಪ್ರಮತ್ತಸಂಯತನಿಂದ ಕೈಕೊಳ್ಳುವದು ಆಹಾರಕಶರೀರವು || ತೈಜಸನಾಮಕರ್ಮೋದಯದಿಂದ ಆದದ್ದು ತೈಜಸ || ಅಷ್ಟವಿಧಕರ್ಮಸ್ಕಂಧಗಳೇಕಾರ್ಮಣ ಶರೀರವು||

ಅ || ಸ್ಥೂಲವಾದ ಔದಾರಿಕ ಶರೀರವಲ್ಲದೆ ಇತರ ಶರೀರಸ್ವರೂಪವನ್ನ ಹೇಳುತ್ತಾರೆ.

ಸೂ || ಪರಂಪರಂ ಸೂಕ್ಷ್ಮಂ || ೩೭ ||

ಟೀ || ಪರಂಪರಂ-ಕೊನೆಕೊನೆಶರೀರವು ಅಂದರೆ ವೊಂದುಶರೀರಕ್ಕಿಂತ ಒಂದುಶರೀರವು, ಸೂಕ್ಷ್ಮಂ-ಸ್ವಲ್ಪವಾದಂಥಾದ್ದಾಗುತ್ತೆ || ೩೭ ||

ಅ ॥ ಒಂದುಶರೀರಕ್ಕಿಂತ ಒಂದುಸೂಕ್ಷ್ಮವಾದರೂ ಪ್ರದೇಶದ್ವೇಷಿಯಿಂದ ಹೀನವಲ್ಲವೆಂದು ಹೇಳುತ್ತಾರೆ.

ಸೂ ॥ ಪ್ರದೇಶತೋಽಸಂಖ್ಯೇಯಗುಣಂ ಪ್ರಾಕ್ತೈಜಸಾತ್ ॥೩೮॥

ಟೀ ॥ ತೈಜಸಾತ್-ತೇಜಶ್ಶರೀರದ್ವೇಷಯಿಂದ, ಪ್ರಾಕ್-ಮೊದಲಲ್ಲಿ, ಪ್ರದೇಶತಃ- ಪರಮಾಣುಸಂಖ್ಯೆಯಪೇಕ್ಷೆಯಿಂದ, ಅಸಂಖ್ಯೇಯಗುಣಂ-ವೊಂದಕ್ಕೊಂದಕ್ಕೆ ಅಸಂಖ್ಯಾತಗುಣವುಳ್ಳದ್ದು ॥ ೩೮ ॥

ಅ ॥ ತೈಜಸಕಾರ್ಮಣ ಶರೀರಗಳಿಗೆ ಪ್ರದೇಶವನ್ನು ಹೇಳುತ್ತಾರೆ.

ಸೂ ॥ ಅನಂತಗುಣೇ ಪರೇ ॥ ೩೯ ॥

ಟೀ ॥ ಪರೇ-ಕೊನೇದಾದ ತೈಜಸಕಾರ್ಮಣಶರೀರಗಳೇರಡು, ಅನಂತಗುಣೇ-ಪ್ರದೇಶದಿಂದ ಅನಂತಗುಣವುಳ್ಳಂಥಾವುಗಳು. ಅಂದರೆ ಆಹಾರಕಶರೀರಕ್ಕಿಂತ ತೈಜಸಶರೀರವು ಅನಂತಗುಣಹೆಚ್ಚು - ತೈಜಸಕ್ಕಿಂತಕಾರ್ಮಣ ಶರೀರಅನಂತಗುಣಹೆಚ್ಚು ॥ ೩೯ ॥

ಅ ॥ ತೈಜಸಕಾರ್ಮಣಗಳೆರಡು ಪ್ರತಿಘಾತಸಮನ್ವಿತಗಳಲ್ಲ ವೆಂದು ಹೇಳುತ್ತಾರೆ.

ಸೂ ॥ ಅಪ್ರತಿಘಾತೇ ॥ ೪೦ ॥

ಟೀ ॥ ಅಪ್ರತಿಘಾತೇ-ತೈಜಸಕಾರ್ಮಣಶರೀರಗಳು ಅಯಃಪಿಂಡಾಂತರ್ಗತ ವಹ್ನಿಯಂತೆ ಪ್ರತಿಘಾತವಿಲ್ಲದೇ ಇರುವಂಥಾವುಗಳು ॥ ೪೦॥

ಅ ॥ ಈ ತೈಜಸ ಕಾರ್ಮಣಶರೀರಗಳಿಗೆ ಮತ್ತು ವಿಶೇಷವನ್ನು ಹೇಳುತ್ತಾರೆ.

ಸೂ ॥ ಅನಾದಿಸಂಬಂಧೇ ಚ ॥ ೪೧ ॥

ಟೀ ॥ ಅನಾದಿಸಂಬಂಧೇ-ಅನಾದಿಸಂಬಂಧವು, ಚ-ಚಶಬ್ದದಿಂದ ಆದಿಸಂಬಂಧವು ಉಳ್ಳಂಥಾವುಗಳು ಆಗುತ್ತೆಂದು ತಿಳಿಯತಕ್ಕದ್ದು ॥೪೧॥

ಅ ॥ ಎರಡು ಯಾರಿಗೆಆಗುತ್ತೆ ಎಂಬುವದನ್ನು ಹೇಳುತ್ತಾರೆ.

ಸೂ ॥ ಸರ್ವಸ್ಯ ॥ ೪೨ ॥

ಟೀ ॥ ಸರ್ವಸ್ಯ-ಸರ್ವಸಂಸಾರಿಪ್ರಾಣಿಗಳಿಗೂ ತೈಜಸಕಾರ್ಮಣ ಶರೀರಗಳು ಅನಾದಿಸಂಬಂಧವುಳ್ಳಂಥಾವುಗಳು ॥ ೪೨ ॥

ಅ ॥ ಒಂದುಜೀವನಲ್ಲಿ ಒಂದೇದಪಾ ಎಷ್ಟುಶರೀರಗಳು ಆಗುತ್ತವೆ ಎಂಬುವದನ್ನ ಹೇಳುತ್ತಾರೆ.

ಸೂ॥ ತದಾದೀನಿ ಭಾಜ್ಯಾನಿ ಯುಗಪದೇಕಸ್ಮಿನ್ನಾ ಚತುರ್ಭ್ಯಃ ॥

ಟೀ ॥ ಯುಗಪತ್-ಏಕಕಾಲದಲ್ಲಿ, ಏಕಸ್ಯ-ವೊಂದುಜೀವಕ್ಕೆ,

ಆಚತುರ್ಭ್ಯಃ_ಆ ನಾಲ್ಕು ಶರೀರ ಪರ್ಯಂತರದಲ್ಲೂ, ತದಾದೀನಿ-ತತ್-ಆ ತೈಜಸಕಾರ್ಮಣಶರೀರಗಳೇ, ಆದೀನಿ-ಮೊದಲಾದಂಥಾವುಗಳು, ಭಾಜ್ಯಾನಿ-ವಿಭಾಗಿಸುವದಕ್ಕೆ ಯೋಗ್ಯವಾದಂಥಾವುಗಳು ||

ತಾ || ವಿಗ್ರಹಗತಿಯನ್ನು ಹೊಂದಿರುವಜೀವಕ್ಕೆ ತೈಜಸ ಕಾರ್ಮಣಗಳೆಂಬ ಎರಡು ಶರೀರಗಳುಂಟಾಗುತ್ತೆ || ವಿಗ್ರಹಗತಿಯಿಲ್ಲದ ಕಾಲದಲ್ಲಿ ಔದಾರಿಕ, ತೈಜಸ, ಕಾರ್ಮಣ ಈ ಮೂರು ಉಂಟಾಗುತ್ತದೆ || ಅಥವಾ ವೈಕ್ರಿಯಿಕ, ತೈಜಸ, ಕಾರ್ಮಣ, ಯೀಮೂರುಶರೀರಗಳು ಉಂಟಾಗುತ್ತೆ || ಒಂದುಜೀವಕ್ಕೆ ಔದಾರಿಕ, ಆಹಾರಕ, ತೈಜಸ, ಕಾರ್ಮಣವೆಂಬುವಂಥಾ ನಾಲ್ಕುಶರೀರಗಳು ಏಕಕಾಲದಲ್ಲಿ ಉಂಟಾಗುತ್ತೆ || ೪೩ ||

ಅ || ಮತ್ತು ಈ ಶರೀರಗಳಿಗೆ ವಿಶೇಷವನ್ನು ಹೇಳುತ್ತಾರೆ.

ಸೂ || ನಿರುಪಭೋಗಮಂತ್ಯಂ || ೪೪ ||

ಟೀ || ಅಂತ್ಯಂ-ಕೊನೆಯದಾದ ಕಾರ್ಮಣಶರೀರವು, ನಿರುಪಭೋಗಂ-ದ್ರವ್ಯೇಂದ್ರಿಯೋಪಭೋಗವು ಇಲ್ಲದೇ ಇರುವಂಥಾದ್ದು ||

ತಾ || ಇಂದ್ರಿಯಾನಿಂದ್ರಿಯ ನಿಮಿತ್ತವಾದ ಶಬ್ದವೊದಲಾದವುಗಳ ಗ್ರಹಣವ್ಯಾಪಾರವೇ ಉಪಭೋಗವೆಂಬುವದು || ಇದು ವಿಗ್ರಹಗತಿಯಲ್ಲಿ ಇಲ್ಲ || ೪೪ ||

ಅ || ಔದಾರಿಕಶರೀರವು ಉಂಟಾಗುವ ಜನ್ಮಗಳನ್ನು ಹೇಳುತ್ತಾರೆ.

ಸೂ || ಗರ್ಭಸಂಮೂರ್ಛನಜಮಾದ್ಯಂ || ೪೫ ||

ಟೀ || ಆದ್ಯಂ-ಮೊದಲನೇದಾದ ಔದಾರಿಕಶರೀರವು ಗರ್ಭಸಂಮೂರ್ಛನಜಂ-ಗರ್ಭ-ಗರ್ಭಜನ್ಮದಲ್ಲಿಯೂ, ಸಂಮೂರ್ಛನಜಂ-ಸಂಮೂರ್ಛನಜನ್ಮದಲ್ಲಿಯೂ ಹುಟ್ಟುವಂಥಾದ್ದು. || ತಾ || ಗರ್ಭದಲ್ಲಿ ಯಾವಶರೀರಉಂಟಾಗುತ್ತೊಮತ್ತುಸಂಮೂರ್ಛನದಲ್ಲಿಯಾವಶರೀರವು ಉಂಟಾಗುತ್ತೊ ಆ ಈ ಶರೀರಗಳೆಲ್ಲಾ ಔದಾರಿಕಶರೀರಗಳು || ೪೫ ||

ಅ || ವೈಕ್ರಿಯಿಕಶರೀರ ಉಂಟಾಗುವ ಜನ್ಮವನ್ನು ಹೇಳುತ್ತಾರೆ.

ಸೂ || ಔಪಪಾದಿಕಂ ವೈಕ್ರಿಯಿಕಂ || ೪೬ ||

ಟೀ || ವೈಕ್ರಿಯಿಕಂ-ವೈಕ್ರಿಯಿಕಶರೀರವು, ಔಪಪಾದಿಕಂ-ಉಪಪಾದದಲ್ಲಿ ಹುಟ್ಟುವಂಥಾದ್ದು || ೪೬ ||

## ತೃತೀಯೋಧ್ಯಾಯ ಪ್ರಾರಂಭಃ.

### ನ ರ ಕಾ ಧಿ ಕ ರ ಣ ಂ.

ಅ ॥ ಚತುರ್ಗತಿಯಲ್ಲಿ ತೊಳಲುವ ಸಂಸಾರಿಜೀವಗಳು ಅನೇಕವಿಧದಿಂದ ಹೇಳಲ್ಪಟ್ಟವೆ. ಅವರಲ್ಲಿ ನರಕಗತಿಯಲ್ಲಿ ತೊಳಲುವಜೀವಗಳಿಗೆ ಆಧಾರವಾದ ನರಕಭೂಮಿಯಸಂಖ್ಯೆ, ಸ್ಥಿತಿ, ಗಳನ್ನು ಹೇಳುತ್ತಾರೆ.

ಸೂ ॥ ರತ್ನ ಶರ್ಕರಾವಾಲುಕಾಪಂಕಧೂಮತಮೋಮಹಾತ ಮಃಪ್ರಭಾ ಭೂಮಯೋ ಘನಾಂಬುವಾತಾಕಾಶಪ್ರತಿಷ್ಠಾ ಸ್ಸಪ್ತಾಧೋಧಃ ॥ ೧ ॥

ಟೀ ॥ ರತ್ನಶರ್ಕರಾವಾಲುಕಾಪಂಕಧೂಮತಮೋಮಹಾತಮಃಪ್ರಭಾಃ-ರತ್ನ-ರತ್ನಪ್ರಭೆಯು, ಶರ್ಕರಾ-ಶರ್ಕರಪ್ರಭೆಯು, ವಾಲುಕಾ-ವಾಲುಕಪ್ರಭೆಯು, ಪಂಕ=ಪಂಕಪ್ರಭೆಯು, ತಮಃ-ತಮಃಪ್ರಭೆಯು, ಮಹಾತಮಃಪ್ರಭಾಃ=ಮಹಾತಮಃಪ್ರಭೆಯು, (ಎಂಬ) ಸಪ್ತ- ಈ ಏಳು, ಅಧೋಧಃ-ಕ್ರಮವಾಗಿ ವೊಂದರಕೆಳಗೆವೊಂದು, ಘನಾಂಬುವಾತಾಕಾಶ ಪ್ರತಿಷ್ಠಾಃ- ಘನ-ಘನೋದಧಿಯು, ಅಂಬು-ಘನಾನಿಲವು, ವಾತ-ತನುವಾತವು, ಆಕಾಶ-ಆಕಾಶವು ಎಂಬ ಇವುಗಳಲ್ಲಿ,ಪ್ರತಿಷ್ಠಾಃ - ಇರುತ್ತವೆ॥

ತಾ॥ ರತ್ನಪ್ರಭಾ,ಶರ್ಕರಾಪ್ರಭಾ,ವಾಲುಕಾಪ್ರಭಾ,ಪಂಕಪ್ರಭಾ,ಧೂಮಪ್ರಭಾ,ತಮಃಪ್ರಭಾ,ಮಹಾತಮಃಪ್ರಭಾ,ಈ ೭ನರಕದಹೆಸರುಗಳು ಈ ಹೆಸರುಗಳು ಅದರಗುಣವನ್ನು ಅನುಸರಿಸಿ ಬಂದಹೆಸರುಗಳಾಗಿವೆ ಈ ೭ ಕ್ಕು ಕ್ರಮವಾಗಿ ಈಮುಂದೆಬರೆಯುವ ೭ಹೆಸರುಗಳುಇವೆ. ೧ ಘರ್ಮಾ ೨ ವಂಶಾ ೩ ಮೇಘಾ ೪ ಅಂಜನಾ ೫ ಅರಿಷ್ಟಾ ೬ ಮಘವೀ ೭ ಮಾಘವಿ ॥ ಈ ೭ ನರಕಗಳು ಕ್ರಮವಾಗಿ ವೊಂದರಕೆಳಗೆಮತ್ತೊಂದು ಇರುತ್ತವೆ. ಇವುಗಳು ಘನೋದಧಿ, ಘನಾನಿಲ, ತನುವಾತ, ಆಕಾಶ ಇವುಗಳಮಧ್ಯೆಇರುತ್ತವೆ॥ರತ್ನಪ್ರಭಾಎಂಬ ನರಕಭೂಮಿಯುಸ್ವರಭಾಗ,ಪಂಕಭಾಗ ಅಬ್ಬಹುಲಭಾಗಎಂದು ೩ ಭಾಗವಾಗಿದೆ. ಸ್ವರಭಾಗದಲ್ಲಿ ಚಿತ್ರಾ-ವಜ್ರಾ-ವೈಢೂರ್ಯವೊದಲಾದ ೧೬ ಭಾಗಗಳುಇವೆ. ಒಂದೊಂದುಸಾವಿರ ಯೋಜನದಪ್ಪವುಳ್ಳವಾಗಿಇವೆ. ಇದರಲ್ಲಿಮೇಲಿನ ಕೆಳಗಿನ ಭಾಗದಭೂಮಿಯನ್ನುಬಿಟ್ಟು ಬಾಕಿ ೧೪ ಭೂಮಿಯಲ್ಲಿ ಕಿನ್ನರ, ಕಿಂಪುರುಷ,

ಮಹೋರಗಾದಿ ವ್ಯಂತರರು ಮತ್ತು ನಾಗಕುಮಾರ, ವಿದ್ಯುತ್ಕುಮಾರ, ಸುಪರ್ಣಕುಮಾರ, ಅಗ್ನಿಕುಮಾರ, ವಾತಕುಮಾರ, ಸ್ತನಿತಕುಮಾರ, ಉದಧಿಕುಮಾರ, ದ್ವೀಪಕುಮಾರ, ದಿಕ್ಕುಮಾರ, ಈ೯ ವಿಧಭವನವಾಸಿಗಳು ಇರುತ್ತಾರೆ. ಅದರಕೆಳಗೆ ೮೪ ಸಾವಿರಯೋಜನದಷ್ಟು ಪಂಕಭಾಗವಿಧೆ,ಇದರಲ್ಲಿಅಸುರರು ರಾಕ್ಷಸರುಯಿರುತ್ತಾರೆ.ಅದರಕೆಳಗೆ ೮೦೦೦೦ಯೋಜನದಷ್ಟುಅಬ್ಬಹುಳಭಾಗವಿಧೆ ಇದೇ ೧ ನೇನರಕವು || ಇದರಕೆಳಗೆ ವೊಂದೊಂದುರಜ್ಜುವಿನ ಅಂತರಬಿಟ್ಟುಶರ್ಕರಾಪ್ರಭೆಮೊದಲಾಗಿ ೬ನರಕಗಳು ಕ್ರಮವಾಗಿರುತ್ತವೆ || ನರಾ‌ನ್ ಜೀವಾನ್ ಕಾಯಯತೀತಿ ನರಕಂ ತತ್ರಭವಾಃ ನಾರಕಾಃ || ಜೀವನು ಯಾವದನ್ನ ಸ್ಪರ್ಶಮಾಡುವದ್ದರಿಂದ ಅಳುವದಕ್ಕೆಆರಂಭಿಸುತ್ತಾನೋ ಅದೇನರಕವು || ಆನರಕದಲ್ಲಿ ಹುಟ್ಟಿದವರು ನಾರಕರೆನ್ನಿಸಿಕ್ಕೊಳ್ಳುತ್ತಾರೆ || ೧ ||

ಅ || ಆ ೭ ನರಕಗಳಲ್ಲಿರುವ ಬಿಲಸಂಖ್ಯೆಯನ್ನು ಹೇಳುತ್ತಾರೆ.

ಸೂ || ತಾಸುತ್ರಿಂಶತ್ಪಂಚವಿಂಶತಿಪಂಚದಶದಶತ್ರಿಪಂಚೋನೈಕನರಕಶತಸಹಸ್ರಾಣಿ ಪಂಚಚೈವ ಯಥಾಕ್ರಮಂ ||೨||

ಟೀ || ಯಥಾಕ್ರಮಂ-ಕ್ರಮವನ್ನು ಅತಿಕ್ರಮಿಸದೆ, ತಾಸು- ಆ ಏಳುನರಕಗಳಲ್ಲಿ, ತ್ರಿಂಶತ್-ಮೂವತ್ತು, ಪಂಚವಿಂಶತಿ- ಇಪ್ಪತ್ತೈದು, ಪಂಚದಶ-ಹದಿನೈದು, ದಶ-ಹತ್ತು. ತ್ರಿ-ಮೂರು, ಪಂಚೋನೈಕ - ಐದುಕಡಮೆಯಾದಬಂದು, ಯಿಾಸಂಖ್ಯೆಯುಳ್ಳ, ನರಕಶತಸಹಸ್ರಾಣಿ-ನರಕಗಳಲಕ್ಷಗಳು, ಪಂಚೈವ-ಐದೂಕೂಡ, ಅಂದರೆ- ೧ ನೇ ನರಕದಲ್ಲಿ ಇಂದ್ರಕ, ಶ್ರೇಢೀಬದ್ಧ, ಪ್ರಕೀರ್ಣಕಭೇದದಿಂದ ೩೦ ಲಕ್ಷ. ೨ ನೇನರಕದಲ್ಲಿ ಇಂದ್ರಕ, ಶ್ರೇಢೀಬದ್ಧ, ಪ್ರಕೀರ್ಣಕ ಭೇದದಿಂದ ೨೫ ಲಕ್ಷ ೩ ನೇನರಕದಲ್ಲಿ ಇಂದ್ರಕ, ಶ್ರೇಢೀಬದ್ಧ, ಪ್ರಕೀರ್ಣಕಭೇದದಿಂದ ೧೫ ಲಕ್ಷ. ೪ ನೇನರಕದಲ್ಲಿ ಇಂದ್ರಕ, ಶ್ರೇಢೀಬದ್ಧ, ಪ್ರಕೀರ್ಣಕಭೇದದಿಂದ ೧೦ ಲಕ್ಷ. ೫ನೇನರಕದಲ್ಲಿ ಇಂದ್ರಕ, ಶ್ರೇಢೀಬದ್ಧ, ಪ್ರಕೀರ್ಣಕಭೇದದಿಂದ ೩ ಲಕ್ಷ. ೬ ನೇನರಕದಲ್ಲಿ ಇಂದ್ರಕ, ಶ್ರೇಢೀಬದ್ಧ, ಪ್ರಕೀರ್ಣಕಭೇದದಿಂದ ೫ ಕಡಮೆಯಾದ ಬಂದುಲಕ್ಷ. ೭ ನೇನರಕದಲ್ಲಿ ಇಂದ್ರಕ, ಶ್ರೇಢೀಬದ್ಧ, ಪ್ರಕೀರ್ಣಕಭೇದದಿಂದ ೫ ಮಾತ್ರನರಕಬಿಲಗಳಿವೆ.

ವಟ್ಟು ೪೯ ಇಂದ್ರಕವು ೯೬೦೪ ಶ್ರೇಢೀಬದ್ಧಗಳು ೮೯೨೦೩೪೭ ಪ್ರಕೀರ್ಣಕಗಳುಇವೆ. ಯೆಲ್ಲಾ ಸೇರಿ ೮೪ ಲಕ್ಷ ನರಕ ಬಿಲಗಳಿವೆ || ೨ ||

ಅ || ನರಕಗಳಲ್ಲಿರುವ ಪಟಲಗಳ ಸಂಖ್ಯೆಯನ್ನು ಹೇಳುತ್ತಾರೆ.

ಸೂ || ಪ್ರಥಮಾಯಾಂ ಪ್ರತರಾ ಸ್ತ್ರಯೋದಶಾಧೋ
ಧೋ ದ್ವಿಹೀನಾಃ ||೩ ||

ಟೀ || ಪ್ರಥಮಾಯಾಂ-ಮೊದಲನೇನರಕಪಲ್ಲಿ, ಪ್ರತರಾಃ-ಪ್ರತರಗಳು, ತ್ರಯೋದಶ-ಹದಿಮೂರು, ಅಧೋಧಃ-ಕೆಳಕೆಳಗೆ, ದ್ವಿಹೀನಾಃ- ಎರಡು ಎರಡುಪ್ರಕಾರ ಕಡಮೆಯಾದಂಥಾವುಗಳು ||

ತಾ || ೧ ನೇನರಕದಲ್ಲಿ ೧೩ ಪಟಲಗಳು, ೨ ನೇನರಕದಲ್ಲಿ ೧೧ ಪಟಲಗಳು, ೩ ನೇನರಕದಲ್ಲಿ ೯ ಪಟಲಗಳು, ೪ ನೇನರಕದಲ್ಲಿ ೭ ಪಟಲಗಳು. ೫ ನೇನರಕದಲ್ಲಿ ೫ ಪಟಲಗಳು. ೬ ನೇನರಕಪಲ್ಲಿ ೩ ಪಟಲಗಳು ೭ ನೇನರಕದಲ್ಲಿ ೧ ಪಟಲವು ಇರುತ್ತೆ || ೩ ||

ಅ || ಆ ನಾರಕರ ಪರಿಣಾಮಾದಿಗಳನ್ನು ಹೇಳುತ್ತಾರೆ.

ಸೂ || ನಾರಕಾ ನಿತ್ಯಾಶುಭತರಲೇಶ್ಯಾಪರಿಣಾಮದೇಹವೇ
ದನಾವಿಕ್ರಿಯಾಃ || ೪ ||

ಟೀ || ನಾರಕಾಃ-ನರಕದಲ್ಲಿಹುಟ್ಟಿದಜೀವಗಳು, ನಿತ್ಯಾಶುಭತೆರಲೇಶ್ಯಾಪರಿಣಾಮದೇಹವೇದನಾವಿಕ್ರಿಯಾಃ-ನಿತ್ಯ-ಯಾವಾಗಲೂ, ಅಶುಭತರ-ಅತ್ಯಂತಅಶುಭಗಳಾದಂಥ, ಲೇಶ್ಯಾ-ಲೇಶ್ಯಗಳು, ಪರಿಣಾಮ-ಕ್ಷೇತ್ರವಿಶೇಷದಿಂದ ದುಃಖಕ್ಕೆಕಾರಣವಾದ ಆರ್ತಾದಿಪರಿಣಾಮವು, ದೇಹ-ದೇಹವು, ವೇದನಾ ಅಂತರಂಗಬಹಿರಂಗವೇದನೆಗೆ ಕಾರಣವಾದ ಶೀತೋಷ್ಣಾದಿವೇದನೆಯು. ವಿಕ್ರಿಯಾಃ-ದುಃಖಹೇತುಗಳಾದ ವಿಕುರ್ವಣೆಯು ಎಂಬ ಇವುಗಳನ್ನುಳ್ಳಂಥಾವರುಗಳು || ಅಂದರೆ ಸರ್ವದಾ ಅಶುಭಕರ್ಮದ ಉದಯವಿರುವದ್ದರಿಂದ ಅವರುಗಳಪರಿಣಾಮಾದಿಗಳು ಸರ್ವದಾ ಅಶುಭವಾಗಿಯೇ ಇರುತ್ತವೆ ||೪ ||

ಅ || ಆ ನಾರಕರು ಅನ್ಯೋನ್ಯವಾಗಿ ಮಾಡಲ್ಪಟ್ಟ ದುಃಖವುಳ್ಳವರೆಂದು ಹೇಳುತ್ತಾರೆ.

ಸೂ || ಪರಸ್ಪರೋದೀರಿತದುಃಖಾಃ || ೫ ||

ಟೀ || ಪರಸ್ಪರೋದೀರಿತದುಃಖಾಃ-ಪರಸ್ಪರ-ಅನ್ಯೋನ್ಯವಾಗಿ, ಉದೀರಿತ-ಹೆಚ್ಚಿಸಲ್ಪಟ್ಟಂಥಾ, ದುಃಖಾಃ-ದುಃಖವುಳ್ಳಂಥಾವರುಗಳು ||

ತಾ || ಮಿಥ್ಯಾದರ್ಶನೋದಯದಿಂದ ಉಂಟಾದಂಥ, ವಿಭಂಗಜ್ಞಾನದಿಂದ ದೂರದಿಂದಲೇ ದುಃಖಹೇತುಗಳಾಗಿರುವಂಥಾ ದ್ರವ್ಯಗಳನ್ನು ತಿಳಿದು,ಅತಿದುಃಖಗಳುಳ್ಳಂಥಾವರುಗಳಾಗಿಳಿಗುತ್ತಾರೆ. ಮತ್ತು ಒಬ್ಬರನ್ನು ಒಬ್ಬರುನೋಡಿದಮಾತ್ರದಿಂದಲೇ ಪ್ರಜ್ವಲಿತ ಕೋಪಾಗ್ನಿಗಳುಳ್ಳಂಥಾವರುಗಳಾಗಿಯೂ, ಪೂರ್ವಭವಸ್ಮರಣದಿಂದ ಉಂಟಾದಂಥಾ ವೈರವುಳ್ಳಂಥಾವರುಗಳಾಗಿಯೂ, ನಾಯಿ ನರಿಗಳೋಪಾದಿಯಲ್ಲಿ ತಮ್ಮಿಂಪ ಮಾಡತಕ್ಕಂಥಾ ಘಾತಗಳಲ್ಲಿ ವರ್ತಿಸುವಂಥಾವರಾಗಿಯೂ, ತಮ್ಮ ವೈಕ್ರಿಯಕದಿಂದ ಮಾಡಲ್ಪಟ್ಟಕತ್ತಿ, ಕೊಡಲಿ, ಪಿಂಡವಾಳ, ಶಕ್ತಿ, ಕುಂತಮೊದಲಾದ ಆಯುಧಗಳಿಂದಲೂ, ಕೈಕಾಲು ಹಲ್ಲುಮೊದಲಾದವುಗಳಿಂದಲೂ, ಪರಸ್ಪರವಾಗಿ ಅತಿದುಃಖಗಳನ್ನು ಉಂಟುಮಾಡುತ್ತಿಧಾರೆ || ೪ ||

ಅ || ಅಸುರಾದಿಗಳಿಂದ ಹಿಂಸಿಸಲ್ಪಡುತ್ತಾರೆಂದು ಹೇಳುತ್ತಾರೆ.

ಸೂ || ಸಂಕ್ಲಿಷ್ಟಾಸುರೋದೀರಿತದುಃಖಾಶ್ಚ ಪ್ರಾಕ್ಚತುರ್ಥ್ಯಾಃ ||

ಟೀ || ಚತುರ್ಥ್ಯಾಃ-ನಾಲ್ಕನೇ ನರಕದ ದೆಶೆಯಿಂದ, ಪ್ರಾಕ್-ಮೊದಲಲ್ಲಿ,ಸಂಕ್ಲಿಷ್ಟಾಸುರೋದೀರಿತದುಃಖಾಃ-ಸಂಕ್ಲಿಷ್ಟ-ಸಂಕ್ಲೇಶಪರಿಣಾಮದೊಡನೆ ಕೂಡಿದಂಥ, ಅಸುರ-ಅಸುರರಿಂದ, ಉದೀರಿತ-ಹೆಚ್ಚಿಸಲ್ಪಟ್ಟಂಥಾ, ದುಃಖಾಃ-ದುಃಖವುಳ್ಳಂಥಾವರುಗಳು ||ಚ-ಮತ್ತೇನೆಂದರೆ ನರಕಭೂಮಿಯಲ್ಲಿಸಹಜವಾದ ದುಃಖವುಳ್ಳಂಥಾವರುಗಳೂಕೂಡಳಿಗುತ್ತಾರೆ

ತಾ || ಪ್ರಥಮದ್ವಿತೀಯ, ತೃತೀಯನರಕದಲ್ಲಿರುವ ನಾರಕರು ಅಸುರಕುಮಾರರಿಂದ ಪ್ರೇರಿಸಲ್ಪಟ್ಟಂಥಾವರಾಗಿ ಅನೇಕವಿಧವಾದ ದುಃಖಗಳನ್ನು ಅನುಭವಿಸುವರು || ೬ ||

ನ ರ ಕಾ ಯು ಷ್ಯಾ ಧಿ ಕ ರ ಣ ಂ,

ಅ || ನಾರಕರುಗಳಿಗೆ ಉತ್ಕೃಷ್ಟಾಯುಷ್ಯವನ್ನು ಹೇಳುತ್ತಾರೆ.

ಸೂ || ತೇಷ್ವೇಕತ್ರಿಸಪ್ತದಶಸಪ್ತದಶದ್ವಾವಿಂಶತಿತ್ರಯ
ಸ್ತ್ರಿಂಶತ್ಸಾಗರೋಪಮಾಃ ಸತ್ವಾನಾಂ ಪರಾಸ್ಥಿತಿಃ || ೭ ||

ಟೀ || ಸತ್ವಾನಾಂ-ನರಕದಲ್ಲಿ ಹುಟ್ಟಿದಂಥಾ ಪ್ರಾಣಿಗಳಿಗೆ, ಪರಾ

ಸ್ಥಿತಿಃ-ಉತ್ಕೃಷ್ಟಾಯುಷ್ಯಸ್ಥಿತಿಯು,ತೇಷು-ಆಏಳುನರಕಗಳಲ್ಲಿಕ್ರಮವಾಗಿ,ಏಕ-ಒಂದು,ತ್ರಿ-ಮೂರು,ಸಪ್ತ-ಏಳು,ದಶ-ಹತ್ತು,ಸಪ್ತದಶ-ಹದಿನೇಳು, ದ್ವಾವಿಂಶತಿ-ಇಪ್ಪತ್ತೆರಡು, ತ್ರಯಸ್ತ್ರಿಂಶತ್-ಮೂವತ್ತುಮೂರು, ಸಾಗರೋಪಮಾಃ-ಸಮುದ್ರದ ಸಾಮ್ಯವುಳ್ಳಂಥಾದ್ದು ||

ತಾ || ಮೊದಲನೇ ನರಕದಲ್ಲಿ ಒಂದುಸಾಗರೋಪಮವು. ೨ ನೇ ನರಕದಲ್ಲಿ ಮೂರುಸಾಗರೋಪಮವು. ೩ ನೇನರಕದಲ್ಲಿ ೭ ಸಾಗರೋಪಮವು, ೪ ನೇನರಕದಲ್ಲಿ ೧೦ ಸಾಗರೋಪಮವು, ೫ ನೇನರಕದಲ್ಲಿ ೧೭ ಸಾಗರೋಪಮವು, ೬ ನೇನರಕದಲ್ಲಿ ೨೨ ಸಾಗರೋಪಮವು. ೭ ನೇನರಕದಲ್ಲಿ ೩೩ ಸಾಗರೋಪಮವು ಉತ್ಕೃಷ್ಟಾಯುಷ್ಯವು || ೬ ||

ಮ ಧ್ಯ ಮ ಲೋ ಕಾ ಧಿ ಕ ರ ಣ ಂ.

ಅ || ತಿರ್ಯಗ್ಲೋಕವನ್ನು ಹೇಳುತ್ತಾರೆ.

ಸೂ || ಜಂಬೂದ್ವೀಪಲವಣೋದಾದಯಃ ಶುಭನಾಮಾನೋ ದ್ವೀಪಸಮುದ್ರಾಃ || ೭ ||

ಟೀ || ಜಂಬೂದ್ವೀಪಲವಣೋದಾದಯಃ - ಜಂಬೂದ್ವೀಪ-ಜಂಬೂದ್ವೀಪವು, ಲವಣೋದ-ಲವಣಸಮುದ್ರವು, ಆದಯಃ-ಮೊದಲಾದಂಥ, ದ್ವೀಪಸಮುದ್ರಾಃ-ದ್ವೀಪಗಳು ಸಮುದ್ರಗಳು, ಶುಭನಾಮಾನಃ-ಪ್ರಶಸ್ತವಾದ ಹೆಸರುಗಳುಳ್ಳಂಥಾವುಗಳು ||

ತಾ || ಮಧ್ಯಮಲೋಕದಲ್ಲಿ ಎಲ್ಲಾದಕ್ಕೂಮಧ್ಯದಲ್ಲಿ ಜಂಬೂದ್ವೀಪವಿದೆ. ಅದರಸುತ್ತಲೂ ಲವಣಸಮುದ್ರವಿದೆ.ಅದರಸುತ್ತಲೂಧಾತಕೀಷಂಡ ದ್ವೀಪವಿದೆ,ಅದರಸುತ್ತಲೂ ಕಾಳೋದಕಸಮುದ್ರವಿದೆ.ಅದರಸುತ್ತಲೂಪುಷ್ಕರದ್ವೀಪವಿದೆ. ಅದರಸುತ್ತಲೂ ಪುಷ್ಕರಸಮುದ್ರವಿದೆ, ಇದೇಮೇರೆ ಅಸಂಖ್ಯಾತ ದ್ವೀಪ ಸಮುದ್ರಗಳಿವೆ, ದ್ವೀಪಕ್ಕೆ ಯಾವಹೆಸರೋ ಅದೇಹೆಸರೇ ಸಮುದ್ರಕ್ಕೂ ಬರುತ್ತೆ, ಸ್ವಯಂಭೂರಮಣಸಮುದ್ರವೇ ಕೊನೇ ಸಮುದ್ರವು || ೭ ||

ಅ || ಈ ದ್ವೀಪಸಮುದ್ರಗಳ ಅಗಲ ಮತ್ತು ಆಕಾರಗಳನ್ನು ಹೇಳುತ್ತಾರೆ.

ಸೂ || ದ್ವಿರ್ದ್ವಿರ್ವಿಷ್ಕಂಭಾಃ ಪೂರ್ವಪೂರ್ವಪರಿಕ್ಷೇಪಿಣೋ ವಲಯಾಕೃತಯಃ || ೮ ||

ಮ ಧ್ಯ ಮ ಲೋ ಕಾ ಧಿ ಕ ರ ಣಂ

ಟೀ ॥ ದ್ವಿರ್ದ್ವಿರ್ವಿಷ್ಕಂಭಾಃ-ಆ ದ್ವೀಪಸಮುದ್ರಗಳು ದ್ವಿಗುಣದ್ವಿಗುಣ ಅಗಲವುಳ್ಳಂಥಾವುಗಳು. ಪೂರ್ವಪೂರ್ವಪರಿಕ್ಷೇಪಿಣಃ-ಪೂರ್ವಪೂರ್ವ-ಮೊದಲನೆಮೊದಲನೇದ್ವೀಪಸಮುದ್ರವನ್ನು, ಪರಿಕ್ಷೇಪಿಣಃ-ಸುತ್ತಿದಂಥಾವುಗಳು. ವಲಯಾಕೃತಯಃ-ವೃತ್ತಾಕಾರವುಳ್ಳಂಥಾವುಗಳು ॥

ತಾ ॥ ಎಲ್ಲಾದಕ್ಕು ಮಧ್ಯದಲ್ಲಿರುವದು ಜಂಬೂದ್ವೀಪವು, ಇದರ ಎರಡರಷ್ಟು ಅಗಲ ಲವಣಸಮುದ್ರವಿದೆ, ಲವಣಸಮುದ್ರಕ್ಕೆ ಎರಡರಷ್ಟು ಅಗಲ ಧಾತಕೀಷಂಡದ್ವೀಪವಿದೆ, ಧಾತಕೀಷಂಡದ್ವೀಪದ ಎರಡರಷ್ಟು ಅಗಲ ಕಾಳೋದಕ ಸಮುದ್ರವಿದೆ, ಕಾಳೋದಕಸಮುದ್ರದ ಎರಡರಷ್ಟು ಅಗಲ ಪುಷ್ಕರಾರ್ಧದ್ವೀಪವಿದೆ, ಇದೇಪ್ರಕಾರ ಸ್ವಯಂಭೂರಮಣಸಮುದ್ರದ ಪರ್ಯ್ಯಂತರದಲ್ಲೂ ಮೊದಲಿನಮೊದಲನೇದಕ್ಕೆ ದ್ವಿಗುಣಕ್ರಮವಾಗಿ ತಿಳಿಯತಕ್ಕದ್ದು ॥ ೯ ॥

ಜಂ ಬೂ ದ್ವೀ ಪಾ ಧಿ ಕ ರ ಣಂ

ಅ ॥ ಜಂಬೂದ್ವೀಪದ ಅಗಲವನ್ನು ಹೇಳುತ್ತಾರೆ.

ಸೂ ॥ ತನ್ಮಧ್ಯೇಮೇರುನಾಭಿರ್ವೃತ್ತೋಯೋಜನ ಶತ
ಸಹಸ್ರವಿಷ್ಕಂಭೋ ಜಂಬೂದ್ವೀಪಃ ॥೧೦॥

ಟೀ ॥ ತನ್ಮಧ್ಯೇ-ಆ ದ್ವೀಪಸಮುದ್ರಗಳ ಮಧ್ಯದಲ್ಲಿ, ಮೇರುನಾಭಿಃ-ಮೇರುಪರ್ವತವೇ ನಾಭಿಯಾಗಿಯುಳ್ಳಂಥಾ, ವೃತ್ತಃ-ವಲಯಾಕಾರವುಳ್ಳಂಥಾ, ಯೋಜನಶತಸಹಸ್ರವಿಷ್ಕಂಭಃ-ಲಕ್ಷಯೋಜನ ಅಗಲವುಳ್ಳಂಥಾ, ಜಂಬೂದ್ವೀಪಃ-ಜಂಬೂದ್ವೀಪವು (ಇರುತ್ತೆ) ॥

ತಾ ॥ ಎಲ್ಲಾ ದ್ವೀಪಗಳ ಮಧ್ಯದಲ್ಲಿ ಜಂಬೂದ್ವೀಪವಿದೆ ಜಂಬೂದ್ವೀಪವು ವೃತ್ತಾಕಾರವಾಗಿ ಲಕ್ಷಯೋಜನ ಅಗಲವುಳ್ಳದ್ದಾಗಿಇದೆ, ನಾಭಿಹ್ಯಾಗೆ ಮಧ್ಯದಲ್ಲಿರುತ್ತೋ ಅದರಂತೆ ಜಂಬೂದ್ವೀಪದಮಧ್ಯದಲ್ಲಿ ಸುದರ್ಶನವೆಂಬ ಹೆಸರುಳ್ಳ ಮೇರುಪರ್ವತವಿರುತ್ತೆ. ಇದರಪಕ್ಕಗಳಲ್ಲಿ ಉತ್ತರಕುರುವಿದೆ. ಇದಕ್ಕೆ ಈಶಾನ್ಯಮೂಲೆಯಲ್ಲಿ ಅನಾದಿನಿಧವಾಗಿಯೂ, ಅಕೃತ್ರಿಮವಾಗಿಯೂ, ಜಂಬೂವೃಕ್ಷವಿರುತ್ತೆ. ಆದ್ದರಿಂದ ಈ ದ್ವೀಪಕ್ಕೆ ಜಂಬೂದ್ವೀಪವೆಂಬ ಹೆಸರುಬಂದಿರುತ್ತೆ ॥ ೧೦ ॥

ಅ ॥ ಜಂಬೂದ್ವೀಪದಲ್ಲಿರುವ ಕ್ಷೇತ್ರಗಳನ್ನು ಹೇಳುತ್ತಾರೆ.

ಸೂ ॥ ಭರತಹೈಮವತಹರಿವಿದೇಹ ರಮ್ಯಕಹೈರಣ್ಯವ

ತ್ಯೈರಾವತವರ್ಷಾಃ ಕ್ಷೇತ್ರಾಣಿ ‖ ೧೧ ‖

ಟೀ ‖ ಭರತಹೈಮವತಹರಿವಿದೇಹರಮ್ಯಕಹೈರಣ್ಯವತೈರಾವತ ವರ್ಷಾಃ-ಭರತ-ಭರತವರ್ಷವು, ಹೈಮವತ-ಹೈಮವತ ವರ್ಷವು, ಹರಿ-ಹರಿ ವರ್ಷವು, ವಿದೇಹ-ವಿದೇಹ ವರ್ಷವು, ರಮ್ಯಕ-ರಮ್ಯಕವರ್ಷವು, ಹೈರಣ್ಯವತ-ಹೈರಣ್ಯವತ ವರ್ಷವು, ಐರಾವತವರ್ಷಾಃ-ಐರಾವತ ವರ್ಷವು, ಕ್ಷೇತ್ರಾಣಿ-ಜಂಬೂದ್ವೀಪದ ಕ್ಷೇತ್ರಗಳು ‖ ಭರತ, ಹೈಮವತ, ಹರಿ, ವಿದೇಹ, ರಮ್ಯಕ, ಹೈರಣ್ಯವತ, ಐರಾವತ, ಈ ೭ ಜಂಬೂದ್ವೀಪದ ಕ್ಷೇತ್ರಗಳು ‖ ೧೧ ‖

ಅ ‖ ಆ ಕ್ಷೇತ್ರಗಳನ್ನು ವಿಭಾಗಿಸಿರುವ ಕುಲಪರ್ವತಗಳನ್ನು ಹೇಳುತ್ತಾರೆ.

ಸೂ ‖ ತದ್ವಿಭಾಜಿನಃ ಪೂರ್ವಾಪರಾಯತಾಹಿಮವನ್ಮ
ಹಾಹಿಮವನ್ನಿಷಧನೀಲರುಗ್ಮಿಶಿಖರಿಣೋ ವರ್ಷಧ
ರಪರ್ವತಾಃ ‖ ೧೨ ‖

ಟೀ ‖ ತದ್ವಿಭಾಜಿನಃ-ತತಃ-ಆ ಭರತಾದಿ ಸಪ್ತಕ್ಷೇತ್ರಗಳನ್ನು, ವಿಭಾಜಿನಃ-ವಿಭಾಗಮಾಡತಕ್ಕಂಥಾ, ಪೂರ್ವಾಪರಾಯತಾಃ-ಪೂರ್ವ-ಪೂರ್ವದಿಕ್ಕಿಗೂ, ಪರಾ-ಪಶ್ಚಿಮದಿಕ್ಕಿಗೂ, ಆಯತಾಃ-ದೀರ್ಘಗಳಾದಂಥಾ, ಹಿಮವನ್ಮಹಾಹಿಮವನ್ನಿಷಧನೀಲರುಗ್ಮಿಶಿಖರಿಣಃ-ಹಿಮರ್ವ-ಹಿಮವತ್ಪರ್ವತವು, ಮಹಾಹಿಮರ್ವ-ಮಹಾಹಿಮವತ್ಪರ್ವತವು, ನಿಷಧ-ನಿಷಧಪರ್ವತವು, ನೀಲ-ನೀಲಪರ್ವತವು, ರುಗ್ಮಿ-ರುಗ್ಮಿಪರ್ವತವು, ಶಿಖರಿಣಃ-ಶಿಖರಿಪರ್ವತವು. ವರ್ಷಧರಪರ್ವತಾಃ-ಕುಲಪರ್ವತಗಳು ‖

ತಾ ‖ ಭರತ, ಹೈಮವತಕ್ಷೇತ್ರಗಳ ಸೀಮೆಗಳಲ್ಲಿ ಅಂದರೆ ಮಧ್ಯದಲ್ಲಿ ೧೦೦ ಯೋಜನ ಎತ್ತರವು, ಪೂರ್ವಪಶ್ಚಿಮದಲ್ಲಿರುವ ಲವಣಸಮುದ್ರದ ಜಲವನ್ನು ತಮ್ಮ ಪೂರ್ವಾಪರಕೊನೆಗಳಿಂದ ಮುಟ್ಟಿಕೊಂಡು ಹಿಮವತ್ಪರ್ವತವಿದೆ-ಇದೇರೀತಿಯಾಗಿ ಉಳಿದಪರ್ವತಗಳೂ ಎರಡೆರಡುಕ್ಷೇತ್ರಗಳಮಧ್ಯದಲ್ಲಿ ಪೂರ್ವಾಪರ ಸಮುದ್ರಪರ್ಯಂತ ಉದ್ದವುಳ್ಳವಾಗಿ ಎತ್ತರದಲ್ಲಿಮಾತ್ರ ವ್ಯತ್ಯಾಸವುಳ್ಳವಾಗಿವೆ ‖ ಭರತಾದಿವರ್ಷಗಳಿಗೆ ವಿಭಾಗಗಳಾದ ಪ್ರಯುಕ್ತವಾಗಿ ಇವುಗಳಿಗೆ ವರ್ಷಧರಪರ್ವತಗಳೆಂದು ಹೇಳಲ್ಪಟ್ಟಿದೆ ‖ ೧೨ ‖

ಅ ‖ ಆ ಪರ್ವತಗಳ ವರ್ಣವನ್ನು ಹೇಳುತ್ತಾರೆ.

ಸೂ ॥ ಹೇಮಾರ್ಜುನತಪನೀಯವೈಢೂರ್ಯ ರಜತಹೇ
ಮಮಯಾಃ ॥ ೧೩ ॥

ಟೀ ॥ ಹೇಮಾರ್ಜುನತಪನೀಯವೈಢೂರ್ಯರಜತಹೇಮಮಯಾಃ- ಹೇಮ-ಹಿಮವತ್ಪರ್ವತವು ಚಿನ್ನದವರ್ಣವು, ಅರ್ಜುನ-ಮಹಾಹಿಮವತ್ಪರ್ವತವು ಬೆಳಪುವರ್ಣವು,ತಪನೀಯ-ನಿಷಧಪರ್ವತವು ಸುವರ್ಣವರ್ಣವು,ವೈಢೂರ್ಯ-ನೀಲಪರ್ವತವು ವೈಢೂರ್ಯವರ್ಣವೆಂದರೆನವಿಲಿನಕಂಠದಂತೆನೀಲವು,ರಜತ-ರುಗ್ಮಿಪರ್ವತವುಬೆಳ್ಳಿಯವರ್ಣವು, ಹೇಮಮಯಾಃ-ಶಿಖರಿಪರ್ವತವು ಸುವರ್ಣವರ್ಣವು ಉಳ್ಳಂಥಾವುಗಳು ॥ ೧೩ ॥

ಅ ॥ ಹಿಮವದಾದಿ ಪರ್ವತಗಳ ವಿಶೇಷವನ್ನು ಹೇಳುತ್ತಾರೆ.

ಸೂ ॥ ಮಣಿವಿಚಿತ್ರಪಾರ್ಶ್ವಾಉಪರಿ ಮೂಲೇಚತುಲ್ಯವಿಸ್ತಾರಃ ॥

ಟೀ ॥ ಮಣಿವಿಚಿತ್ರಪಾರ್ಶ್ವಾಃ-ಮಣಿ-ನವರತ್ನಗಳಿಂದ, ವಿಚಿತ್ರ-ನಾನಾಬಣ್ಣಗಳಾದಂಥಾ, ಪಾರ್ಶ್ವಾಃ-ಪಕ್ಕಗಳುಳ್ಳಂಥಾವಗಳಾಗಿಯೇ, ಉಪರಿ-ಮೇಲ್ಭಾಗದಲ್ಲಿಯೂ, ಮೂಲೇ-ಬುಡದಲ್ಲಿಯೂ, ಚಕಾರದಿಂದ ಮಧ್ಯದಲ್ಲಿಯೂ, ತುಲ್ಯವಿಸ್ತಾರಾಃ-ಸಮಾನವಾದ ವಿಸ್ತಾರವುಳ್ಳಂಥಾವುಗಳು ॥

ತಾ ॥ ಈ ಕುಲಪರ್ವತಗಳ ಪಕ್ಕಗಳು ನಾನಾವರ್ಣವುಳ್ಳ ರತ್ನಗಳಿಂದ ವಿಚಿತ್ರವಾಗಿಯೂ, ಬುಡದಿಂದ ಮೇಲಿನವರಿವಿಗೂ ಗೋಡೆಯಂತೆ ಸಮಾನವಾದ ವಿಸ್ತಾರವು ಉಳ್ಳವುಗಳಾಗಿವೆ ॥ ೧೪ ॥

ಅ ॥ ಆ ಪರ್ವತಗಳ ಮೇಲ್ಭಾಗದಲ್ಲಿರುವ ಕೊಳಗಳನ್ನು ಹೇಳುತ್ತಾರೆ,

ಸೂ ॥ ಪದ್ಮ ಮಹಾಪದ್ಮ ತಿಗಿಂಛಕೇಸರಿ ಮಹಾಪುಂಡರೀಕ
ಪುಂಡರೀಕಾಹ್ರದಾಸ್ತೇಷಾಮುಪರಿ ॥ ೧೫ ॥

ಟೀ ॥ ತೇಷಾಂ-ಆ ಪರ್ವತಗಳ, ಉಪರಿ-ಮೇಲ್ಭಾಗದಲ್ಲಿ, ಪದ್ಮಮಹಾಪದ್ಮತಿಗಿಂಛಕೇಸರಿಮಹಾಪುಂಡರೀಕ ಪುಂಡರೀಕಾಹ್ರದಾಃ-ಪದ್ಮ-ಹಿಮವತ್ಪರ್ವತದಮೇಲೆ ಪದ್ಮಸರೋವರವು, ಮಹಾಪದ್ಮ-ಮಹಾಹಿಮವತ್ಪರ್ವತದಮೇಲೆ ಮಹಾಪದ್ಮಸರೋವರವು, ತಿಗಿಂಛ-ನಿಷಧಪರ್ವತದಮೇಲೆ ತಿಗಿಂಛಸರೋವರವು, ಕೇಸರಿ-ನೀಲಪರ್ವತದಮೇಲೆ ಕೇಸರಿಸರೋವರವು, ಮಹಾಪುಂಡರೀಕ-ರುಗ್ಮಿಪರ್ವತದಮೇಲೆಮಹಾ

ಪುಂಡರೀಕ ಸರೋವರವು, ಪುಂಡರೀಕಾಹ್ರದಾಃ-ಶಿಖರಿಪರ್ವತದಮೇಲೆ ಪುಂಡರೀಕ ಸರೋವರವು (ಈರೀತಿ) ಇರುತ್ತವೆ || ೧೪ ||

ಅ || ಆಸರೋವರಗಳ ಅಗಲವನ್ನು ಹೇಳುತ್ತಾರೆ.

ಸೂ || ಪ್ರಥಮೋಯೋಜನ ಸಹಸ್ರಾಯಾಮಸ್ತದ
ರ್ಧವಿಷ್ಕಂಭೋ ಹ್ರದಃ || ೧೫ ||

ಟೀ || ಪ್ರಥಮಃ-ಮೊದಲನೇದಾದಂಥ, ಹ್ರದಃ-ಪದ್ಮಸರೋವರವು, ಯೋಜನಸಹಸ್ರಾಯಾಮಃ - ಸಾವಿರಯೋಜನ ನೀಳವಾದಂಥಾದ್ದು, ತದರ್ಧವಿಷ್ಕಂಭಃ-ಐನೂರುಯೋಜನ ಅಗಲವುಳ್ಳಂಥಾದ್ದು, ಅಂದರೆ ಪದ್ಮಸರೋವರವು ೧೦೦೦ ಯೋಜನ ಉದ್ದವು ೫೦೦ ಯೋಜನ ಅಗಲವು ಉಳ್ಳದ್ದಾಗಿಇರುತ್ತದೆ || ೧೫ ||

ಅ || ಪದ್ಮಸರೋವರದ ಆಳವನ್ನು ಹೇಳುತ್ತಾರೆ.

ಸೂ || ದಶಯೋಜನಾವಗಾಹಃ || ೧೬ ||

ಟೀ || ದಶಯೋಜನಾವಗಾಹಃ-ದಶಯೋಜನ-ಹತ್ತುಯೋಜನ ಪ್ರಮಾಣವಾದ, ಅವಗಾಹಃ-ಆಳಉಳ್ಳಂಥಾ ಅಂದರೆ ಆ ಪದ್ಮಸರೋವರವು ಹತ್ತುಯೋಜನ ಆಳವುಳ್ಳದ್ದು || ೧೬ ||

ಅ || ಆ ಸರೋವರದಲ್ಲಿರುವ ಕಮಲದ ಪ್ರಮಾಣವನ್ನುಹೇಳುತ್ತಾರೆ.

ಸೂ || ತನ್ಮಧ್ಯೇ ಯೋಜನಂ ಪುಷ್ಕರಂ || ೧೭ ||

ಟೀ || ತನ್ಮಧ್ಯೇ-ಆ ಪದ್ಮಸರೋವರದ ಮಧ್ಯದಲ್ಲಿ, ಪುಷ್ಕರಂ-ತಾವರೆಯು, ಯೋಜನಂ-ಒಂದು ಯೋಜನಪ್ರಮಾಣ ವುಳ್ಳದ್ದು ||

ತಾ || ಆ ಪದ್ಮಸರೋವರದ ಮಧ್ಯದಲ್ಲಿ ಒಂದುಯೋಜನದಗಲವಾದ ತಾವರೆಯಹುವುಇರುತ್ತದೆ || ೧೭ ||

ಅ || ಮಹಾಪದ್ಮಾದಿ ಸರೋವರಗಳ ಅಗಲಾದಿ ಪ್ರಮಾಣವನ್ನು ಹೇಳುತ್ತಾರೆ.

ಸೂ || ತದ್ವಿಗುಣದ್ವಿಗುಣಾ ಹ್ರದಾಃ ಪುಷ್ಕರಾಣಿ ಚ || ೧೮ ||

ಟೀ || ಹ್ರದಾಃ-ಸರೋವರಗಳು, ಪುಷ್ಕರಾಣಿಚ-ಕಮಲಗಳೂ ಕೂಡ, ತದ್ವಿಗುಣದ್ವಿಗುಣಾಃ-ತತಃ-ಉದ್ದಅಗಲದಲ್ಲಿ, ದ್ವಿಗುಣದ್ವಿಗುಣಾಃ-ಎರಡೆರಡುಭಾಗ ಅಧಿಕವಾದಂಥಾ ವಿಸ್ತಾರವುಳ್ಳಂಥಾವುಗಳು ||

ತಾ || ಪದ್ಮಸರೋವರದಿಂದ ಮಹಾಪದ್ಮಸರೋವರವು ಎರಡು

ಭಾಗ ವಿಸ್ತಾರವು, ಅದರಿಂದ ಎರಡುಭಾಗವಿಸ್ತಾರವು ತಿಗಿಂಛಸರೋವರವು. ತಾವರೆಗಳು ದ್ವಿಗುಣ ದ್ವಿಗುಣವಿಸ್ತಾರವು|| ಮೇರುಪರ್ವತದ ಉತ್ತರಕ್ಕೆ ಇರುವ ೩ ಪರ್ವತಗಳ ಸರೋವರವು, ಕಮಲವೂಸಹ, ಈ ಹಿಂಪೆಹೇಳಿದ ೩ ಸರೋವರದಂತೆ ಇರುತ್ತವೆ || ೧೯ ||

ಅ || ಆ ಸರೋವರದಲ್ಲಿ ವಾಸಮಾಡುವ ದೇವತೆಗಳನ್ನು ಹೇಳುತ್ತಾರೆ

ಸೂ || ತನ್ನಿವಾಸಿನ್ಯೋದೇವ್ಯಃ ಶ್ರೀಹ್ರೀಧೃತಿಕೀರ್ತಿಬುದ್ಧಿಲಕ್ಷ್ಮ್ಯಃ ಪಲ್ಯೋಪಮಸ್ಥಿತಯಃ ಸಸಾಮಾನಿಕಪರಿಷತ್ಕಾಃ ||

ಟೀ || ತನ್ನಿವಾಸಿನ್ಯಃ-ಆ ಪದ್ಮಸರೋವರದ ಕಮಲವೇ ಮೊದಲಾದ, ಆರುಕುಲಪರ್ವತಗಳಲ್ಲಿಯೂ ವಾಸಮಾಡುವಂಥಾ, ಶ್ರೀಹ್ರೀಧೃತಿಕೀರ್ತಿ ಬುದ್ಧಿಲಕ್ಷ್ಮ್ಯಃ-ಶ್ರೀ-ಶ್ರೀದೇವತೆಯು, ಹ್ರೀ-ಹ್ರೀದೇವತೆಯು, ಧೃತಿಃ-ಧೃತಿದೇವತೆಯೂ, ಕೀರ್ತಿ-ಕೀರ್ತಿದೇವತೆಯು, ಬುದ್ಧಿ-ಬುದ್ಧಿ ದೇವತೆಯು, ಲಕ್ಷ್ಮ್ಯಃ-ಲಕ್ಷ್ಮೀದೇವತೆಯು, ದೇವ್ಯಃ- ಈ ೬ ಷಟ್ಕುಮಾರಿಯರು || ಪಲ್ಯೋಪಮಸ್ಥಿತಯಃ-ಒಂದುಪಲ್ಯಾಯುಷ್ಯವುಳ್ಳಂಥಾವರು, ಸಸಾಮಾನಿಕಪರಿಷತ್ಕಾಃ- ೧೪೦೧೧೫ ಸಂಖ್ಯೆಯುಳ್ಳ ಸಾಮಾನಿಕದೇವತೆಗಳು, ಮತ್ತು ಪರಿಷದ್ದೇವತೆಗಳು ಇವರೊಡನೆ ಕೂಡಿದಂಥಾವರುಗಳು ||

ತಾ || ಆ ಪದ್ಮಾದಿಸರೋವರಗಳ ಮಧ್ಯದಲ್ಲಿರುವ ಕಮಲಕರ್ಣಿಕೆಗಳಮಧ್ಯದಲ್ಲಿ ಒಂದುಕ್ರೋಶನೀಳವು, ಅರ್ಧಕ್ರೋಶ ಅಗಲವು, ಒಂದುಕ್ರೋಶಕ್ಕೆ ಕಮ್ಮಿಯಾದ ಎತ್ತರವುಳ್ಳ ಪ್ರಾಸಾದಗಳುಇವೆ. ಆಪ್ರಾಸಾದದಲ್ಲಿರುವ ದೇವಸ್ತ್ರೀಯರುಗಳು ಯಾರೆಂದರೆ, || (೧) ಪದ್ಮಸರೋವರದಲ್ಲಿ ಶ್ರೀದೇವಿಯೂ, (೨) ಮಹಾಪದ್ಮಸರೋವರದಲ್ಲಿ ಹ್ರೀದೇವಿಯು, (೩) ತಿಗಿಂಛಸರೋವರದಲ್ಲಿ ಧೃತಿದೇವಿಯು, (೪) ಕೇಸರಿಸರೋವರದಲ್ಲಿ ಕೀರ್ತಿದೇವಿಯು, (೫) ಮಹಾಪುಂಡರೀಕ ಸರೋವರದಲ್ಲಿ ಬುದ್ಧಿದೇವಿಯು, (೬) ಪುಂಡರೀಕ ಸರೋವರದಲ್ಲಿ ಲಕ್ಷ್ಮೀದೇವಿಯು ಇರುತ್ತಾರೆ ಇವರುವೆಂತರದೇವತೆಗಳು || ೨೦ ||

ಅ || ಭರತಾದಿಕ್ಷೇತ್ರಗಳಲ್ಲಿರುವ ಮಹಾನದಿಗಳನ್ನು ಹೇಳುತ್ತಾರೆ.

ಸೂ || ಗಂಗಾಸಿಂಧು ರೋಹಿದ್ರೋಹಿತಾಸ್ಯಾ ಹರಿದ್ಧರಿಕಾಂ
ತಾ ಸೀತಾಸೀತೋದಾ ನಾರೀನರಕಾಂತಾ ಸುವರ್ಣಕೂಲಾ
ರೂಪ್ಯಕೂಲಾರಕ್ತಾರಕ್ತೋದಾಃ ಸರಿತಸ್ತನ್ಮಧ್ಯಗಾಃ ||೨೦||

ಟೀ || ಗಂಗಾ-ಗಗಾ ಯೆಂಬುವಂಥಾ, ಸಿಂಧುಃ-ಸಿಂಧುಯೆಂಬುವಂಥಾ, ರೋಹಿತ್-ರೋಹಿತ್ ಯೆಂಬುವಂಥಾ, ರೋಹಿತಾಸ್ಯಾ-ರೋಹಿತಾಸ್ಯಾ ಯೆಂಬುವಂಥಾ, ಹರಿತ್-ಹರಿತ್ಎಂಬುವಂಥಾ, ಸೀತಾ-ಸೀತಾ ಎಂಬುವಂಥಾ, ಸೀತೋದಾ-ಸೀತೋದಾ ಎಂಬುವಂಥಾ, ನಾರೀ-ನಾರೀಎಂಬುವಂಥಾ, ನರಕಾಂತಾ-ನರಕಾಂತಾ ಎಂಬುವಂಥಾ, ಸುವರ್ಣಕೂಲಾ-ಸುವರ್ಣಕೂಲಾಎಂಬುವಂಥಾ, ರೂಪ್ಯಕೂಲಾ ರೂಪ್ಯಕೂಲಾ ಎಂಬುವಂಥಾ, ರಕ್ತಾ-ರಕ್ತಾಎಂಬುವಂಥಾ, ರಕ್ತೋದಾ-ರಕ್ತೋದಾ ಎಂಬುವಂಥಾ, (೧೪) ಸರಿತಃ-ನದಿಗಳು, ತನ್ಮಧ್ಯಗಾಃ-ತತ್-ಆಭರತಾದಿ ಕ್ಷೇತ್ರಗಳ, ಮಧ್ಯಗಾಃ-ಮಧ್ಯದಲ್ಲಿ ಹರಿಯುವಂಥಾವುಗಳು ||

ತಾ || ಭರತಕ್ಷೇತ್ರದಲ್ಲಿ ಗಂಗಾ ಮತ್ತು ಸಿಂಧೂನದಿಗಳು, ಹೈಮವತಕ್ಷೇತ್ರದಲ್ಲಿ ರೋಹಿತ್ ಮತ್ತು ರೋಹಿತಾಸ್ಯಾನದಿಗಳು, ಹರಿವರ್ಷದಲ್ಲಿ ಹರಿತ್ ಮತ್ತು ಹರಿಕಾಂತಾನದಿಗಳು, ವಿದೇಹಕ್ಷೇತ್ರದಲ್ಲಿ ಸೀತಾ ಮತ್ತು ಸೀತೋದಾನದಿಗಳು, ರಮ್ಯಕಕ್ಷೇತ್ರದಲ್ಲಿ ನಾರೀ ಮತ್ತು ನರಕಾಂತಾನದಿಗಳು, ಹೈರಣ್ಯವತಕ್ಷೇತ್ರದಲ್ಲಿ ಸುವರ್ಣಕೂಲಾ ಮತ್ತು ರೂಪ್ಯಕೂಲಾನದಿಗಳು, ಐರಾವತಕ್ಷೇತ್ರದಲ್ಲಿ ರಕ್ತಾಮತ್ತುರಕ್ತೋದಾನದಿಗಳು ಹರಿಯುತ್ತವೆ || ೨೦ ||

ಅ || ಆ ನದಿಗಳಸ್ಟೈಕಿ ಪೂರ್ವಸಮುದ್ರಕ್ಕೆ ಹೋಗುವವನ್ನು ಹೇಳುತ್ತಾರೆ.

ಸೂ || ದ್ವಯೋರ್ದ್ವಯೋಃ ಪೂರ್ವಾಃ ಪೂರ್ವಗಾಃ || ೨೧ ||

ಟೀ || ದ್ವಯೋರ್ದ್ವಯೋಃ- ಆ ಗಂಗಾಸಿಂಧುಮೊದಲಾದ ಎರಡೆರಡು ನದಿಗಳಲ್ಲಿ, ಪೂರ್ವಾಃ-ಮೊದಲನೆಯನದಿಗಳು, ಪೂರ್ವಗಾಃ-ಪೂರ್ವದಿಕ್ಕಿನ ಸಮುದ್ರವನ್ನು ಪಡೆವಂಥಾವುಗಳು ||

ತಾ || ಗಂಗಾ, ರೋಹಿತ್, ಹರಿತ್, ಸೀತಾ, ನಾರೀ, ಸುವರ್ಣಕೂಲಾ, ರಕ್ತಾ, ಈ ೭ ನದಿಗಳೂ ಪೂರ್ವದಿಕ್ಕಿನಸಮುದ್ರಕ್ಕೆ ಸೇರುತ್ತವೆ || ೨೧ ||

ಅ || ಉತ್ತರದಿಕ್ಕಿನ ಸಮುದ್ರಕ್ಕೆಸೇರುವ ನದಿಗಳನ್ನು ಹೇಳುತ್ತಾರೆ.

ಸೂ || ಶೇಷಾಸ್ತ್ವಪರಗಾಃ || ೨೩ ||

ಟೀ || ಶೇಷಾಸ್ತು-ಉಳಿದನದಿಗಳಾವರೋ, ಅಪರಗಾಃ-ಪಶ್ಚಿಮಸಮುದ್ರವನ್ನು ಪಡೆದಂಥಾವುಗಳು ||

ತಾ || ಸಿಂಧು, ರೋಹಿತಾಸ್ಯಾ, ಹರಿಕಾಂತಾ, ಸೀತೋದಾ, ನರಕಾಂತಾ, ರೂಪ್ಯಕೂಲಾ, ರಕ್ತೋದಾ ಈ ೭ ನದಿಗಳು ಉತ್ತರದಿಕ್ಕಿನ ಸಮುದ್ರಕ್ಕೆ ಸೇರುತ್ತವೆ || ೨೩ ||

ಅ || ಆನದಿಗಳಿಗೆ ಸೇರಿದ ಉಪನದಿಗಳ ಸಂಖ್ಯೆಯನ್ನು ಹೇಳುತ್ತಾರೆ.

ಸೂ || ಚತುರ್ದಶನದೀಸಹಸ್ರಪರಿವೃತಾ ಗಂಗಾಸಿಂಧ್ವಾ
ದಯೋನದ್ಯಃ || ೨೪ ||

ಟೀ || ಗಂಗಾಸಿಂಧ್ವಾದಯಃ-ಗಂಗಾಸಿಂದುವೇ ಮೊದಲಾದರಿಥಾ, ನದ್ಯಃ- ೧೪ ನದಿಗಳು, ಚತುರ್ದಶನದೀಸಹಸ್ರಪರಿವೃತಾಃ-ಹದಿನಾಲ್ಕು ಸಾವಿರ ನದಿಗಳೊಡನೆ ಕೂಡಿದಂಥಾವುಗಳು ||

ತಾ || ಗಾಥೆ || ಭರಹೇರಾವದಸರಿಮೊವಿದೇಹಜುಗಳೇಚ || ಚೋದ್ಧಸಸಹಸ್ಸಾಣಇಪರಿವಾರಾತತೊ್ತೇದುಗುಣಾಹ ವಿದಮ್ಮಗಖಿರಿತ್ತಿ || ಚಉಡಾಸೀದಿಸಹಸ್ಸಾದೇವಕುರುತ್ತರ ಕುರುಭ್ಭವಾಹುಣಈ || ಚಉಸತ್ತಿಂಚಸಹಸ್ಸಾದಹಲಖ್ಖಾಹೊಂತಿಹುವಿದೇಹೇ || ಭರತ, ಐರಾವತ ಮತ್ತು ೦ ವಿದೇಹದಲ್ಲಿರುವ ಪ್ರತಿನಂದುನದಿಗಳಿಗೂ ೧೪ ಸಾವಿರ ಉಪನದಿಗಳು ಸೇರುತ್ತವೆ. ರೋಹಿತ್, ರೋಹಿತಾಸ್ಯಾನದಿಗೆ ಸುವರ್ಣಕೂಲಾ, ರೂಪ್ಯಕೂಲಾ, ಈ ಪ್ರತಿವೊಂದು ನದಿಗಳಿಗೂ ೨೮೦೦೦ ನದಿಗಳುಸೇರುತ್ತವೆ. ಹರಿತ್, ಹರಿಕಾಂತಾ, ನಾರೀ, ನರಕಾಂತಾ- ಈ ಪ್ರತಿವೊಂದು ನದಿಗಳಿಗೂ, ೫೬೦೦೦ ನದಿಗಳು ಸೇರುತ್ತವೆ. ದೇವಕೂರೂತ್ತರ ಕುರುಗಳಲ್ಲಿ ೮೪೦೦೦ ಪ್ರಕಾರಸೇರುತ್ತವೆ ವಟ್ಟು ವಿದೇಹದಲ್ಲಿ ೧೬೪೦೦೦ ನದಿಗಳು ಯಿರುತ್ತವೆ || ೨೪ ||

ಅ || ಭರತಕ್ಷೇತ್ರದ ಪ್ರಮಾಣವನ್ನು ಹೇಳುತ್ತಾರೆ.

ಸೂ ॥ ಭರತಃ ಷಡ್ವಿಂಶತಿಪಂಚಯೋಜನಶತವಿಸ್ತಾರಃ
ಷಟ್ಚೈಕೋನವಿಂಶತಿಭಾಗಾಯೋಜನಸ್ಯ ॥ ೨೪ ॥

ಟೀ ॥ ಭರತಃ-ಭರತಕ್ಷೇತ್ರವು, ಷಡ್ವಿಂಶತಿ ಪಂಚಶತಯೋಜನವಿಸ್ತಾರಃ-ಐನೂರಿಪ್ಪತ್ತಾರುಯೋಜನ ಪ್ರಮಾಣವುಳ್ಳಂಥಾದ್ದಾಗಿಯೂ, ಯೋಜನಸ್ಯ-ಒಂದುಯೋಜನದ, ಏಕೋನವಿಂಶತಿಭಾಗಾಃ-ಹತ್ತೊಂಭತ್ತುಭಾಗಗಳು, (ಆ ಭಾಗಗಳಲ್ಲಿ) ಷಟ್ಚ-ಆರುಭಾಗ ಕೂಕೂಡ ॥

ತಾ ॥ ಭರತಕ್ಷೇತ್ರದ ಪ್ರಮಾಣವು ೫೨೬ ಯೋಜನ ಮತ್ತು ಒಂದುಯೋಜನವನ್ನು ೧೯ ಭಾಗಮಾಡಿ ಅದರಲ್ಲಿ ೬ ಭಾಗವುಸಹ ವುಳ್ಳದ್ದು ॥ ೨೪ ॥

ಅ ॥ ಇತರಕ್ಷೇತ್ರಗಳ ಪ್ರಮಾಣವನ್ನು ಹೇಳುತ್ತಾರೆ.

ಸೂ ॥ ತದ್ವಿಗುಣ ದ್ವಿಗುಣ ವಿಸ್ತಾರಾವರ್ಷಧರವರ್ಷಾ
ವಿದೇಹಾಂತಾಃ ॥ ೨೫ ॥

ಟೀ ॥ ವಿದೇಹಾಂತಾಃ-ವಿದೇಹಕ್ಷೇತ್ರವೇ ಕೊನೆಯಾಗಿವುಳ್ಳಂಥಾ, ವರ್ಷಧರವರ್ಷಾಃ-ಕುಲಪರ್ವತಗಳು ಕ್ಷೇತ್ರಗಳು, ತದ್ವಿಗುಣದ್ವಿಗುಣವಿಸ್ತಾರಾಃ- ಆ ಭರತಕ್ಷೇತ್ರದ ದೆಶೆಯಿಂದ ವೊಂದಕ್ಕೆ ಎರಡಷ್ಟು ವೊಂದಕ್ಕೆ ಎರಡರಷ್ಟು ವಿಸ್ತಾರವುಳ್ಳಂಥಾವುಗಳು ॥

ತಾ ॥ ಭರತಕ್ಷೇತ್ರಕ್ಕೆ ಎರಡರಷ್ಟು ಹಿಮವತ್ಪರ್ವತವು. ಅದರ ಎರಡರಷ್ಟು ಹೈಮವತ ಕ್ಷೇತ್ರವು, ಅದರ ಎರಡರಷ್ಟು ಮಹಾಹಿಮವತ್ಪರ್ವತವು. ಅದರ ಎರಡರಷ್ಟು ಹರಿವರ್ಷಕ್ಷೇತ್ರವು. ಅದರ ಎರಡರಷ್ಟು ನಿಷಧಪರ್ವತವು, ಅದರ ಎರಡರಷ್ಟು ವಿದೇಹಕ್ಷೇತ್ರದ ವಿಸ್ತಾರವು ॥ ೨೫ ॥

ಅ ॥ ಮಹಾಮೇರುವಿನ ಉತ್ತರಭಾಗದ ಕ್ಷೇತ್ರಪ್ರಮಾಣವನ್ನು ಹೇಳುತ್ತಾರೆ.

ಸೂ ॥ ಉತ್ತರಾ ದಕ್ಷಿಣತುಲ್ಯಾಃ ॥ ೨೬ ॥

ಟೀ ॥ ಉತ್ತರಾಃ-ಉತ್ತರದಿಕ್ಕಿನಲ್ಲಿರುವ ಐರಾವತ ಕ್ಷೇತ್ರವೇಮೊದಲಾದಕ್ಷೇತ್ರ ಮತ್ತುಕುಲಪರ್ವತಗಳು, ದಕ್ಷಿಣತುಲ್ಯಾಃ-ದಕ್ಷಿಣದಿಕ್ಕಿನಲ್ಲಿರುವಂಥಾವುಗಳಿಗೆ ಸಮಾನವಾದಂಥಾವುಗಳು ॥

ತಾ ॥ ಭರತಕ್ಷೇತ್ರಪ್ರಮಾಣವೇಯೇ ಐರಾವತಕ್ಷೇತ್ರಪ್ರಮಾಣವು;

ಅದರ ಎರಡರಷ್ಟು ಶಿಖರಿಪರ್ವತವು, ಅದರ ಎರಡರಷ್ಟು ಹೈರಣ್ಯವತಕ್ಷೇತ್ರವು, ಅದರ ಎರಡರಷ್ಟು ರುಗ್ಮಿಪರ್ವತವು, ಅದರ ಎರಡರಷ್ಟು ರಮ್ಯಕ ಕ್ಷೇತ್ರವು, ಅದರ ಎರಡರಷ್ಟು ನೀಲಪರ್ವತವು ಇರುತ್ತವೆ || ೨೬ ||

ಅ || ಭರತೈರಾವತ ಕ್ಷೇತ್ರಗಳ ಸ್ಥಿತಿಯನ್ನು ಹೇಳುತ್ತಾರೆ

ಸೂ || ಭರತೈರಾವತಯೋರ್ವೃದ್ಧಿಹ್ರಾಸೌ ಷಟ್ಸಮಾಭ್ಯಾಮುತ್ಸರ್ಪಿಣ್ಯವಸರ್ಪಿಣೀಭ್ಯಾಂ || ೨೭ ||

ಟೀ || ಷಟ್ಸಮಾಭ್ಯಾಂ-ಸುಷಮಸುಷಮ, ಸುಷಮ, ಸುಷಮದುಷ್ಷಮ, ದುಷ್ಷಮಸುಷಮ, ದುಷ್ಷಮ, ಅತಿದುಷ್ಷಮವೆಂಬ ಆರು ಕಾಲಭೇದಉಳ್ಳಂಥಾ, ಉತ್ಸರ್ಪಿಣ್ಯವಸರ್ಪಿಣೀಭ್ಯಾಂ-ಉತ್ಸರ್ಪಿಣಿ, ಅವಸರ್ಪಿಣಿ ಎಂಬುವಂಥಾ ಕಾಲಗಳಿಂದ, ಭರತೈರಾವತಯೋಃ-ಭರತಕ್ಷೇತ್ರ ಐರಾವತ ಕ್ಷೇತ್ರಗಳಿಗೆ, ವೃದ್ಧಿಹ್ರಾಸೌ-ಉತ್ಸೇಧಾಯುಷ್ಯಾದಿಗಳು ಹೆಚ್ಚು ಕಡಿಮೆಯು ಆಗುತ್ತವೆ ||

ತಾ || ಭರತಕ್ಷೇತ್ರ ಐರಾವತಕ್ಷೇತ್ರಗಳಲ್ಲಿ ಹತ್ತುಕೋಟಾ ಕೋಟಿ ಸಾಗರಪ್ರಮಾಣಗಳುಳ್ಳ, ಉತ್ಸರ್ಪಿಣಿ, ಅವಸರ್ಪಿಣಿ, ಎಂಬ ೨ ಕಾಲಗಳು ಆಯುಷ್ಯೋತ್ಸೇಧಾದಿಗಳ ಹೆಚ್ಚುಕಡಮೆಯಿಂದ ಬರುತ್ತಲಿವೆ || ೧ ಸುಷಮಸುಷಮ, ೨ ಸುಷಮ, ೩ ಸುಷಮದುಷ್ಷಮ, ೪ ದುಷ್ಷಮಸುಷಮ, ೫ ದುಷ್ಷಮ, ೬ ಅತಿ ದುಷ್ಷಮವೆಂಬ ೬ ಭೇದಗಳು ಅವಸರ್ಪಿಣಿಕಾಲದಲ್ಲಿ ಬರುತ್ತವೆ. ಉತ್ಸರ್ಪಿಣಿಕಾಲದಲ್ಲಿ ೬ ನೇಕಾಲದಿಂದ ತಲಕೆಳಗಾಗಿ ಬರುತ್ತವೆ || ಉತ್ಸರ್ಪಿಣಿ ಎಂದರೆ ದಿನೇದಿನೆ ಮನುಷ್ಯಾದಿಗಳ ಆಯುಷ್ಯಾದಿಗಳು ಹೆಚ್ಚುತ್ತಾಹೋಗುವದು || ಅವಸರ್ಪಿಣಿ ಎಂದರೆ ದಿನೇದಿನೇ ಆಯುಷ್ಯಾದಿಗಳು ಕಮ್ಮಿಯಾಗುತ್ತಾ ಬರುವದು || ಈ ಉತ್ಸರ್ಪಿಣಿ ಅವಸರ್ಪಿಣಿ ಗಳೆರಡುಸೇರಿ ೨೦ ಕೋಟಾಕೋಟಿ ಸಾಗರಪ್ರಮಾಣವು ಇದಕ್ಕೆ ಒಂದುಕಲ್ಪಕಾಲವೆಂದು ಹೆಸರು. ೧ ನೇ ಸುಷಮಸುಷಮವೆಂಬ ಕಾಲವು ೪ ಕೋಟಾಕೋಟಿ ಸಾಗರಪ್ರಮಾಣವು. ಆರಂಭದಲ್ಲಿ ಉತ್ತಮ ಭೋಗಭೂಮಿಸ್ಥಿತಿಯು ಕ್ರಮವಾಗಿ ಕಡಮೆಯಾಗಿ ಬರುತ್ತಿರಲಾಗಿ ೨ ನೇ ಸುಷಮವೆಂಬ ಕಾಲವು ಬರುತ್ತೆ. ಅದು ಮೂರುಕೋಟಾಕೋಟಿ ಸಾಗರಪ್ರಮಾಣವು, ಆರಂ

ಭದಲ್ಲಿ ಮಧ್ಯಮಭೋಗಭೂಮಿಸ್ಥಿತಿಯು ಕ್ರಮವಾಗಿಕಡಮೆಯಾಗುತ್ತಾಬರಲಾಗಿ ೩ ನೇ ದುಷ್ಷಮಸುಷಮವೆಂಬ ಕಾಲವು ಬರುತ್ತೆ. ಅದು ಎರಡು ಕೋಟಾಕೋಟಿ ಸಾಗರಪ್ರಮಾಣವು, ಆರಂಭದಲ್ಲಿ-ಜಘನ್ಯ ಭೋಗಭೂಮಿಸ್ಥಿತಿಯು ಕ್ರಮವಾಗಿ ಕಡಮೆಯಾಗುತ್ತಾಬರಲಾಗಿ ೪ ನೇ ದುಷ್ಷಮಸುಷಮಕಾಲವುಬರುತ್ತೆ. ಅದು ೪೨ ಸಾವಿರವರ್ಷಕಡಮೆಯಾದ ಒಂದುಕೋಟಾಕೋಟಿ ಸಾಗರಪ್ರಮಾಣವು. ವಿದೇಹಕ್ಷೇತ್ರದಲ್ಲಿ ಇರುವಂಥಾಮನುಷ್ಯರಿಗೆ ಸಮಾನರಾದಂಥಾವರು, ಕ್ರಮವಾಗಿಕಡಮೆಯಾಗಿಬರುತ್ತಿರಲಾಗಿ ೫ ನೇ ದುಷ್ಷಮವೆಂಬಕಾಲವು ೨೧ ಸಾವಿರವರ್ಷಪ್ರಮಾಣವು, ಕ್ರಮವಾಗಿಕಡಮೆಯಾಗಿ ಬರುತ್ತಿರಲಾಗಿ ೬ ನೇ ಅತಿದುಷ್ಷಮವೆಂಬ ಕಾಲವು ೨೧ ಸಾವಿರವರ್ಷಪ್ರಮಾಣವುಳ್ಳದ್ದು ಬರುತ್ತೆ ॥ ಉತ್ಸರ್ಪಿಣಿಕಾಲದಲ್ಲಿ ೬ ನೇ ಕಾಲ ೫ ನೇ ಕಾಲ ೪ ನೇ ಕಾಲ ೩ ನೇ ಕಾಲ ೨ ನೇಕಾಲ ೧ ನೇ ಕಾಲ ಈ ಪ್ರಕಾರಬರುತ್ತೆ ॥ ೨೮ ॥

ಅ ॥ ಉಳಿದಕ್ಷೇತ್ರಗಳ ಸ್ಥಿತಿಯನ್ನು ಹೇಳುತ್ತಾರೆ.

ಸೂ ॥ ತಾಭ್ಯಾಮಪರಾಭೂಮಯೋಽವಸ್ಥಿತಾಃ ॥ ೨೯ ॥

ಟೀ ॥ ತಾಭ್ಯಾಂ- ಆ ಭರತೈರಾವತಕ್ಷೇತ್ರಗಳ ದೆಸೆಯಿಂದ, ಅಪರಾಃ-ಇತರಗಳಾದಂಥಾ, ಭೂಮಯಃ-ಹೈಮವತಾದಿಕ್ಷೇತ್ರಗಳು, ಅವಸ್ಥಿತಾಃ-ಹೆಚ್ಚುಕಡಿಮೆಯಿಲ್ಲದೆ ಒಂದೇರೂಪವಾಗಿರುತ್ತವೆ, ॥ ೨೯ ॥

ಅ ॥ ಭೋಗಭೂಮಿ ಕ್ಷೇತ್ರಗಳ ಆಯುಷ್ಯವನ್ನು ಹೇಳುತ್ತಾರೆ.

ಸೂ ॥ ಏಕದ್ವಿತ್ರಿಪಲ್ಯೋಪಮಸ್ಥಿತಯೋಹೈಮವತಕ
ಹಾರಿವರ್ಷಕದೈವಕುರುವಕಾಃ ॥ ೩೦ ॥

ಟೀ ॥ ಹೈಮವತಕಹಾರಿವರ್ಷಕದೈವಕುರುವಕಾಃ-ಹೈಮವತ-ಜಘನ್ಯಭೋಗಭೂಮಿಯಾದ ಹೈಮವತಕ್ಷೇತ್ರವು, ಹಾರಿವರ್ಷಕ-ಮಧ್ಯಮ ಭೋಗಭೂಮಿಯಾದ ಹರಿವರ್ಷಕ್ಷೇತ್ರವು, ದೈವಕುರುವಕಾಃ-ಉತ್ತಮಭೋಗಭೂಮಿಯಾದ ದೇವಕುರುಕ್ಷೇತ್ರವು ಇವುಗಳು, ಏಕದ್ವಿತ್ರಿಪಲ್ಯೋಪಮಸ್ಥಿತಯಃ-ಏಕ-ಒಂದು, ದ್ವಿ-ಎರಡು, ತ್ರಿ-ಮೂರು, ಪಲ್ಯೋಪಮಸ್ಥಿತಯಃ-ಪಲ್ಯೋಪಮಾಯುಷ್ಯವು- ಅಂದರೆ, ಹೈಮವತದಲ್ಲಿ ೧ ಪಲ್ಯಾಯುಷ್ಯವು, ಹರಿವರ್ಷದಲ್ಲಿ ೨ ಪಲ್ಯಾಯುಷ್ಯವು, ದೇ

ವಕುರುವಿನಲ್ಲಿ ೩ ಪಲ್ಯಾಯುಷ್ಯವು ಇರುತ್ತೆ || ೩೦ ||

ಅ || ಮೇರುವಿನ ಉತ್ತರಕ್ಷೇತ್ರಾಯುಷ್ಯವನ್ನು ಹೇಳುತ್ತಾರೆ.

ಸೂ || ತಥೋತ್ತರಾಃ || ೩೧ ||

ಟೀ || ತಥಾ-ಆಪ್ರಕಾರವಾಗಿ, ಉತ್ತರಾಃ-ಮೇರುವಿನ ಉತ್ತರಪಾರ್ಶ್ವದಲ್ಲಿರುವಂಥಾಕ್ಷೇತ್ರಗಳು ||

ತಾ || ಹೈರಣ್ಯವತಕ್ಷೇತ್ರದಲ್ಲಿ ೧ ಪಲ್ಯಾಯುಷ್ಯವು ಜಘನ್ಯಭೋಗಭೂಮಿಸ್ಥಿತಿಯು ಇರುತ್ತೆ, ರಮ್ಯಕಕ್ಷೇತ್ರದಲ್ಲಿ ೨ ಪಲ್ಯೋಪಮಾಯುಷ್ಯವು. ಮಧ್ಯಮಭೋಗಭೂಮಿಸ್ಥಿತಿಯು ಇರುತ್ತೆ. ಉತ್ತರಕುರುವಿನಲ್ಲಿ ೩ ಪಲ್ಯೋಪಮಾಯುಷ್ಯವು, ಉತ್ತಮಭೋಗಭೂಮಿಸ್ಥಿಯು ಇರುತ್ತೆ || ೩೧ ||

ಅ || ವಿದೇಹಕ್ಷೇತ್ರದ ಆಯುಷ್ಯವನ್ನು ಹೇಳುತ್ತಾರೆ.

ಸೂ || ವಿದೇಹೇಷು ಸಂಖ್ಯೇಯಕಾಲಾಃ || ೩೨ ||

ಟೀ|| ವಿದೇಹೇಷು- ೩೨ ವಿದೇಹಕ್ಷೇತ್ರಗಳಲ್ಲಿ, ಸಂಖ್ಯೇಯಕಾಲಾಃ-ಸಂಖ್ಯಾತವರ್ಷಾಯುಷ್ಯವುಳ್ಳವರು ||

ತಾ || ವಿದೇಹಕ್ಷೇತ್ರದಲ್ಲಿರುವ ಮನುಷ್ಯರಿಗೆ ೫೦೦ ಬಿಲ್ಲು ಉತ್ಸೇಧವು, ಉತ್ಕೃಷ್ಟದಿಂದ ಪೂರ್ವಕೋಟಿ ಆಯುಷ್ಯವು ಪ್ರತಿದಿನದಲ್ಲಿಯು ಆಹಾರವು ಉಂಟಾಗಿ ಇರುತ್ತದೆ. || ೩೨ ||

ಅ || ಭರತಕ್ಷೇತ್ರದ ಪ್ರಮಾಣವನ್ನು ಹೇಳುತ್ತಾರೆ.

ಸೂ || ಭರತಸ್ಯ ವಿಷ್ಕಂಭೋ ಜಂಬೂದ್ವೀಪಸ್ಯ ನವತಿಶತಭಾಗಃ || ೩೩ ||

ಟೀ || ಭರತಸ್ಯ-ಭರತಕ್ಷೇತ್ರದ, ವಿಷ್ಕಂಭಃ-ಅಗಲವು, ಜಂಬೂದ್ವೀಪಸ್ಯ-ಜಂಬೂದ್ವೀಪದ, ನವತಿಶತಭಾಗಃ-ನೂರುತೊಂಭತ್ತನೇ ಭಾಗವು || ತಾ | ಜಂಬೂದ್ವೀಪವನ್ನು ೧೯೦ ಭಾಗವಾಡಿ ಅದರಲ್ಲಿ ೧ ಭಾಗದಷ್ಟುಪ್ರಮಾಣ ಭರತಕ್ಷೇತ್ರವಿರುತ್ತದೆ || ೩೩ ||

ಅ || ಧಾತಕೀಷಂಡದ್ವೀಪದ ಸ್ಥಿತಿಯನ್ನು ಹೇಳುತ್ತಾರೆ.

ಸೂ || ದ್ವಿರ್ಧಾತಕೀಷಂಡೇ || ೩೪ ||

ಟೀ || ಧಾತಕೀಷಂಡೇ-ಧಾತಕೀಷಂಡದ್ವೀಪದಲ್ಲಿ, ದ್ವಿಃ-ದ್ವಿಗುಣವಾಗುತ್ತೆ||ತಾ|| ೪ ಲಕ್ಷಯೋಜನಪ್ರಮಾಣವುಳ್ಳ ಧಾತಕೀಷಂಡದ್ವೀಪದಲ್ಲಿ ಭರತಾದಿಕ್ಷೇತ್ರಗಳು ಎರಡೆರಡು ಯಿರುತ್ತವೆ || ೩೩ ||

ಅ || ಪುಷ್ಕರಾರ್ಧದ್ವೀಪದ ಸ್ಥಿತಿಯನ್ನು ಹೇಳುತ್ತಾರೆ.

ಸೂ || ಪುಷ್ಕರಾರ್ಧೇ ಚ || ೩೪ ||

ಟೀ || ಪುಷ್ಕರಾರ್ಧೇಚ-ಪುಷ್ಕರಾರ್ಧದಲ್ಲಿಯೂಕೂಡ ದ್ವಿಗುಣವಾಗುವದು ||

ತಾ || ೧೬ ಲಕ್ಷಯೋಜನ ಅಗಲವುಳ್ಳ ಪುಷ್ಕರಾರ್ಧದ್ವೀಪವು ಇರುತ್ತೆ, ಅದರಮಧ್ಯದಲ್ಲಿ ಮಾನುಷೋತ್ತರ ಪರ್ವತವಿರುತ್ತೆ. ಮೊದಲ ಅರ್ಧದಲ್ಲಿ ಭರತಾದಿಕ್ಷೇತ್ರಗಳು ಎರಡೆರಡುಯಿರುತ್ತವೆ. ಇನ್ನುಮುಂದಲದ್ವೀಪಗಳಲ್ಲಿ ಈ ಪ್ರಕಾರ ಇರುವದಿಲ್ಲವು || ೩೪ ||

ಅ || ಮನುಷ್ಯರುಯಿರುವ ದ್ವೀಪವನ್ನು ಹೇಳುತ್ತಾರೆ.

ಸೂ || ಪ್ರಾಙ್ಮಾನುಷೋತ್ತರಾನ್ಮನುಷ್ಯಾಃ || ೩೫ ||

ಟೀ || ಮಾನುಷೋತ್ತರಾತ್-ಮಾನುಷೋತ್ತರ ಪರ್ವತದ್ವೆಶೆಯಿಂದ, ಪ್ರಾಕ್-ಪೂರ್ವದಲ್ಲಿ, ಅಂದರೆ ನಡುವೆ, ಮನುಷ್ಯಾಃ-ಮನುಷ್ಯರುಗಳು ಇರುತ್ತಾರೆ ||

ತಾ || ಪುಷ್ಕರದ್ವೀಪದ ಮಧ್ಯದಲ್ಲಿ ವಲಯಾಕಾರದಿಂದ ವೃತ್ತವಾದಂಥಾದ್ದಾಗಿ ಮಾನುಷೋತ್ತರವೆಂಬುವಂಥಾ ಪರ್ವತವು ಇರುತ್ತೆ, ಆ ಪರ್ವತದೊಳಗೆ ಇರುವಂಥಾ ಎರಡುವರೆದ್ವೀಪದಲ್ಲಿಯೇ ಮನುಷ್ಯರುಗಳು ಇರುವದು, ಆ ಪರ್ವತದಿಂದ ಆಚೆ ಮನುಷ್ಯರುಇಲ್ಲವು ಆದ್ದರಿಂದ ಆ ಬೆಟ್ಟಕ್ಕೆ ಮಾನುಷೋತ್ತರವೆಂಬುವ ಹೆಸರುಬಂದಿದೆ, ಕೇವಲಿಸಮುದ್ಘಾತವಿಗ್ರಹಗತಿಯಲ್ಲಿ ವರ್ತಿಸುವಜೀವಗಳಿಗೆ ಈ ನಿಯಮವಿಲ್ಲ || ೩೫ ||

ಅ || ಮನುಷ್ಯರು ಎರಡುವಿಧವೆಂದು ಹೇಳುತ್ತಾರೆ.

ಸೂ || ಆರ್ಯಾಮ್ಲೇಚ್ಛಾಶ್ಚ || ೩೬ ||

ಟೀ || ಆರ್ಯಾಃ-ಆರ್ಯರೆಂತಲೂ, ಮ್ಲೇಚ್ಛಾಶ್ಚ-ಮ್ಲೇಚ್ಛರೆಂತಲೂಕೂಡ ಎರಡುಪ್ರಕಾರವು ||

ತಾ || ವೃದ್ಧಿಪ್ರಾಪ್ತರು, ಅವೃದ್ಧಿಪ್ರಾಪ್ತರು ಎಂದು ಆರ್ಯರು

೨ ವಿಧವು ‖ ಕ್ಷೇತ್ರಾರ್ಯರು, ಜಾತ್ಯಾರ್ಯರು, ಕರ್ಮಾರ್ಯರು, ಚಾರಿತ್ರಾರ್ಯರು, ದರ್ಶನಾರ್ಯರು, ಎಂದ ೬ ಪ್ರಕಾರವು ‖ ಸಾವದ್ಯಕರ್ಮಾರ್ಯರು, ಅಲ್ಪಸಾವದ್ಯಾರ್ಯರು, ಅಸಾವದ್ಯಾರ್ಯರೆಂದು ೩ ವಿಧವು ‖ ಅಸಿ, ಮಸಿ, ಕೃಷಿ, ವಿದ್ಯಾ, ಶಿಲ್ಪ, ವಾಣಿಜ್ಯ, ಇವುಗಳಿಂದ ಜೀವಿಸುವವರು ಸಾವದ್ಯಕರ್ಮಾರ್ಯರು ‖ ಅಣುವ್ರತಿಗಳು ಅಲ್ಪಸಾವದ್ಯಾರ್ಯರು ‖ ಮಹಾವ್ರತಿಗಳು ಅಸಾವದ್ಯಾರ್ಯರು ‖ ಅಂತರದ್ವೀಪಜಮ್ಲೇಚ್ಛರೆಂತಲೂ, ಕರ್ಮಭೂಮಿಜಮ್ಲೇಚ್ಛರೆಂತಲೂ, ಮ್ಲೇಚ್ಛರು ಎರಡುವಿಧವು ‖ ೩೭ ‖

ಅ ‖ ಕರ್ಮಭೂಮಿಗಳನ್ನು ಹೇಳುತ್ತಾರೆ.

ಸೂ ‖ ಭರತೈರಾವತ ವಿದೇಹಾಃ ಕರ್ಮಭೂಮಯೋಽನ್ಯ
ತ್ರ ದೇವಕುರೂತ್ತರಕುರುಭ್ಯಃ ‖ ೩೮ ‖

ಟೀ ‖ ದೇವಕುರೂತ್ತರಕುರುಭ್ಯಃ-ದೇವಕುರು ಉತ್ತರಕುರುಗಳವೆಶಯಿಂದ, ಅನ್ಯತ್ರ-ಮತ್ತೊಂದುಸ್ಥಳದಲ್ಲಿ ಅಂದರೆ ಬಿಟ್ಟು, ಭರತೈರಾವತವಿದೇಹಾಃ-ಭರತ-ಭರತಕ್ಷೇತ್ರವು, ಐರಾವತ-ಐರಾವತಕ್ಷೇತ್ರವು, ವಿದೇಹಾಃ-ವಿದೇಹಕ್ಷೇತ್ರಗಳು, ಕರ್ಮಭೂಮಯಃ- (ಈ ೧೫) ಕರ್ಮಭೂಮಿಗಳೆಂದು ಹೇಳಲ್ಪಡುತ್ತವೆ ‖

ತಾ ‖ ಸಪ್ತಮನರಕಕ್ಕೆ ಹೋಗುವಷ್ಟು ಪಾಪಗಳನ್ನು, ಸರ್ವಾರ್ಥಸಿದ್ಧಿಮೊದಲಾದ ಅಭ್ಯುದಯಸ್ಥಾನಕ್ಕೆ ಹೋಗುವಷ್ಟು ಪುಣ್ಯಗಳನ್ನು ಮಾಡುವದರಿಂದ ಈ ಕ್ಷೇತ್ರಕ್ಕೆ ಕರ್ಮಭೂಮಿಯೆಂದು ಹೆಸರು ‖ ಇದೂಅಲ್ಲದೇ ಆ ಸ್ಥಳಗಳಲ್ಲಿ ಅಸಿ,ಮಸಿ, ಕೃಷಿ,ವಿದ್ಯಾ,ಶಿಲ್ಪ, ವಾಣಿಜ್ಯವೆಂಬಜೀವನೋಪಾಯವೃತ್ತಿಗಳು ಇರುವದ್ದರಿಂದ ಕರ್ಮಭೂಮಿಯೆಂದು ಹೆಸರಾಗಿರುತ್ತದೆ ‖ ದೇವಕುರು ಉತ್ತರಕುರುಗಳು ಉತ್ತಮಭೋಗಭೂಮಿಯು ‖ ದಶವಿಧಕಲ್ಪವೃಕ್ಷಗಳಿಂದ ಕೊಡಲ್ಪಡುವ ಭೋಗೋಪಭೋಗವಸ್ತುಗಳ ಅನುಭವಸ್ಥಳಕ್ಕೆ ಭೋಗಭೂಮಿಯೆಂದು ಹೆಸರು ‖ ೩೮ ‖

ಅ ‖ ಮೇಲೆಹೇಳಿದ ಕ್ಷೇತ್ರಗಳಲ್ಲಿ ಹುಟ್ಟುವಮನುಷ್ಯರ ಆಯುಷ್ಯ
ಪ್ರಮಾಣವನ್ನು ಹೇಳುತ್ತಾರೆ.

ಸೂ ॥ ನೃಸ್ಥಿತಿ ಪರಾವರೇತ್ರಿಪಲ್ಯೋಪಮಾಂತರ್ಮುಹೂರ್ತೇ ॥

ಟೀ ॥ ನೃಸ್ಥಿತಿಪರಾವರೇ-ನೃಸ್ಥಿತಿ-ಮನುಷ್ಯರ ಆಯುಷ್ಯಸ್ಥಿತಿಯು, ಪರಾವರೇ-ಉತ್ಕೃಷ್ಟನಿಕೃಷ್ಟದಲ್ಲಿ, ತ್ರಿಪಲ್ಯೋಪಮಾಂತರ್ಮುಹೂರ್ತೇ-ತ್ರಿಪಲ್ಯೋಪಮ-ಮೂರುಪಲ್ಯಾಯುಷ್ಯವು, ಅಂತರ್ಮುಹೂರ್ತೇ-ಅಂತರ್ಮುಹೂರ್ತಾಯುಷ್ಯವು ॥

ತಾ ॥ ಮನುಷ್ಯರುಗಳಿಗೆ ಹೆಚ್ಚಾದರೆಯುಷ್ಯವು ಮೂರುಪಲ್ಯೋಪಮಪ್ರಮಾಣವು. ಜಘನ್ಯದಲ್ಲಿ ಅಂತರ್ಮುಹೂರ್ತಾಯುಷ್ಯವು. ಮಧ್ಯಮಾಯುಷ್ಯವು ಅನೇಕವಿಧವಾಗಿದೆ ॥ ೩೯ ॥

ಅ ॥ ತಿರ್ಯಕ್ಪ್ರಾಣಿಗಳ ಆಯುಷ್ಯವನ್ನು ಹೇಳುತ್ತಾರೆ.

ಸೂ ॥ ತಿರ್ಯಗ್ಯೋನಿಜಾನಾಂ ಚ ॥ ೪೦ ॥

ಟೀ ॥ ತಿರ್ಯಗ್ಯೋನಿಜಾನಾಂಚ-ತಿರ್ಯಕ್ಪ್ರಾಣಿಗಳಿಗೂ ಕೂಡ॥

ತಾ ॥ ತಿರ್ಯಕ್ಪ್ರಾಣಿಗಳಿಗೆ ಉತ್ಕೃಷ್ಟದಲ್ಲಿ ಮೂರುಪಲ್ಯಾಯುಷ್ಯವು ಜಘನ್ಯದಲ್ಲಿ ಅಂತಮುಹೂರ್ತಾಯುಷ್ಯವು, ಮಧ್ಯಮದಲ್ಲಿ ಮನುಷ್ಯರಿಗೂ ತಿರ್ಯಕ್ಪ್ರಾಣಿಗಳಿಗೂ ಅನೇಕಪ್ರಕಾರವಾಗಿ ಆಯುಷ್ಯ ಉಂಟಾಗುವದು ॥ ೪೦ ॥

ಇತಿ ತತ್ವಾರ್ಥಾಧಿಗಮೇ ಮೋಕ್ಷಶಾಸ್ತ್ರೇ ತೃತೀಯೋಧ್ಯಾಯಃ ॥ ಶ್ರೀ

ಚತುರ್ಥಾಧ್ಯಾಯ ಪ್ರಾರಂಭಃ

ದೇವತಾಧಿಕರಣಂ.

ಅ ॥ ದೇವಗತಿಯ ಭೇದವನ್ನು ಹೇಳುತ್ತಾರೆ.

ಸೂ ॥ ದೇವಾಶ್ಚತುರ್ನಿಕಾಯಾಃ ॥ ೧ ॥

ಟೀ ॥ ದೇವಾಃ- ದೇವತೆಗಳು, ಚತುರ್ನಿಕಾಯಾಃ-ಭವನ, ವ್ಯಂತರ, ಜ್ಯೋತಿಷ್ಕ,ವೈಮಾನಿಕ, ವೆಂಬ ಭೇದದಿಂದ ನಾಲ್ಕು ಸಂಘವುಳ್ಳಂಥಾವರುಗಳುಅಂದರೆ ೪ ಪ್ರಕಾರವು ॥ ೧ ॥

ಅ || ದೇವತೆಗಳ ಲೇಶ್ಯವನ್ನು ಹೇಳುತ್ತಾರೆ.

ಸೂ || ಆದಿತಸ್ತ್ರಿಷು ಪೀತಾಂತಲೇಶ್ಯಾಃ || ೨ ||

ಟೀ || ಆದಿತಃ-ಮೊದಲನೇದರ ಪಕೆಯಿಂದ, ತ್ರಿಷು-ಭವನವ್ಯಂತರ ಜ್ಯೋತಿಷ್ಕರೆಂಬ ಮೂರುದೇವನಿಕಾಯುಗಳಲ್ಲಿ, ಪೀತಾಂತಲೇಶ್ಯಾಃ-ಕೃಷ್ಣ, ನೀಲ, ಕಪೋತ, ಪೀತ, ಎಂಬ ನಾಲ್ಕುಲೇಶ್ಯ ಉಳ್ಳಂಥಾ ವರುಗಳು ||

ತಾ || ಭವನವಾಸಿಗಳು, ವ್ಯಂತರರು, ಜ್ಯೋತಿಷ್ಕರು ಎಂಬ ೩ ಭೇದಗಳುಳ್ಳ ದೇವತೆಗಳಿಗೆ. ಕೃಷ್ಣಲೇಶ್ಯ, ನೀಲಲೇಶ್ಯ, ಕಪೋತಲೇಶ್ಯ, ಪೀತಲೇಶ್ಯ ಎಂಬ ಈ ೪ ಲೇಶ್ಯಗಳು ಉಂಟು. ಲೇಶ್ಯವೆಂದರೆ ಅವರ ಮನಃಪರಿಣಾಮಕ್ಕೆ ಹೆಸರು || ೨ ||

ಅ || ಆ ೪ ವಿಧ ದೇವನಿಕಾಯುಗಳ ಅಂತರ್ಭೇದವನ್ನು ಹೇಳುತ್ತಾರೆ.

ಸೂ || ದಶಾಷ್ಟಪಂಚದ್ವಾದಶವಿಕಲ್ಪಾಃ ಕಲ್ಪೋಪಪನ್ನ
ಪರ್ಯಂತಾಃ || ೩ ||

ಟೀ || ಕಲ್ಪೋಪಪನ್ನಪರ್ಯಂತಾಃ-ವೈಮಾನಿಕದೇವರೇ ಕೊನೆಯಾಗಿಯುಳ್ಳ ೪ ದೇವನಿಕಾಯುಗಳೂ, (ಕ್ರಮವಾಗಿ) ದಶಾಷ್ಟಪಂಚದ್ವಾದಶವಿಕಲ್ಪಾಃ-ದಶ-ಭವನವಾಸಿಗಳು ಹತ್ತುವಿಧ ವುಳ್ಳವರುಗಳು,ಅಷ್ಟ-ವ್ಯಂತರರು ಎಂಟುವಿಧವುಳ್ಳವರುಗಳು, ಪಂಚ-ಜ್ಯೋತಿಷ್ಕರು ಐದುವಿಧವುಳ್ಳವರುಗಳು, ದ್ವಾದಶವಿಕಲ್ಪಾಃ-ಕಲ್ಪವಾಸಿಗಳು ಹನ್ನೆರಡು ವಿಧವುಳ್ಳವರುಗಳು ||

ತಾ || ಭವನವಾಸಿಗಳಲ್ಲಿ ಹತ್ತುವಿಧವಿಧೆ- ವ್ಯಂತರರಲ್ಲಿ ಎಂಟು ವಿಧವಿಧೆ, ಜ್ಯೋತಿಷ್ಕರಲ್ಲಿ ಐದುವಿಧವಿಧೆ, ವೈಮಾನಿಕರಲ್ಲಿ ಹನ್ನೆರಡುವಿಧವಿಧೆ || ೩ ||

ಅ || ಅದೇ ದೇವತೆಗಳಲ್ಲಿ ಇನ್ನೂ ವಿಶೇಷವನ್ನು ಹೇಳುತ್ತಾರೆ.

ಸೂ || ಇಂದ್ರಸಾಮಾನಿಕತ್ರಾಯಸ್ತ್ರಿಂಶಪಾರಿಷದಾತ್ಮ
ರಕ್ಷಲೋಕಪಾಲಾನೀಕ ಪ್ರಕೀರ್ಣಕಾಭಿಯೋಗ್ಯಕಿ
ಲ್ಬಿಷಿಕಾಶ್ಚೈಕಶಃ || ೪ ||

ಟೀ || ಇಂದ್ರಸಾಮಾನಿಕತ್ರಾಯಸ್ತ್ರಿಂಶ ಪಾರಿಷದಾತ್ಮರಕ್ಷಲೋ

ಕಪಾಲಾನೀಕಪ್ರಕೀರ್ಣಕಾಭಿಯೋಗ್ಯಕಿಲ್ಬಿಷಿಕಾಶ್ಚ-ಇಂದ್ರರು, ಸಾಮಾನಿಕರು, ತ್ರಾಯಸ್ತ್ರಿಂಶ, ಪಾರಿಷದ, ಆತ್ಮರಕ್ಷ, ಲೋಕಪಾಲ, ಅನೀಕ, ಪ್ರಕೀರ್ಣಕ, ಆಭಿಯೋಗ್ಯ, ಕಿಲ್ಬಿಷಿಕರೂಕೂಡ, ಏಕಶಃ-ವೊಂದೊಂದು ನಿಕಾಯಕ್ಕೂ ಪ್ರತ್ಯೇಕವಾಗಿಧಾರೆ ॥

ತಾ ॥ ಇಂದ್ರ-ಇತರದೇವತಾ ಸಾಧಾರಣವಾದ ಅಣಿಮಾದಿಯೋಗದಿಂದ ಪ್ರಕಾಶಿಸುವವರು ಇಂದ್ರರೆಂಬುವರು, ಸಾಮಾನಿಕ-ಆಜ್ಞೈಶ್ವರ್ಯದಿಂದ ಬಿಡಲ್ಪಟ್ಟ ಸ್ಥಾನಆಯುಷ್ಯವೀರ್ಯಪರಿವಾರ ಭೋಗೋಪಭೋಗಗಳಲ್ಲಿ ಇಂದ್ರರಿಗೆ ಸಮಾನರಾದವರು ಸಾಮಾನಿಕದೇವರೆಂಬುವರು, ತ್ರಾಯತ್ರಿಂಶ-ಮಹತ್ತರ ಪಿತೃ ಗುರ ಉಪಾಧ್ಯಾಯ ಮಂತ್ರೀಶರುಗಳಿಗೆ ಸಮಾನರಾದವರು ತ್ರಾಯಸ್ತ್ರಿಂಶರೆಂಬುವರು, ಪಾರಿಷತ್-ಒಳಗಣ ಹೊರಗಣ ನಡುವಣ ಸ್ಥಳಗಳಲ್ಲಿ ಕೂತುಕೊಳ್ಳುವದಕ್ಕೆ ಯೋಗ್ಯರಾದ ಪೀಠಮರ್ಧಸಮಾನರಾದವರು ಪಾರಿಷದ್ದೇವತೆಗಳು,ಆತ್ಮರಕ್ಷ-ಅಂಗರಕ್ಷಕರಿಗೆ ಸಮಾನರಾದ ಆತ್ಮರಕ್ಷಕರು, ಲೋಕಪಾಲ-ಲೋಕಪಾಲನಶೀಲ ತಂತ್ರೋಪಗಳಿಗೆ ಸಮಾನರಾದ ಲೋಕಪಾಲರೆಂಬುವರು, ಅನೀಕ-ಪ್ರತ್ಯೇಕ ಏಳುಏಳು ಕಕ್ಷ್ಯದಿಂದಕೂಡಿದ ಕಾಲಾಳುಮೊದಲಾದ ದಂಡಸ್ಥಾನೀಯರಾದ ಏಳುವಿಧ ಸೇನೆಗೆಸಮಾನರಾದ ಅನೀಕರೆಂಬುವರು, ಪ್ರಕೀರ್ಣಕ-ಪಟ್ಟಣದಜನಕ್ಕೆ ಸಮಾನರಾದ ಪ್ರಕೀರ್ಣಕರೆಂಬ ದೇವತೆಗಳು, ಅಭಿಯೋಗ್ಯ-ವಾಹನಾದಿಕಾರ್ಯದಲ್ಲಿ ಪ್ರವೃತ್ತರಾದ ದಾಸರಸಮಾನರಾದ ಆಭಿಯೋಗ್ಯರೆಂಬ ದೇವತೆಗಳು, ಕಿಲ್ಬಿಷಿಕಾಶ್ಚ-ಅಂತ್ಯಪಾದಸ್ಥಾನೀಯ (ದೂರವಾಗಿಇರುವರಿಗೆ) ಸಮಾನರಾದ ಕಿಲ್ಬಿಷಿಕರೆಂಬುವರು,ಎಂದು ಹಿಂದೆಹೇಳಿದ ೪ದೇವತಾಭೇದಗಳಲ್ಲಿಯೂ ಹತ್ತುಭೇದಗಳಿವೆ || ೪ ||

ಅ ॥ ವ್ಯಂತರ ಜ್ಯೋತಿಷ್ಕರಲ್ಲಿ ಹತ್ತುಭೇದವಲ್ಲಿ ಎರಡುಭೇದವಿಲ್ಲವೆಂದು ಹೇಳುತ್ತಾರೆ.

ಸೂ ॥ ತ್ರಾಯಸ್ತ್ರಿಂಶಲೋಕಪಾಲವರ್ಜ್ಯಾವ್ಯಂತರ ಜ್ಯೋತಿಷ್ಕಾಃ ॥ ೫ ||

ಟೀ ॥ ವ್ಯಂತರಜ್ಯೋತಿಷ್ಕಾಃ-ವ್ಯಂತರ-ವ್ಯಂತರ ದೇವತೆಗಳು,

ಜ್ಯೋತಿಷ್ಕಾಃ-ಜ್ಯೋತಿಷ್ಕದೇವತೆಗಳು, ತ್ರಾಯಸ್ತ್ರಿಂಶಲೋಕಪಾಲವರ್ಜ್ಯಾಃ- ತ್ರಾಯಸ್ತ್ರಿಂಶ-ತ್ರಾಯಸ್ತ್ರಿಂಶ ದೇವತೆಗಳಿಂದಲೂ, ಲೋಕಪಾಲ-ಲೋಕಪಾಲದೇವತೆಗಳಿಂದಲೂ, ವರ್ಜ್ಯಾಃ-ಬಿಡುವದಕ್ಕೆ ಯೋಗ್ಯರಾದಂಥಾವರುಗಳು ||

ತಾ || ವ್ಯಂತರದೇವತೆಗಳಲ್ಲಿಯೂ, ಜ್ಯೋತಿಷ್ಕದೇವತೆಗಳಲ್ಲಿಯೂ, ಹಿಂದೇಹೇಳಿದ ೧೦ ವಿಧದಲ್ಲಿ ತ್ರಾಯಸ್ತ್ರಿಂಶದೇವತೆಗಳು, ಲೋಕಪಾಲದೇವತೆಗಳು ಎಂಬ ಎರಡುಭೇದದ ದೇವತೆಗಳು ಇರುವದಿಲ್ಲ||

ಅ || ದೇವತೆಗಳಲ್ಲಿ ಇಂದ್ರರುಗಳನ್ನು ಹೇಳುತ್ತಾರೆ.

ಸೂ || ಪೂರ್ವಯೋರ್ದ್ವೀಂದ್ರಾಃ || ೬ ||

ಟೀ|| ಪೂರ್ವಯೋಃ-ಮೊದಲನೇಯವರಾದಂಥ ಭವನವಾಸಿ-ವ್ಯಂತರ ದೇವತೆಗಳಿಗೆ, ದ್ವೀಂದ್ರಾಃ-ಎರಡೆರಡು ಇಂದ್ರರುಗಳು ||

ತಾ || ಹತ್ತುವಿಧ ಭವನವಾಸಿಗಳಲ್ಲಿ ೨೦ ಇಂದ್ರರುಗಳು ಇರುತ್ತಾರೆ. ಹ್ಯಾಗೆಂದರೆ? ಅಸುರಕುಮಾರರಿಗೆ ಚಮರನು, ವೈರೋಚನನು, ನಾಗಕುಮಾರರಿಗೆ ಭೂತಾನಂದನು, ಧರಣಾನಂದನು, ವಿದ್ಯುತ್ಕುಮಾರರಿಗೆ ಹರಿಷೇಣನು, ಹರಿಕಾಂತನು, ಸುಪರ್ಣಕುಮಾರರಿಗೆ ವೇಣುವು, ವೇಣುಧಾರಿಯು, ಅಗ್ನಿಕುಮಾರರಿಗೆ ಅಗ್ನಿಶಿಖನು, ಅಗ್ನಿವಾಹನನು, ವಾತಕುಮಾರರಿಗೆ ವೇಲಂಬನು, ಪ್ರಭಂಜನನು, ಸ್ತನಿತಕುಮಾರರಿಗೆ ಸುಘೋಷನು, ಮಹಾಘೋಷನು, ಉದಧಿಕುಮಾರರಿಗೆ ಜಲಕಾಂತನು, ಜಲಪ್ರಭನು, ದ್ವೀಪಕುಮಾರರಿಗೆ ಪೂರ್ಣನು, ವಶಿಷ್ಟನು, ದಿಕ್ಕುಮಾರರಿಗೆ ಅಮಿತಗತಿಯು, ಅಮಿತವಾಹನನು, ಮೇಲೆಹೇಳಿದ ಇಬ್ಬರುಇಬ್ಬರು ಆಯಾಯನಿಕಾಯಕ್ಕೆ ಇಂದ್ರರುಗಳು || ಎಂಟುವಿಧ ವ್ಯಂತರರಲ್ಲಿ ಹದಿನಾರುಇಂದ್ರರುಗಳು ಇರುತ್ತಾರೆ. ಯಾರುಯಾರೆಂದರೆ ? ಕಿಂನರರುಗಳಿಗೆ,ಕಿಂನರನು, ಕಿಂಪುರುಷನು. ಕಿಂಪುರುಷರಿಗೆ-ಸತ್ಪುರುಷನು, ಮಹಾಪುರುಷನು, ಮಹೋರಗರಿಗೆ ಅತಿಕಾಯನು, ಮಹಾಕಾಯನು, ಗಂಧರ್ವರಿಗೆ-ಗೀತರತಿಯು, ಗೀತಯಶನು, ಯಕ್ಷರಿಗೆ-ಪೂರ್ಣಭದ್ರನು, ಮಾಣಿಭದ್ರನು, ರಾಕ್ಷಸರಿಗೆ-ಭೀಮನು, ಮಹಾಭೀಮನು. ಭೂತರಿಗೆ-ಸುರೂಪನು, ಪ್ರತಿರೂಪನು. ಪಿಶಾಚರಿಗೆ-

ಕಾಳನು, ಮಹಾಕಾಳನು. ಮೇಲೆಹೇಳಿದವರಲ್ಲಿ ಇಬ್ಬರಿಬ್ಬರು ಆ ಯಾಯನಿಕಾಯಕ್ಕೆ ಇಂದ್ರರುಗಳು ॥ ೬ ॥

ಅ ॥ ದೇಹದಿಂದ ಕಾಮಸೇವನೆಸುಖವುಳ್ಳ ದೇವತೆಗಳು ಇರುವಸ್ಥಳವನ್ನು ಹೇಳುತ್ತಾರೆ.

ಸೂ ॥ ಕಾಯಪ್ರವೀಚಾರಾ ಆಈಶಾನಾತ್ ॥ ೭ ॥

ಟೀ ॥ ಕಾಯಪ್ರವಿಚಾರಾಃ-ಶರೀರದಿಂದಕಾಮಸೇವನೆಯುಳ್ಳವರು, ಆ ಈಶಾನಾತ್-ಆ ಈಶಾನಸ್ವರ್ಗಪರ್ಯಂತರದಲ್ಲೂ ಇರುತ್ತೆ ॥

ತಾ ॥ ಭವನವಾಸಿಗಳು, ವ್ಯಂತರರು, ಜ್ಯೋತಿಷ್ಕರು, ಮತ್ತು ಕಲ್ಪವಾಸಿಗಳಲ್ಲಿ ಸೌಧರ್ಮ, ಈಶಾನಕಲ್ಪದವರು ಇವರುಗಳಿಗೆ ಸ್ತ್ರೀಸಂಬಂಧಸುಖವು ಮನುಷ್ಯನಡವಳಿಕೆಯಂತೆ ಇರುತ್ತೆ ॥ ೭ ॥

ಅ ॥ ಉಳಿದ ಕಲ್ಪಗಳವರ ಸುಖವಿಷಯವನ್ನು ಹೇಳುತ್ತಾರೆ.

ಸೂ ॥ ಶೇಷಾಃ ಸ್ಪರ್ಶರೂಪಶಬ್ದಮನಃಪ್ರವೀಚಾರಾಃ ॥ ೮ ॥

ಟೀ ॥ ಶೇಷಾಃ-ಉಳಿದಂಥಾದೇವತೆಗಳು, ಸ್ಪರ್ಶರೂಪಶಬ್ದಮನಃ ಪ್ರವೀಚಾರಾಃ-ಸ್ಪರ್ಶ-ಮುಟ್ಟೋಣವು, ರೂಪ-ಕಣ್ಣಿನಿಂದ ನೋಡತಕ್ಕರೂಪವು, ಶಬ್ದ-ಕಿವಿಯಿಂದಕೇಳತಕ್ಕಶಬ್ದವು, ಮನಃ-ಸ್ಮರಿಸತಕ್ಕ ಮನಸ್ಸು, ಇವುಗಳಿಂದ ಪ್ರವೀಚಾರಾಃ-ಸ್ತ್ರೀಕಾಮಸುಖವುಳ್ಳವರು ॥

ತಾ ॥ ಸನತ್ಕುಮಾರ, ಮಾಹೇಂದ್ರಕಲ್ಪದ ದೇವತೆಗಳು ದೇವತಾಸ್ತ್ರೀಯರುಗಳ ಶರೀರಸ್ಪರ್ಶನಮಾತ್ರದಿಂದ ಉಂಟಾದಂಥಾಸ್ತ್ರೀ ಸುಖವನುಳ್ಳವರು. ಸ್ತ್ರೀಯರೂಕೂಡ ಪುರುಷನದೇಹಸ್ಪರ್ಶನದಿಂದಲೆ ಉತ್ಕೃಷ್ಟಸುಖವುಳ್ಳವರು ॥ ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ- ಈ ೪ ಸ್ವರ್ಗದವರು ಶೃಂಗಾರಾಕಾರವಿಲಾಸ ಚತುರ ಮನೋಜ್ಞವೇಷಗಳುಳ್ಳಂಥಾ ರೂಪನ್ನು ಪರಸ್ಪರನೋಡುವದರಿಂದಲೇ ಉತ್ಕೃಷ್ಟಸುಖವುಳ್ಳವರು ॥ ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಈ ೪ ಸ್ವರ್ಗದವರು, ಮಧುರವಾದಗೀತ, ಮೃದುಹಸಿತವಾದ ಮಾತು,ಆಭರಣಧ್ವನಿ,ಇವುಗಳನ್ನುಪರಸ್ಪರಕೇಳುವಮಾತ್ರದಿಂದಲೆಸುಖವುಳ್ಳವರು ॥ ಆನತ, ಪ್ರಾಣತ, ಆರಣ, ಅಚ್ಯುತ, ಈ ೪ ಸ್ವರ್ಗ

ದವರು,ತಮ್ಮತಮ್ಮಮನಸ್ಸಿನಲ್ಲಿಪರಸ್ಪರ ಸ್ಮರಿಸುವಮಾತ್ರದಿಂದಲೇ ಸುಖವುಳ್ಳವರು ॥ ೮ ॥

ಅ ॥ ಅಹಮಿಂದ್ರರುಗಳಿಗೆ ಸ್ತ್ರೀಸಂಬಂಧವಿಲ್ಲವೆಂದು ಹೇಳುತ್ತಾರೆ.

ಸೂ ॥ ಪರೇ ಅಪ್ರವೀಚಾರಾಃ ॥ ೯ ॥

ಟೀ॥ ಪರೇ-ನವಗ್ರೈವೇಯಕಮುಂತಾದ್ದರಲ್ಲಿರುವಅಹಮಿಂದ್ರರುಗಳು, ಅಪ್ರವೀಚಾರಾಃ-ಕಾಮವೇದನೆಯು ಉದ್ರೇಕವಿಲ್ಲದೇಯಿರುವದ್ದರಿಂದ ಅಪ್ರವೀಚಾರರು ಅಂದರೆ ಮೈಥುನಸೇವಾರಹಿತರು ॥

ತಾ ॥ ೧೪ ಸ್ವರ್ಗದಮೇಲೆಯಿರುವ ನವಗ್ರೈಯಕ, ನವಾನುದಿಶ, ಪಂಚಾಣುತ್ತರೆ, ಈ ವಿಮಾನಗಳಲ್ಲಿಹುಟ್ಟುವರಿಗೆ ಸ್ತ್ರೀಸುಖವಿಲ್ಲ ॥ ೯ ॥

## ಭ ವ ನಾ ಧಿ ಕ ರ ಣ ಂ.

ಅ ॥ ಭವನವಾಸಿಗಳ ಹತ್ತುಭೇದಗಳನ್ನು ಹೇಳುತ್ತಾರೆ.

ಸೂ ॥ ಭವನವಾಸಿನೋಽಸುರನಾಗವಿದ್ಯುತ್ಸುಪರ್ಣಾಗ್ನಿವಾತಸ್ತನಿತೋದಧಿದ್ವೀಪದಿಕ್ಕುಮಾರಾಃ ॥ ೧೦ ॥

ಟೀ ॥ ಭವನವಾಸಿನಃ-ಭವನಲೋಕದಲ್ಲಿರುವಂಥಾ ದೇವತೆಗಳು, ಅಸುರನಾಗವಿದ್ಯುತ್ಸುಪರ್ಣಾಗ್ನಿವಾತಸ್ತನಿತೋದಧಿದ್ವೀಪದಿಕ್ಕುಮಾರಾಃ-ಅಸುರ-ಅಸುರಕುಮಾರರು, ನಾಗ-ನಾಗಕುಮಾರರು, ವಿದ್ಯುತ್-ವಿದ್ಯುತ್ಕುಮಾರರು, ಸುಪರ್ಣ-ಸುಪರ್ಣಕುಮಾರರು, ಅಗ್ನಿ-ಅಗ್ನಿಕುಮಾರರು, ವಾತ-ವಾತಕುಮಾರರು, ಸ್ತನಿತ-ಸ್ತನಿತಕುಮಾರರು, ಉದಧಿ-ಉದಧಿಕುಮಾರರು, ದ್ವೀಪ-ದ್ವೀಪಕುಮಾರರು, ದಿಕ್ಕುಮಾರಾಃ-ದಿಕ್ಕುಮಾರರು, (ಇಂತೆಂದುಭವನವಾಸಿಗಳುಹತ್ತುವಿಧಗಳಾಗಿರುತ್ತಾರೆ ॥

ತಾ ॥ ಆವಾಸಶೀಲರಾದ್ದರಿಂದ ಭವನವಾಸಿಗಳೆಂದು ಹೆಸರುಬಂದಿಥೆ- ವೇಷಭೂಷಣವಾಹನ ಕ್ರೀಡಾದಿಗಳಲ್ಲಿ ಕುಮಾರರೋಪಾದಿಯಲ್ಲಿ ಪ್ರಕಾಶಿಸುವದರಿಂದ ಕುಮಾರರೆಂಬ ಹೆಸರುಬಂದಿರುತ್ತೆ ॥ ೧೦ ॥

## ವ್ಯಂ ತ ರಾ ಧಿ ಕ ರ ಣ ಂ.

ಅ॥ ವ್ಯಂತರರು ಎಂಟುವಿಧವೆಂದು ಹೇಳುತ್ತಾರೆ.

ಸೂ ॥ ವ್ಯಂತರಾಃಕಿಂನರಕಿಂಪುರುಷಮಹೋರಗಗಂಧರ್ವಯಕ್ಷರಾಕ್ಷಸ ಭೂತಪಿಶಾಚಾಃ ॥ ೧೧ ॥

ಟೀ || ವ್ಯಂತರಾಃ-ವ್ಯಂತರದೇವತೆಗಳು, ಕಿಂನರಕಿಂಪುರುಷ ಮ ಹೋರಗಗಂಧರ್ವಯಕ್ಷರಾಕ್ಷಸ ಭೂತಪಿಶಾಚಾಃ- ಕಿಂನರ-ಕಿಂನರರು, ಕಿಂಪುರುಷ-ಕಿಂಪುರುಷರು, ಗಂಧರ್ವ-ಗಂಧರ್ವರು, ಯಕ್ಷ-ಯಕ್ಷರು, ರಾಕ್ಷಸ-ರಾಕ್ಷಸರು, ಭೂತ-ಭೂತರು, ಪಿಶಾಚಾಃ-ಪಿಶಾಚರು, ( ಎಂ ಬ ೮ ವಿಧ ದೇವತೆಗಳು, ) ವ್ಯಂತರಾಃ-ವ್ಯಂತರದೇವತೆಗಳು ||

ತಾ || ನಾನಾದೇಶಗಳಲ್ಲಿ ನಿವಾಸವಾಗಿರುವದ್ದರಿಂದ ವ್ಯಂತರರೆಂ ಬ ಹೆಸರುಬಂದಿಧೆ ||೧೧||

## ಜ್ಯೋತಿಷ್ಕಾಧಿಕರಣಂ.

ಅ || ಜ್ಯೋತಿಷ್ಕದೇವತೆಗಳ ಭೇದಗಳನ್ನು ಹೇಳುತ್ತಾರೆ.

ಸೂ || ಜ್ಯೋತಿಷ್ಕಾಃಸೂರ್ಯಾಚಂದ್ರಮಸೌಗ್ರಹನಕ್ಷ ತ್ರಪ್ರಕೀರ್ಣಕತಾರಕಾಶ್ಚ || ೧೨ ||

ಟೀ || ಸೂರ್ಯಾಚಂದ್ರಮಸೌ-ಸೂರ್ಯನೂ ಚಂದ್ರನೂ, ಗ್ರಹ ನಕ್ಷತ್ರಪ್ರಕೀರ್ಣಕತಾರಕಾಶ್ಚ-ಗ್ರಹ- ೮೮ ಗ್ರಹಗಳು, ನಕ್ಷತ್ರ-೨೭ ನಕ್ಷತ್ರಗಳು, ಪ್ರಕೀರ್ಣಕತಾರಕಾಶ್ಚ-ಪ್ರಕೀರ್ಣಕತಾರಕೆಗಳು, ಇಂ ತೆಂದು. ಜ್ಯೋತಿಷ್ಕಾಃ-ಜ್ಯೋತಿಷ್ಕದೇವತೆಗಳು ( ಐದುವಿಧಗಳು ) ||

ತಾ || ಜ್ಯೋತಿಯೇ ಸ್ವಭಾವವಾಗಿ ಉಳ್ಳವರಾದ್ದರಿಂದ ಜ್ಯೋ ತಿಷ್ಕರೆಂಬ ಹೆಸರುಬಂದಿದೆ. ಈ ಜ್ಯೋತಿಷ್ಕರುಗಳ ಆ ವಾಸಗಳು ಈ ಚಿತ್ರಾಭೂಮಿಯಿಂದ ೭೯೦ ಯೋಜನದಮೇಲೆ ಪ್ರಕೀರ್ಣಕತಾರಕೆಗ ಳು ಇರುತ್ತವೆ. ೮೦೦ ಯೋಜನದಲ್ಲಿ ಸೂರ್ಯರುಗಳು ಇರುತ್ತಾ ರೆ. ೮೮೦ ಯೋಜನದಲ್ಲಿಚಂದ್ರರುಗಳು ಇರುತ್ತಾರೆ. ೮೮೪ಯೋಜ ನದಲ್ಲಿ ನಕ್ಷತ್ರಗಳು ಇರುತ್ತವೆ. ೮೮೮ ಯೋಜನದಲ್ಲಿ ಬುಧರುಗಳುಇ ರುತ್ತಾರೆ. ೮೯೧ ಯೋಜನದಲ್ಲಿ ಶುಕ್ರರುಯಿರುತ್ತಾರೆ. ೮೯೪ ಯೋ ಜನದಲ್ಲಿ ಬೃಹಸ್ಪತಿಗಳುಇರುತ್ತಾರೆ. ೮೯೭ ಯೋಜನದಲ್ಲಿ ಅಂಗಾರಕರು ಗಳು ಇರುತ್ತಾರೆ. ೯೦೦ ಯೋಜನದಲ್ಲಿ ಶನೈಶ್ಚರರುಯಿರುತ್ತಾರೆ. ಪ್ರತಿಬಬ್ಬ ಜ್ಯೋತಿಷ್ಕರುಗಳೂಕೂಡವಿಮಾನಗಳಲ್ಲಿ ಸಂಚರಿಸುತಾರೆ. ಜ್ಯೋತಿಲ್ಲೋಕವು೧೧೦ಯೋಜನದಷ್ಟವು.ಅಗಲದಲ್ಲಿಅಸಂಖ್ಯಾತದ್ವೀ ಪಸಮುದ್ರಗಳಕಡೇವರಿವಿಗೂಇರುತ್ತದೆ.ಪ್ರತಿಪ್ರೊಬ್ಬರ ವಿಮಾನ ನಿಂಬೇ

ಹಂಚಿನ ಅರ್ಧಗೋಳಿನ ಆಕಾರವಾಗಿರುತ್ತವೆ ॥ ೧೨ ॥

ಅ ॥ ಜ್ಯೋತಿಷ್ಕರು ಸುತ್ತುವಪ್ರದೇಶವನ್ನು ಹೇಳುತ್ತಾರೆ.

ಸೂ ॥ ಮೇರುಪ್ರದಕ್ಷಿಣಾನಿತ್ಯಗತಯೋ ನೃಲೋಕೇ ॥ ೧೩ ॥

ಟೀ ॥ ನೃಲೋಕೇ-ಮನುಷ್ಯಕ್ಷೇತ್ರದಲ್ಲಿ, ಮೇರುಪ್ರದಕ್ಷಿಣಾಃ-ಮೇರುಪರ್ವತವನ್ನು ಪ್ರದಕ್ಷಿಣವುಳ್ಳಂಥಾವರಾಗಿಯೂ, ನಿತ್ಯಗತಯಃ-ಶಾಶ್ವತವಾದ ಗಮನವುಳ್ಳಂಥಾವರುಗಳಾಗಿಯೂ(ಇರುತ್ತಾರೆ) ॥

ತಾ ॥ ಈ ೫ ವಿಧಜ್ಯೋತಿಷ್ಕದೇವತೆಗಳು ಜಂಬೂದ್ವೀಪ, ಲವಣಸಮುದ್ರ, ಧಾತಕೀಷಂಡದ್ವೀಪ, ಕಾಳೋದಕಸಮುದ್ರ, ಪುಷ್ಕರಾರ್ಧದ್ವೀಪವೆಂಬ ಎರಡುವರೆದ್ವೀಪದಲ್ಲಿ ಮೇರುಪರ್ವತಗಳನ್ನು ೧೧೨೧ ಯೋಜನಗಳನ್ನು ಬಿಟ್ಟು ಪ್ರದಕ್ಷಿಣವಾಗಿ ಸಂಚಾರಮಾಡುತ್ತಿಧಾರೆ ॥ ಜಂಬೂದ್ವೀಪದಲ್ಲಿಇಬ್ಬರಿಬ್ಬರುಸೂರ್ಯ್ಯಚಂದ್ರರು,ಲವಣಸಮುದ್ರದಲ್ಲಿ ನಾಲ್ಕು ಸೂರ್ಯಚಂದ್ರರು. ಧಾತಕೀಷಂಡದ್ವೀಪದಲ್ಲಿ ಹನ್ನೆರಡು ಸೂರ್ಯಚಂದ್ರರು. ಕಾಳೋದಕಸಮುದ್ರದಲ್ಲಿ ನಾಲ್ವತ್ತೆರಡು ಸೂರ್ಯಚಂದ್ರರು ಪುಷ್ಕರಾರ್ಧದ್ವೀಪದಲ್ಲಿ ಎಪ್ಪತ್ತೆರಡುಸೂರ್ಯಚಂದ್ರರು, ಅಂತುಎರಡುವರೆ ದ್ವೀಪದಲ್ಲಿ ೧೩೨ ಸೂರ್ಯ್ಯಚಂದ್ರರು ಸಂಚರಿಸುತ್ತಾರೆ ॥ ೧೩ ॥

ಅ ॥ ವ್ಯವಹಾರಕಾಲಸ್ವರೂಪವನ್ನು ಹೇಳುತ್ತಾರೆ.

ಸೂ ॥ ತತ್ಕೃತಃ ಕಾಲವಿಭಾಗಃ ॥ ೧೪ ॥

ಟೀ ॥ ಕಾಲವಿಭಾಗಃ-ಮುಹೂರ್ತಾದಿಕಾಲವಿಭಾಗವು, ತತ್ಕೃತಃ-ತತಃ-ಆ ಜ್ಯೋತಿಷ್ಕರಗಮನದಿಂದ, ಕೃತಃ-ಮಾಡಲ್ಪಟ್ಟಂತಾದ್ದು ॥

ತಾ ॥ ಕಾಲವು ವ್ಯವಹಾರಕಾಲವೆಂತಲೂ, ನಿಶ್ಚಯಕಾಲವೆಂತಲೂ ಎರಡುಭೇದವು. ಸರ್ವದಾಸಂಚರಿಸುವ ಜ್ಯೋತಿಷ್ಕದೇವತೆಗಳಿಂದ ವ್ಯವಹಾರಕಾಲವುಗೊತ್ತಾಗುತ್ತೆ. ಅದುಯಾವದೆಂದರೆ ಸಮಯ, ಆವಳಿ, ಮುಹೂರ್ತ,ದಿನ,ಮಾಸ,ವರ್ಷವೊದಲಾದದ್ದು ॥ ೧೪ ॥

ಅ ॥ ಮನುಷ್ಯಲೋಕದ ಹೊರಗೆಇರುವ ಜ್ಯೋತಿಷ್ಕರ ಸ್ಥಿತಿಯನ್ನು ಹೇಳುತ್ತಾರೆ.

ಸೂ ॥ ಬಹಿರವಸ್ಥಿತಾಃ ॥ ೧೫ ॥

ಟೀ ॥ ಬಹಿಃ-ಮನುಷ್ಯಕ್ಷೇತ್ರದಿಂದಹೊರಗೆ, ಅವಸ್ಥಿತಾಃ-ಒಂದೇಸ್ಥಳದಲ್ಲಿ ಯಿರುವಂಥಾವರುಗಳು ॥

ತಾ ॥ ಎರಡುವರೆ ದ್ವೀಪದಿಂದಹೊರಗೆ ಇರುವ ಜ್ಯೋತಿಷ್ಕದೇವತೆಗಳು ಸಂಚಾರವಿಲ್ಲದೇ ಒಂದೇಸ್ಥಳದಲ್ಲಿ ಇದ್ದು ಪ್ರಕಾಶಿಸುತ್ತಾರೆ ॥

ವೈ ಮಾ ನಿ ಕಾ ಧಿ ಕ ರ ಣ ೦.

ಅ ॥ ನಾಲ್ಕನೇವಿಧದ ದೇವರ್ಕಳ ಸಂಜ್ಞೆಯನ್ನುಹೇಳುತ್ತಾರೆ.

ಸೂ ॥ ವೈಮಾನಿಕಾಃ ॥ ೧೬ ॥

ಟೀ ॥ ವೈಮಾನಿಕಾಃ-ವೈಮಾನಿಕ ದೇವತೆಗಳು ॥

ತಾ ॥ ಇದು ಅಧಿಕಾರಸೂತ್ರ ಅಂದರೆ ಇಲ್ಲಿಂದಮುಂದೆ ವಿಮಾನದಲ್ಲಿರುವ ದೇವತೆಗಳವಿಷಯವು ಹೇಳಲ್ಪಡುತ್ತದೆ. ತಂಮಲ್ಲಿರುವಂಥಾದೇವತೆಗಳನ್ನು ಪೂಜಿಸುವಂಥಾವುಗಳುಯಾವದೊ ಅದೇವಿಮಾನವೆಂಬುವದು ಅಥವಾ ಯಾನದರಲ್ಲಿರುವದ್ದರಿಂದ ವಿಶೇಷಪುಣ್ಯವಂತನೆಂದು ತಿಳಿಯುತ್ತಾರೋ ಅದೇವಿಮಾನವೆಂದಾದರು ತಿಳಿಯುವದು ॥ ಅಂಥಾವಿಮಾನದಲ್ಲಿರುವವರಿಗೆ ವೈಮಾನಿಕರೆಂದು ಹೆಸರು ॥ ಆ ವಿಮಾನಗಳು ಇಂದ್ರಕ, ಶ್ರೇಢೀಬದ್ಧ, ಪುಷ್ಪಪ್ರಕೀರ್ಣಕವೆಂದು ಮೂರುವಿಧವು ಪ್ರತಿವೊಂದೂಸಂಖ್ಯಾತಅಥವಾಅಸಂಖ್ಯಾತಯೋಜನಪ್ರಮಾಣ ವಿರುತ್ತವೆ॥

ಅ ॥ ವೈಮಾನಿಕ ದೇವತೆಗಳ ಭೇದಗಳನ್ನು ಹೇಳುತ್ತಾರೆ.

ಸೂ ॥ ಕಲ್ಪೋಪಪನ್ನಾಃ ಕಲ್ಪಾತೀತಾಶ್ಚ ॥ ೧೭ ॥

ಟೀ ॥ ಕಲ್ಪೋಪಪನ್ನಾಃ-ಸೌಧರ್ಮಾದಿಕಲ್ಪಗಳಲ್ಲಿ ಹುಟ್ಟಿದಂಥಾವರುಗಳು, ಕಲ್ಪಾತೀತಾಶ್ಚ-ನವಗ್ರೈವೇಯಕಾದಿಗಳಲ್ಲಿ ಹುಟ್ಟಿದಂಥಾವರುಗಳೂಕೂಡ ( ವೈಮಾನಿಕ ದೇವರ್ಕಳು ) ॥

ತಾ ॥ ಸೌಧರ್ಮವೊದಲಾದ ೧೬ ಸರ್ಗದಲ್ಲಿ ಇಂದ್ರಾದಿ ಹತ್ತುವಿಧದೇವತಾಕಲ್ಪನೆಗಳು ಇರುವದ್ದರಿಂದ ಈ ಸ್ಥಳವಾಸಿಗಳಿಗೆ ಕಲ್ಪೋಪಪನ್ನರೆಂತಲೂ. ನವಗ್ರೈವೇಯಕಾದಿಗಳಲ್ಲಿ ಈ ಇಂದ್ರಾದಿ ಕಲ್ಪನೆಯು ಇಲ್ಲದ್ದರಿಂದ ಅವರಿಗೆ ಕಲ್ಪಾತೀತರೆಂತಲೂ ಹೆಸರು ಬಂದಿರುತ್ತದೆ ॥ ೧೭ ॥

ಅ || ವೈಮಾನಿಕ ದೇವತೆಗಳಿರುವ ಕ್ರಮವನ್ನು ಹೇಳುತ್ತಾರೆ.

ಸೂ || ಉಪರ್ಯುಪರಿ || ೧೮ ||

ಟೀ || ಉಪರ್ಯುಪರಿ-ಮೇಲೆಮೇಲೆ ( ಯಿಧಾರೆ ) ||

ತಾ || ಎರಡುಸಾಲಾಗಿ ಸ್ವರ್ಗಗಳು ಇರುತ್ತವೆ.ಅದರಮೇಲೆ ನವಗ್ರೈವೇಯಕ, ನವಾಣುತ್ತರೆ ಅನಂತರಪಂಚಾಣುತ್ತರೆ ಈ ರೀತಿ ವ್ಹೊಂದರಮೇಲೆವ್ಹೊಂದು ಇರುತ್ತವೆ || ೧೮ ||

ಅ || ಆ ವೈಮಾನಿಕರಿರುವ ಸ್ಥಳಗಳ ಹೆಸರುಗಳನ್ನು ಹೇಳುತ್ತಾರೆ.

ಸೂ || ಸೌಧರ್ಮೈಶಾನಸನತ್ಕುಮಾರ ಮಾಹೇಂದ್ರಬ್ರ ಹ್ಮ ಬ್ರಹ್ಮೋತ್ತರಲಾಂತವ ಕಾಪಿಷ್ಠ ಶುಕ್ರಮಹಾಶುಕ್ರ ಶತಾರಸಹಸ್ರಾರೇಷ್ವಾನತ ಪ್ರಾಣತಯೋಃ ರಾರಣಾಚ್ಯು ತಯೋರ್ನವಸುಗ್ರೈವೇಯಕೇಷ್ವನುದಿಶೇಷು ವಿಜಯ ವೈಜಯಂತ ಜಯಂತಾಪರಾಜಿತೇಷುಸರ್ವಾರ್ಥಸಿ ದ್ಧೌ ಚ || ೧೯ ||

ಟೀ || ಸೌಧರ್ಮೈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮಬ್ರ ಹ್ಮೋತ್ತರ ಲಾಂತವಕಾಪಿಷ್ಠಶುಕ್ರಮಹಾಶುಕ್ರ ಶತಾರಸಹಸ್ರಾರೇ ಷು-ಸೌಧರ್ಮೈಶಾನ-ಸೌಧರ್ಮಕಲ್ಪ, ಈಶಾನಕಲ್ಪಗಳೆರಡು, ಸನ ತ್ಕುಮಾರ ಮಾಹೇಂದ್ರ-ಸನತ್ಕುಮಾರಕಲ್ಪ, ಮಾಹೇಂದ್ರಕಲ್ಪಗಳೆರ ಡು, ಬ್ರಹ್ಮಬ್ರಹ್ಮೋತ್ತರ-ಬ್ರಹ್ಮಕಲ್ಪ, ಬ್ರಹ್ಮೋತ್ತರಕಲ್ಪಗಳೆರ ಡು, ಲಾಂತವಕಾಪಿಷ್ಠ-ಲಾಂತವಕಲ್ಪ, ಕಾಪಿಷ್ಠಕಲ್ಪಗಳೆರಡು, ಶು ಕ್ರಮಹಾಶುಕ್ರ-ಶುಕ್ರಕಲ್ಪ- ಮಹಾಶುಕ್ರಕಲ್ಪಗಳೆರಡು, ಶತಾರಸಹ ಸ್ರಾರೇಷು-ಶತಾರಕಲ್ಪ, ಸಹಸ್ರಾರಕಲ್ಪಗಳೆಂಬ ಎರಡು, ಈ ಆರುಯು ಗಳಗಳಕಲ್ಪಗಳಲ್ಲಿಯೂ,ಆನತಪ್ರಾಣತಯೋಃ-ಏಳನೇಯುಗಳಗಳಾದ ಆ ನತಕಲ್ಪ-ಪ್ರಾಣತಕಲ್ಪಗಳಲ್ಲಿಯೂ, ಆರಣಾಚ್ಯುತಯೋಃ-ಎಂಟನೇ ಯುಗಳಗಳಾದ, ಆರಣಕಲ್ಪ-ಅಚ್ಯುತಕಲ್ಪಗಳಲ್ಲಿಯೂ, ನವಗ್ರೈವೇ ಯಕೇಷು-ನವಗ್ರೈವೇಯಕಗಳಲ್ಲಿಯೂ, ಅನುದಿಶೇಷು-ನವಾಣುದ್ದಿಶೆ ಗಳಲ್ಲಿಯೂ, ವಿಜಯವೈಜಯಂತ ಜಯಂತಅಪರಾಜಿತೇಷು- ವಿಜಯ- ವಿಜಯದಲ್ಲಿಯೂ, ವೈಜಯಂತ-ವೈಜಯಂತದಲ್ಲಿಯೂ, ಜಯಂತ-ಜ

ಯಂತದಲ್ಲಿಯೂ, ಅಪರಾಜಿತೇಷು-ಅಪರಾಜಿತದಲ್ಲಿಯೂ, ಸರ್ವಾರ್ಥಸಿದ್ಧೌಚ-ಸರ್ವಾರ್ಥಸಿದ್ಧಿಯಲ್ಲಿಯೂಕೂಡ, ॥

ತಾ ॥ ಹಿಂದೆಹೇಳಿದ ಎಂಟುಯುಗಳಕಲ್ಪಗಳಲ್ಲಿ ಅಂದರೆ ೧೬ ಸ್ವರ್ಗಗಳಲ್ಲಿ ಕಲ್ಪೋಪಪನ್ನರುಇರುತ್ತಾರೆ. ಅನಂತರ ಇರುವನವಗ್ರೈವೇಯಕ,ನವಾನುದಿಶೆ, ವಿಜಯಾದಿಅಣುತ್ತರೆ. ಸರ್ವಾರ್ಥಸಿದ್ಧಿ, ಇವುಗಳಲ್ಲಿ ಕಲ್ಪಾತೀತರುಇರುತ್ತಾರೆ ॥ ಜಂಬೂದ್ವೀಪದಮಧ್ಯದಲ್ಲಿ ಮೇರುಪರ್ವತವಿರುತ್ತೆ, ಮೇರುವಿನಕೆಳಭಾಗದಲ್ಲಿರುವದು ಅಧೋಲೋಕವು ಮೇರುವಿನಮೇಲಾಭಗದಲ್ಲಿರುವದು ಊರ್ಧ್ವಲೋಕವು. ಹಿಂದೆಹೇಳಿದ ಸೌಧರ್ಮಾದಿಕಲ್ಪಗಳು ಊರ್ಧ್ವಲೋಕದಲ್ಲಿರುತ್ತವೆ ॥ ೧೯ ॥

ಅ ॥ ವೈಮಾನಿಕರಿಗೆ ಪರಸ್ಪರಇರುವ ವಿಶೇಷವನ್ನು ಹೇಳುತಾರೆ.

ಸೂ ॥ ಸ್ಥಿತಿಪ್ರಭಾವ ಸುಖದ್ಯುತಿಲೇಶ್ಯಾ ವಿಶುದ್ಧೀಂದ್ರಿಯಾವಧಿವಿಷಯತೋಧಿಕಾಃ ॥ ೨೦ ॥

ಟೀ ॥ಸ್ಥಿತಿಪ್ರಭಾವಸುಖದ್ಯುತಿಲೇಶ್ಯಾವಿಶುದ್ಧೀಂದ್ರಿಯಾವಧಿವಿಷಯತಃ-ಸ್ಥಿತಿ ಆಯುಷ್ಯಸ್ಥಿತಿಯು, ಪ್ರಭಾವ-ಶಾಪಾನುಗ್ರಹಶಕ್ತಿರೂಪ ಪ್ರಭಾವವು, ಸುಖ-ಇಂದ್ರಿಯಾರ್ಥಾನುಭವರೂಪಸುಖವು, ದ್ಯುತಿ-ಶರೀರವಸ್ತ್ರ ಆಭರಣವೊದಲಾದ ವಸ್ತುಗಳ ತೇಜಸ್ಸು, ಲೇಶ್ಯಾವಿಶುದ್ಧಿ-ಪೀತಪದ್ಮ ಶುಕ್ಲ ಲೇಶ್ಯಗಳಿಂದ ಮನಃಪರಿಣಾಮದ ಪ್ರಸನ್ನತೆಯು, ಇಂದ್ರಿಯಾವಧಿವಿಷಯತಃ- ಇಂದ್ರಿಯ-ಪಂಚೇಂದ್ರಿಯಗಳ, ಅವಧಿ-ಅವಧಿಜ್ಞಾನದ, ವಿಷಯತಃ-ವಿಷಯಕ್ಷೇತ್ರವು ಇವುಗಳದೆಶೆಯಿಂದ, ಅಧಿಕಾಃ-ಹೆಚ್ಚಾದಂಥಾವರುಗಳು ॥

ತಾ ॥ ಆಯುಷ್ಯ, ಪ್ರಭಾವ, ಸುಖ, ತೇಜಸ್ಸು, ಶುಭಪರಿಣಾಮ, ಅವಧಿಜ್ಞಾನ ಇವ್ವುಗಳೆಲ್ಲಾ ಮೇಲೆಮೇಲೆ ಇರುವರಿಗೆ ಹೆಚ್ಚುತ್ತಾ ಹೋಗುತ್ತೆ. ಹ್ಯಾಗೆಂದರೆ ? ಸೌಧರ್ಮಈಶಾನಕಲ್ಪದವರು ತಮ್ಮ ತಮ್ಮ ಧ್ವಜದಂಡವೊದಲಾಗಿ ರತ್ನಪ್ರಭೆಯೆಂಬುವ ಪ್ರಥಮನರಕದ ಅಧೋಭಾಗಪರ್ಯಂತರವುಅವಧಿಜ್ಞಾನದಿಂದತಿಳಿಯುತ್ತಿದಾರೆ,ಈಮೇರೆ ಮೇಲೆಮೇಲೆಇರತಕ್ಕವರಿಗೆಜಾಸ್ತಿಯಾಗುತ್ತಾಎಲ್ಲಕ್ಕೆಮೇಲೆಯಿರುವಪಂಚಾಣುತ್ತರೆವಿಮಾನದವರುಗಳರಜ್ಜುಉನ್ನತಿರಜ್ಜುಅಗಲದತ್ರಸನಾಳಿಯು

ವರಿವಿಗೂತಿಳಿಯಬೇಕು.ತ್ತಾರೆ.ಇದೇಮೇರೆಮೇಲೆಮೇಲೆ ಇರುವವರು ಹೆಚ್ಚುಹೆ ಚ್ಚಾಗಿ ತಿಯುತ್ತಾರೆ || ೨೦ ||

ಅ || ಗತಿ ಶರೀರಾದಿಗಳಲ್ಲಿ ಕಮ್ಮಿಯಾಗಿರುವದನ್ನು ಹೇಳುತ್ತಾರೆ.

ಸೂ || ಗತಿಶರೀರಪರಿಗ್ರಹಾಭಿಮಾನತೋ ಹೀನಾಃ || ೨೧ ||

ಟೀ || ಗತಿಶರೀರಪರಿಗ್ರಹಾಭಿಮಾನತಃ-ಗತಿ-ದೇಶಾಂತರಗಮನವು, ಶರೀರ_ವೈಕ್ರಿಯಕಮುಕ್ತ ಶರೀರೋತ್ಸೇಧವು, ಪರಿಗ್ರಹ-ಲೋಭಕ ಷಾಯೋದಯೋತ್ಪಂನವಿಷಯಲಂಪಟವು, ಅಭಿಮಾನತಃ-ಮಾನಕಷಾ ಯೋದಯೋತ್ಪನ್ನ ಅಹಂಕಾರವು ಇವುಗಳದೆಶೆಯಿಂದ, ಹೀನಾಃ-ಕಡಮೆ ಯಾಪಂಥಾವರುಗಳು ।

ತಾ || ಸೌಧರ್ಮ ಈಶಾನಕಲ್ಪದವರು ೭ ಮೊಳ ಉತ್ಸೇಧವು, ಮೇಲೆಮೇಲೆ ಕಮ್ಮಿಯಾಗುತ್ತಾಬಂದು ಯೆಲ್ಲಾದಕ್ಕೂ ಮೇಲಿರುವ ಪಂಚಾಣುತ್ತರೆಯಲ್ಲಿ ಒಂದುಮೊಳ ಉತ್ಸೇಧವು,ಈಮೇರೆ ಲೋಭಾದಿಗ ಳೂಕೂಡ ಕಮ್ಮಿಯಾಗಿರುತ್ತವೆ || ೨೧ ||

ಅ || ವೈಮಾನಿಕರಿಗೆ ಲೇಶ್ಯಗಳನ್ನು ಹೇಳುತ್ತಾರೆ.

ಸೂ || ಪೀತಪದ್ಮಶುಕ್ಲಲೇಶ್ಯಾದ್ವಿತ್ರಿಶೇಷೇಷು || ೨೨ ||

ಟೀ || ದ್ವಿತ್ರಿಶೇಷೇಷು-ದ್ವಿ-ಎರಡು ಯುಗಳಗಳಲ್ಲಿಯೂ, ತ್ರಿ-ಮೂ ರುಯುಗಳಗಳಲ್ಲಿಯೂ, ಶೇಷೇಷು-ಉಳಿದಕಲ್ಪಗಳಲ್ಲಿಯೂ, ಅಹಮಿಂ ದ್ರರುಗಳಲ್ಲಿಯೂ, ಪೀತಪದ್ಮಶುಕ್ಲಲೇಶ್ಯಾಃ-ಪೀತ-ಪೀತಲೇಶ್ಯವೂ, ಪ ದ್ಮ-ಪದ್ಮಲೇಶ್ಯವೂ, ಶುಕ್ಲಲೇಶ್ಯಾಃ-ಶುಕ್ಲಲೇಶ್ಯವೂ ಇವುಗಳು ಕ್ರಮ ವಾಗಿ ಆಗುತ್ತಿವೆ ||

ತಾ || ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ ಈ ೪ ಸ್ವರ್ಗದವರಿಗೆ ಪೀತಲೇಶ್ಯವು ( ತೇಜೋಲೇಶ್ಯವು ) ಸನತ್ಕು ಮಾರಮಾಹೇಂದ್ರಕಲ್ಪದವರಿಗೆ ಜಘನ್ಯದಿಂದ ಪದ್ಮಲೇಶ್ಯವೂಯಿರುತ್ತೆ|| ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶು ಕ್ರ, ಈ ೬ ಸ್ವರ್ಗದವರಿಗೆ ಪದ್ಮಲೇಶ್ಯವು, ಆನತ, ಪ್ರಾಣತ, ಆರ ಣ,ಅಚ್ಯುತ,ನವಗ್ರೈವೇಯಕ, ನವಾನುದಿಶೆ, ಪಂಚಾಣುತ್ತರೆಗಳಲ್ಲಿರು ವರಿಗೆ ಶುಕ್ಲಲೇಶ್ಯವು, ಇರುತ್ತೆ, ನವಾನುದಿಶೆ, ಪಂಚಾಣುತ್ತರೆಗಳಲ್ಲಿ ಮಾತ್ರ ಉತ್ಕೃಷ್ಟಶುಕ್ಲಲೇಶ್ಯವಿರುತ್ತೆ || ೨೨ ||

[F]

ಅ || ಕಲ್ಪಗಳನ್ನು ಹೇಳುತ್ತಾರೆ.

ಸೂ || ಪ್ರಾಗ್ಗ್ರೈವೇಯಕೇಭ್ಯಃ ಕಲ್ಪಾಃ || ೨೩ ||

ಟೀ || ಗ್ರೈವೇಯಕೇಭ್ಯಃ-ನವಗ್ರೈವೇಯಕಗಳ ದೆಶೆಯಿಂದ, ಪ್ರಾಕ್-ಪೂರ್ವದಲ್ಲಿ, ಕಲ್ಪಾಃ-ಸೌಧರ್ಮಾದಿಕಲ್ಪಗಳು ||

ತಾ || ನವಗ್ರೈವೇಯಕಕ್ಕೆ ಕೆಳಗೆ ೧೬ ಸ್ವರ್ಗಗಳಿವೆ || ೨೩ ||

ಅ || ಲೌಕಾಂತಿಕದೇವರುಗಳು ಇರುವಸ್ಥಳವನ್ನು ಹೇಳುತ್ತಾರೆ.

ಸೂ || ಬ್ರಹ್ಮಲೋಕಾಲಯಾಲೌಕಾಂತಿಕಾಃ || ೨೪ ||

ಟೀ || ಲೌಕಾಂತಿಕಾಃ-ಲೌಕಾಂತಿಕದೇವತೆಗಳು, ಬ್ರಹ್ಮಲೋಕಾಲಯಾಃ-ಬ್ರಹ್ಮಲೋಕ-ಬ್ರಹ್ಮಲೋಕದಲ್ಲಿ, ಆಲಯಾಃ-ಮನೆಯುಳ್ಳಂಥಾವರುಗಳು ||

ತಾ || ಜನ್ಮಜರಾಮರಣಗಳಿಂದ ವ್ಯಾಪ್ತವಾದಂಥಾದ್ದು ಲೋಕವೆಂಬುವದು || ಲೋಕವೆಂದರೆ ಸಂಸಾರಿಕೆಯು || ಸಂಸಾರದ ಅಂತ್ಯದಲ್ಲಿ ಇರುವಂಥಾವರಾದ ಪ್ರಯುಕ್ತವಾಗಿ ಲೌಕಾಂತಿಕರು ಎಂದು ತಿಳಿಯುವದು || ಹ್ಯಾಗೆಂದರೆ ಇವರು ಸ್ವರ್ಗದಿಂದಬಂದು ಮನುಷ್ಯರಾಗಿಹುಟ್ಟಿ ಅದೇಜನ್ಮದಲ್ಲಿ ಮೋಕ್ಷಕ್ಕೆಹೋಗುತ್ತಾರೆ || ಮತ್ತು ಇವರು ಬ್ರಹ್ಮಚಾರಿಗಳು, ತೀರ್ಥಂಕರಪರಮದೇವರುಗಳಿಗೆ ವೈರಾಗ್ಯಹುಟ್ಟಿದಕಾಲದಲ್ಲಿ ಮಾತ್ರಬಂದು ಬೋಧಿಸುವರು || ೨೪ ||

ಅ || ಲೌಕಾಂತಿಕ ದೇವರ್ಕಳ ಭೇದವನ್ನು ಹೇಳುತ್ತಾರೆ.

ಸೂ || ಸಾರಸ್ವತಾದಿತ್ಯವಹ್ನ್ಯರುಣಗರ್ದತೋಯತುಷಿ ತಾವ್ಯಾಬಾಧಾರಿಷ್ಟಾಶ್ಚ || ೨೫ ||

ಟೀ || ಸಾರಸ್ವತಾದಿತ್ಯವಹ್ನ್ಯರುಣಗರ್ದತೋಯತುಷಿತಾವ್ಯಾಬಾಧಾರಿಷ್ಟಾಶ್ಚ-ಸಾರಸ್ವತ-ಸಾರಸ್ವತರು, ಆದಿತ್ಯ-ಆದಿತ್ಯರು, ವಹ್ನಿ-ವಹ್ನಿಗಳು, ಅರುಣ-ಅರುಣರು, ಗರ್ದತೋಯ-ಗರ್ದತೋಯರು, ತುಷಿತ-ತುಷಿತರು, ಅವ್ಯಾಬಾಧ-ಅವ್ಯಾಬಾಧರು, ಅರಿಷ್ಟಾಶ್ಚ-ಅರಿಷ್ಟರು ಇಂತೆಂದು ಲೌಕಾಂತಿಕದೇವತೆಗಳು ಎಂಟುಪ್ರಕಾರವು ||

ತಾ || ಇವರು ದೇವಋಷಿಗಳು. ಇವರುಗಳುಹ್ಯಾಗೆ ಮುಂದಲ ಭವದಲ್ಲೇ ಮೋಕ್ಷವನ್ನು ಹೊಂದುತ್ತಾರೊ ಅದರಂತೆ ಸೌಧರ್ಮೇಂ

ದ್ರಮೊದಲಾದ ದಕ್ಷಿಣಾಮರೇಂದ್ರರು ಶಚೀದೇವಿಮೊದಲಾದವರೂಗ ಳೂ ಮುಂದಲಭವದಲ್ಲೇ ಮೋಕ್ಷಕ್ಕೆಹೋಗುತ್ತಾರೆ ॥ ೨೫ ॥

ಅ ॥ ಎರಡನೇ ಭವದಲ್ಲೇ ಮೋಕ್ಷಕ್ಕೆಹೋಗುವ ವೈಮಾನಿಕರನ್ನು ಹೇಳುತ್ತಾರೆ.

ಸೂ ॥ ವಿಜಯಾದಿಷುದ್ವಿಚರಮಾಃ ॥ ೨೬ ॥

ಟೀ ॥ ವಿಜಯಾದಿಷು-ವಿಜಯ, ವೈಜಯಂತ, ಜಯಂತ, ಅಪರಾ ಜಿತಗಳಲ್ಲಿ,ದ್ವಿಚರಮಾಃ-ಎರಡನೇಭವಕ್ಕೆ ಮುಕ್ತಿಯನ್ನು ಹೊಂದುತ್ತಾರೆ॥

ತಾ ॥ ಸರ್ವಾರ್ಥಸಿದ್ಧಿಯಲ್ಲಿಹುಟ್ಟಿದವರಿಗೆ ಮುಂದಲಭವಕ್ಕೆ ಮೋಕ್ಷವು ॥ ಆದಿಶಬ್ದದಿಂದ, ವಿಜಯಾದಿಗಳಲ್ಲಿಮತ್ತು ನವಾನುದಿಶೆಗ ಳಲ್ಲಿ ಹುಟ್ಟಿಸವರುಗಳು ಎರಡಾವರ್ತಿ ಮನುಷ್ಯಜನ್ಮವನ್ನು ಪಡೆದು ಮೋಕ್ಷಕ್ಕೆ ಹೋಗೇಹೋಗುತ್ತಾರೆ ॥ ೨೬ ॥

ತಿ ರ್ಯ ಗ್ಜೀ ವಾ ಧಿ ಕ ರ ಣ ಂ.

ಅ ॥ ತಿರ್ಯಗ್ಜೀವಗಳು ಯಾವವೆಂದರೆ ಅವನ್ನು ಹೇಳುತ್ತಾರೆ.

ಸೂ ॥ ಔಪಪಾದಿಕಮನುಷ್ಯೇಭ್ಯಃ ಶೇಷಾಸ್ತಿರ್ಯ ಗ್ಯೋನಯಃ ॥ ೨೭ ॥

ಟೀ ॥ ಔಪಪಾದಿಕಮನುಷ್ಯೇಭ್ಯಃ-ಔಪಪಾದಿಕ-ಉಪಪಾದಿಕದಲ್ಲಿ ಹುಟ್ಟತಕ್ಕ ದೇವನಾರಕರುಗಳು, ಮನುಷ್ಯೇಭ್ಯಃ-ಮನುಷ್ಯರುಗಳು ಇವರುಗಳದೆಶೆಯಿಂದ, ಶೇಷಾಃ-ಉಳಿದಂಥಾ ಸಂಸಾರಿಜೀವಿಗಳು, ತಿ ರ್ಯಗ್ಯೋನಯಃ-ತಿರ್ಯಗ್ಯೋನಿಯಲ್ಲಿಹುಟ್ಟುವಂಥಾವುಗಳು ॥

ತಾ ॥ ದೇವತೆಗಳು ನಾರಕರು ಮನುಷ್ಯರುಗಳು ಇವರುಗಳ ನ್ನು ಬಿಟ್ಟು ಬಾಕಿ ಉಳಿಯುವಸೂಕ್ಷ್ಮಏಕೇಂದ್ರಿಯ ಪ್ರಾಣಿಯಿಂದವಂ ಚೇಂದ್ರಿಯಪ್ರಾಣಿಗಳವರಿವಿಗೂ ಇರುವ ಸಮಸ್ತ ಪ್ರಾಣಿಗಳಿಗೂ ತಿ ರ್ಯಕ್‌ಪ್ರಾಣಿಎಂದು ಹೆಸರು ಇವು ಲೋಕದಸಮಸ್ತಪ್ರದೇಶದಲ್ಲೂ ಇರುತ್ತವೆ ॥ ೨೭ ॥

ದೇ ವಾ ಯು ಷ್ಯಾ ಧಿ ಕ ರ ಣ ಂ.

ಅ ॥ ಭವನವಾಸಿಗಳ ಆಯುಷ್ಯವನ್ನು ಹೇಳುತ್ತಾರೆ.

ಸೂ ॥ ಸ್ಥಿತಿರಸುರನಾಗಸುಪರ್ಣದ್ವೀಪಶೇಷಾಣಾಂ ಸಾ ಗರೋಪಮ ತ್ರಿಪಲ್ಯೋಪಮಾರ್ಧಹೀನಮಿತಾಃ ॥ ೨೮ ॥

ಟೀ ॥ ಅಸುರನಾಗ ಸುವರ್ಣದ್ವೀಪಶೇಷಾಣಾಂ ಅಸುರ-ಅಸುರಕು ಮಾರರು, ನಾಗ-ನಾಗಕುಮಾರರು, ಸುಪರ್ಣ-ಸುಪರ್ಣಕುಮಾರರು, ದ್ವೀಪ-ದ್ವೀಪಕುಮಾರರು, ಶೇಷಾಣಾಂ-ಉಳಿದಂಥಾ ಆರುವಿಧಕುಮಾ ರರು ಇವರುಗಳಿಗೆ, ಸ್ಥಿತಿಃ-ಆಯುಷ್ಯವು, ಸಾಗರೋಪಮತ್ರಿಪಲ್ಯೋ ಪಮಾರ್ಧಹೀನಮಿತಾಃ- ಸಾಗರೋಪಮ-ಸಾಗರೋಪಮಾಯುಷ್ಯವು, ತ್ರಿಪಲ್ಯೋಪಮ-ಮೂರುಪಲ್ಯಾಯುಷ್ಯವು, ಅರ್ಧಹೀನಮಿತಾಃ-ಅರ್ಧ ಅರ್ಧಪಲ್ಯಕಡಮೆಯಾದ ಆಯುಷ್ಯವುಳ್ಳವರುಗಳು ॥

ತಾ ॥ ಅಸುರಕುಮಾರರಿಗೆ ೧ ಸಾಗರಾಯುಷ್ಯವು, ನಾಗಕು ಮಾರರಿಗೆ ೩ ಪಲ್ಯಾಯುಷ್ಯವು. ಸುಪರ್ಣಕುಮಾರರಿಗೆ ೨½ ಪಲ್ಯಾ ಯುಷ್ಯವು. ದ್ವೀಪಕುಮಾರರುಗಳಿಗೆ ೨ ಪಲ್ಯಾಯುಷ್ಯವು. ಉಳಿ ದಕುಮಾರರುಗಳಿಗೆ ಒಂದುವರೆ(೧½) ಪಲ್ಯಾಯುಷ್ಯವು ॥ ಇವರುಗಳಿಗೆ ಈ ಆಯುಷ್ಯಉತ್ಕೃಷ್ಟಾಯುಷ್ಯವು ॥ ೨೮ ॥

ಅ ॥ ಸೌಧರ್ಮಈಶಾನ ಕಲ್ಪದದೇವತೆಗಳ ಆಯುಷ್ಯವನ್ನು ಹೇಳುತ್ತಾರೆ.

ಸೂ ॥ ಸೌಧರ್ಮೈಶಾನಯೋಃ ಸಾಗರೋಪಮೇಧಿಕೇ ॥ ೨೯ ॥

ಟೀ ॥ ಸೌಧರ್ಮೈಶಾನಯೋಃ- ಸೌಧರ್ಮಕಲ್ಪ ಈಶಾನಕಲ್ಪದ ಲ್ಲಿ ಹುಟ್ಟಿದಂಥಾವರುಗಳಿಗೆ, ಅಧಿಕೇ-ಉತ್ಕೃಷ್ಟದಲ್ಲಿ, ಸಾಗರೋಪ ಮೇ-ಸ್ವಲ್ಪಾಧಿಕವಾದಎರಡುಸಾಗರಾಯುಷ್ಯವು ॥

ತಾ ॥ ಅಧಿಕಗ್ರಹಣವು ಸಹಸ್ರಾರಕಲ್ಪದವರಿವಿಗೂ ತಿಳಿಯುವು ದು. ಆದ್ದರಿಂದ ಸೌಧರ್ಮ, ಈಶಾನಕಲ್ಪಗಳಲ್ಲಿ ಉತ್ಕೃಷ್ಟಾಯು ಷ್ಯವು ಸಲ್ಪಅಧಿಕವಾದ ಎರಡ ಸಾಗರೋಪಮಾಯುಷ್ಯವು ॥ ೨೯ ॥

ಅ ॥ ಸನತ್ಕುಮಾರ ಮಾಹೇಂದ್ರಕಲ್ಪದವರ ಆಯುಷ್ಯವನ್ನು ಹೇಳುತ್ತಾರೆ.

ಸೂ ॥ ಸನತ್ಕುಮಾರಮಾಹೇಂದ್ರಯೋಸ್ಸಪ್ತ ॥ ೩೦ ॥

ಟೀ ॥ ಸನತ್ಕುಮಾರ ಮಾಹೇಂದ್ರಯೋಃ-ಸನತ್ಕುಮಾರ ಮಾ ಹೇಂದ್ರಕಲ್ಪಗಳಲ್ಲಿ, ಸಪ್ತ-ಉತ್ಕೃಷ್ಟದಿಂದ ಸಲ್ಪಅಧಿಕವಾದ ಏಳುಸಾ ಗರೋಪಮಾಯುಷ್ಯವು ॥ ೩೦ ॥

ಅ ‖ ಬ್ರಹ್ಮಲೋಕ ಮೊದಲಾಗಿ ಅಚ್ಯುತಕಲ್ಪದವರಿವಿಗಿರುವರ ಆಯುಷ್ಯ ವನ್ನು ಹೇಳುತ್ತಾರೆ.

ಸೂ ‖ ತ್ರಿಸಪ್ತನವೈಕಾದಶ ತ್ರಯೋದಶಪಂಚದಶಭಿರಧಿ ಕಾನಿ ತು ‖ ೩೧ ‖

ಟೀ ‖ ತ್ರಿಸಪ್ತನವೈಕಾದಶತ್ರಯೋದಶ ಪಂಚದಶಭಿಃ-ತ್ರಿ-ಮೂರು, ಸಪ್ತ-ಏಳು, ನವ-ಒಂಭತ್ತು, ಏಕಾದಶ-ಹನ್ನೊಂದು, ತ್ರಯೋದಶ-ಹದಿಮೂರು, ಪಂಚದಶಭಿಃ-ಹದಿನೈದು ಯಿವುಗಳಿಂದ, ಅಧಿಕಾನಿತು-ಅಧಿಕಗಳಾದಂಥಾದ್ದಾಗುತ್ತವೆ ತು ಎಂಬುವದು ಹೇಳಿದ್ದರಿಂದ ಸಹ ಸ್ರಾರಕಲ್ಪದವರಿಗೆ ಅಧಿಕವು ಮುಂದೆಇಲ್ಲ ‖

ತಾ ‖ ಬ್ರಹ್ಮ-ಬ್ರಹ್ಮೋತ್ತರಕಲ್ಪದವರಿಗೆ ಸ್ವಲ್ಪಅಧಿಕವಾದ ಹತ್ತು ಸಾಗರೋಪಮಾಯುಷ್ಯವು. ಲಾಂತವ-ಕಾಪಿಷ್ಠಕಲ್ಪದವರಿಗೆ ಸ್ವಲ್ಪ ಅಧಿಕವಾದ ಹದಿನಾಲ್ಕು ಸಾಗರೋಪಮಾಯುಷ್ಯವು. ಶುಕ್ರ ಮಹಾಶುಕ್ರ ಕಲ್ಪದವರಿಗೆ ಸ್ವಲ್ಪಅಧಿಕವಾದ ಹದಿನಾರುಸಾಗರಾಯು ಷ್ಯವು. ಶತಾರ-ಸಹಸ್ರಾರಕಲ್ಪದವರಿಗೆ ಸ್ವಲ್ಪಅಧಿಕವಾದ ಹದಿನೆಂ ಟು ಸಾಗರಾಯುಷ್ಯವು. ಆನತ-ಪ್ರಾಣತ ಕಲ್ಪದವರಿಗೆ ಇಪ್ಪತ್ತು ಸಾಗರಾಯುಷ್ಯವು. ಆರಣ-ಅಚ್ಯುತಕಲ್ಪದವರಿಗೆ ಇಪ್ಪತ್ತೆರಡು ಸಾ ಗರೋಪಮಾಯುಷ್ಯವು. ಇವುಗಳೆಲ್ಲಾ ಉತ್ಕೃಷ್ಟಾಯುಷ್ಯಪ್ರ ಮಾಣವು‖ಸೂತ್ರದಲ್ಲಿಹೇಳಿದಸಂಖ್ಯೆಯು ೭ ಕ್ಕೆಸೇರಿಸಬೇಕು‖ ೩೧ ‖

ಅ ‖ ಅಹಮಿಂದ್ರರ ಉತ್ಕೃಷ್ಟಾಯುಷ್ಯವನ್ನು ಹೇಳುತ್ತಾರೆ.

ಸೂ ‖ ಆರಣಾಚ್ಯುತಾದೂರ್ಧ್ವಮೇಕೈಕೇನ ನವಸು ಗ್ರೈ ವೇಯಕೇಷ್ವನುದಿಶೇಷು ವಿಜಯಾದಿಷು ಸರ್ವಾರ್ಥಸಿದ್ಧೌ ಚ‖

ಟ ‖ ಆರಣಾಚ್ಯುತಾತ್-ಆರಣ-ಅಚ್ಯುತವೆಂಬ ಕಲ್ಪಯುಗಳಗಳದೆ ಶೆಯಿಂದ, ಊರ್ಧ್ವಂ-ಮೇಲ್ಗಡೆಯಲ್ಲಿ, ನವಸುಗ್ರೈವೇಯಕೇಷು-ಒಂ ಭತ್ತುಗ್ರೈವೇಯಕಗಳಲ್ಲಿಯೂ, ಅನುದಿಶೇಷು-ಅನುದಿಶೆಗಳಲ್ಲೂ, ವಿ ಜಯಾದಿಷು-ವಿಜಯಾದಿ ವಿಮಾನಗಳಲ್ಲೂ, ಸರ್ವಾರ್ಥಸಿದ್ಧೌಚ-ಸ ರ್ವಾರ್ಥಸಿದ್ಧಿಯಲ್ಲಿಯೂಕೂಡ, ಏಕೈಕೇನ-ಒಂದೊಂದುಸಾಗರೋಪ ಮದಿಂದ ಅಧಿಕವಾದಂಥಾ ಆಯುಷ್ಯಗಳ, ‖

ತಾ || ೧ ನೇ ಗ್ರೈವೇಯಕದಲ್ಲಿ ೨೩ ಸಾಗರಾಯುಷ್ಯ ೨ ನೇ ಗ್ರೈವೇಯಕದಲ್ಲಿ ೨೪ ಸಾಗರ| ೩ ನೇ ಗ್ರೈವೇಯಕದಲ್ಲಿ ೨೫ ಸಾಗರ|| ೪ ನೇ ಗ್ರೈವೇಯಕದಲ್ಲಿ ೨೬ ಸಾಗರ|| ೫ ನೇ ಗ್ರೈವೇಯಕದ ಲ್ಲಿ ೨೭ ಸಾಗರ| ೬ ನೇ ಗ್ರೈವೇಯಕದಲ್ಲಿ ೨೮ ಸಾಗರ|| ೭ ನೇಗ್ರೈ ವೇಯಕದಲ್ಲಿ ೨೯ ಸಾಗರ|| ೮ ನೇ ಗ್ರೈವೇಯಕದಲ್ಲಿ ೩೦ ಸಾಗರ|| ೯ ನೇ ಗ್ರೈವೇಯಕದಲ್ಲಿ ೩೧ ಸಾಗರ|| ನವಾನುದಿಶೆಯಲ್ಲಿ ೩೨ ಸಾಗರ|| ವಿಜಯ, ವೈಜಯಂತ, ಜಯಂತ, ಅಪರಾಜಿತ, ಸರ್ವಾರ್ಥಸಿದ್ಧಿ ಈ ೫ ಅನುತ್ತರೆಗಳಲ್ಲೂ ೩೩ ಸಾಗರೋಪಮಾಯುಷ್ಯವು ಉತ್ಕೃಷ್ಟಾಯುಷ್ಯವು|ಸರ್ವಾರ್ಥಸಿದ್ಧಿಹೆಸರನ್ನು ಸೂತ್ರದಲ್ಲಿ ಬೇರೆಹೇಳಿದ್ದರಿಂದ ಇಲ್ಲಿ ೩೩ ಸಾಗರಾಯುಷ್ಯವು ಪೂರ್ತಿಯಾಗಿರುತ್ತೆ ಅಂದರೆ ಸರ್ವಾರ್ಥಸಿದ್ಧಿಯಲ್ಲಿಮಾತ್ರ ಜಘನ್ಯಾಯುಷ್ಯವಿಲ್ಲ || ೩೨ ||

ಅ || ಹಿಂದೆಹೇಳಿದ ವೈಮಾನಿಕರಿಗೆ ಜಘನ್ಯಾಯುಷ್ಯವನ್ನು ಹೇಳುತ್ತಾರೆ.

ಸೂ || ಅಪರಾಪಲ್ಯೋಪಮಮಧಿಕಂ || ೩೩ ||

ಟೀ || ಅಪರಾ ( ಸೌಧರ್ಮೈಶಾನಕಲ್ಪದಲ್ಲಿ ) ಜಘನ್ಯಾಯುಷ್ಯವು, ಅಧಿಕಂ ಹೆಚ್ಚಾದಂಥಾ, ಪಲ್ಯೋಪಮಂ-ಬಂದುಪಲ್ಯಾಯುಷ್ಯವು||

ತಾ || ಸೌಧರ್ಮ,ಈಶಾನಕಲ್ಪಗಳಲ್ಲಿ ಜಘನ್ಯಾಯುಷ್ಯವು, ಸ್ವಲ್ಪಅಧಿಕವಾದ ಬಂದುಪಲ್ಯಾಯುಷ್ಯವು || ೩೩ ||

ಅ || ಮೇಲಿನ ಕಲ್ಪಗಳ ಜಘನ್ಯಾಯುಷ್ಯವನ್ನು ಹೇಳುತ್ತಾರೆ,

ಸೂ || ಪರತಃ ಪರತಃ ಪೂರ್ವಾಪೂರ್ವಾನಂತರಾಃ || ೩೪ ||

ಟೀ || ಪೂರ್ವಾಪೂರ್ವಾ-ಮೊದಲಯುಗಳಗಳ ಉತ್ಕೃಷ್ಟಾಯುಷ್ಯವು, ಪರತಃಪರತಃ-ಎರಡನೆಯುಗಳಗಳ, ಅನಂತರಾಃ-ಜಘನ್ಯಾಯುಷ್ಯವು ||

ತಾ || ಸೌಧರ್ಮ-ಈಶಾನಕಲ್ಪಗಳ ಉತ್ಕೃಷ್ಟಾಯುಷ್ಯವು ಅಧಿಕವಾದ ಎರಡುಸಾಗರವು, ಇದೇ ಸನತ್ಕುಮಾರ ಮಾಹೇಂದ್ರಸ್ವರ್ಗಗಳಲ್ಲಿಜಘನ್ಯಾಯುಷ್ಯವು ಈಮೇರೆ ಮುಂದೆಯೂತಿಳಿಯತಕ್ಕದ್ದು.

ನ ರ ಕಾ ಯು ಷ್ಯಾ ಧಿ ಕ ರ ಣ ಂ.

ಅ|| ಎರಡನೆಯ ನರಕಾದಿಗಳ ಜಘನ್ಯಾಯುಷ್ಯವನ್ನು ಹೇಳುತ್ತಾರೆ.

ಸೂ ॥ ನಾರಕಾಣಾಂ ಚ ದ್ವಿತೀಯಾದಿಷು ॥ ೩೫ ॥

ಟೀ ॥ ದ್ವಿತೀಯಾದಿಷು-ಎರಡನೇನರಕವೇ ಮೊದಲಾದ ನರಕಗಳಲ್ಲಿ, ನಾರಕಾಣಾಂ-ನರಕದಲ್ಲಿ ಹುಟ್ಟಿದಂಥಾವರುಗಳಿಗೆ, ಚ-ಚಕಾರದಿಂ ದಕೆಳಗಣ ನರಕದ ಜಘನ್ಯಆಯುಷ್ಯವೇಮೇಲಿನನರಕದವರಿಗೆಪೂರ್ಣಾಯುಷ್ಯವಾಗುತ್ತೆ ॥

ತಾ ॥ ಪ್ರಥಮನರಕದಲ್ಲಿ ಒಂದುಸಾಗರಾಯುಷ್ಯವು. ಇದು ದ್ವಿತೀಯನರಕದವರಿಗೆ ಜಘನ್ಯಾಯುಷ್ಯವು ಇದೇರೀತಿ ೭ ನರಕದ ವರಿವಿಗೂ ತಿಳಿಯುವದು ॥ ೩೫ ॥

ಅ । ಪ್ರಥಮ ನರಕದ ಜಘನ್ಯಾಯುಷ್ಯವನ್ನು ಹೇಳುತ್ತಾರೆ.

ಸೂ ॥ ದಶವರ್ಷ ಸಹಸ್ರಾಣಿ ಪ್ರಥಮಾಯಾಂ ॥ ೩೬ ॥

ಟೀ ॥ ಪ್ರಥಮಾಯಾಂ - ಮೊದಲನೇ ನರಕದಲ್ಲಿ; ದಶವರ್ಷಸಹಸ್ರಾಣಿ-ಹತ್ತುಸಾವಿರ ವರ್ಷಗಳು, ಜಘನ್ಯಾಯುಷ್ಯವು ಆಗುತ್ತದೆ ॥

ಅ ॥ ಭವನವಾಸಿಕರ ಜಘನ್ಯಾಯುಷ್ಯವನ್ನು ಹೇಳುತ್ತಾರೆ.

ಸೂ ॥ ಭವನೇಷು ಚ ॥ ೩೭ ॥

ಟೀ॥ಭವನೇಷುಚ-ಭವನವಾಸಿಗಳಲ್ಲಿ ಯೂಕೂಡ ಅಂದರೆ ಭವನವಾಸಿಗಳಿಗೆ ಹತ್ತುಸಾವಿರ ವರ್ಷಗಳು ಜಘನ್ಯಾಯುಷ್ಯವು ॥ ೩೭ ॥

ಅ ॥ ವ್ಯಂತರದೇವತೆಗಳ ಜಘನ್ಯಾಯುಷ್ಯವನ್ನು ಹೇಳುತ್ತಾರೆ.

ಸೂ ॥ ವ್ಯಂತರಾಣಾಂ ಚ ॥ ೩೮ ॥

ಟೀ ॥ ವ್ಯಂತರಾಣಾಂಚ-ವ್ಯಂತರರುಗಳಿಗೂಕೂಡ ಅಂದರೆ ವ್ಯಂತರದೇವತೆಗಳಿಗೆ ಹತ್ತುಸಾವಿರ ವರ್ಷವು ಜಘನ್ಯಾಯುಷ್ಯವು ॥ ೩೮ ॥

ಅ । ವ್ಯಂತರರ ಉತ್ಕೃಷ್ಟಾಯುಷ್ಯವನ್ನು ಹೇಳುತ್ತಾರೆ.

ಸೂ ॥ ಪರಾಪಲ್ಯೋಪಮ ಮಧಿಕಂ ॥ ೩೯ ॥

ಟೀ ॥ ಪರಾ-ಉತ್ಕೃಷ್ಟಾಯುಷ್ಯವು, ಅಧಿಕಂ - ಹೆಚ್ಚಾದಂಥಾ, ಪಲ್ಯೋಪಮಂ-ಪಲ್ಯಾಯುಷ್ಯವು ॥

ತಾ ॥ ವ್ಯಂತರ ದೇವತೆಗಳಿಗೆ ಉತ್ಕೃಷ್ಟಾಯುಷ್ಯವು ಸ್ವಲ್ಪ ಹೆಚ್ಚಾದ ಒಂದುಪಲ್ಯಾಯುಷ್ಯವು ॥ ೩೯ ॥

ಜ್ಯೋತಿಷ್ಕಾಯುಷ್ಯಾಧಿಕರಣಂ.

ಅ ॥ ಜ್ಯೋತಿಷ್ಕರ ಉತ್ಕೃಷ್ಟಾಯುಷ್ಯವನ್ನು ಹೇಳುತ್ತಾರೆ.

ಸೂ ॥ ಜ್ಯೋತಿಷ್ಕಾಣಾಂ ಚ ॥ ೪೦ ॥

ಟೀ ॥ ಜ್ಯೋತಿಷ್ಕಾಣಾಂಚ-ಜ್ಯೋತಿಷ್ಕ ದೇವತೆಗಳಿಗೂ ಕೂಡ. ಅಂದರೆ ಜ್ಯೋತಿಷ್ಕ ದೇವತೆಗಳಿಗೆ ಸ್ವಲ್ಪ ಅಧಿಕವಾದ ಒಂದು ಪಲ್ಯಾಯುಷ್ಯವು ಉತ್ಕೃಷ್ಟಾಯುಷ್ಯವು ॥ ೪೦ ॥

ಅ ॥ ಜ್ಯೋತಿಷ್ಕರ ಜಘನ್ಯಾಯುಷ್ಯವನ್ನು ಹೇಳುತ್ತಾರೆ.

ಸೂ ॥ ತದಷ್ಟಭಾಗೋಽಪರಾ ॥ ೪೧ ॥

ಟೀ ॥ ಅಪರಾ - ಜ್ಯೋತಿಷ್ಕ ದೇವತೆಗಳಿಗೆ ಜಘನ್ಯಾಯುಷ್ಯವು, ತದಷ್ಟಭಾಗಃ - ಪಲ್ಯದ ಎಂಟನೇ ಭಾಗವು ॥

ತಾ ॥ಜ್ಯೋತಿಷ್ಕರ ಉತ್ಕೃಷ್ಟಾಯುಷ್ಯವಾದಪಲ್ಯವನ್ನು ಎಂಟುಭಾಗ ಮಾಡಿದರೆ ಅದರಲ್ಲಿ ಒಂದು ಭಾಗ ಅಪರಜಘನ್ಯಾಯುಷ್ಯವು ॥ ೪೧ ॥

ಲೌ ಕಾಂ ತಿ ಕಾ ಯು ಷ್ಯಾ ಧಿ ಕ ರ ಣ ಂ.

ಅ ॥ ಲೌಕಾಂತಿಕ ದೇವತೆಗಳ ಆಯುಷ್ಯವನ್ನು ಹೇಳುತ್ತಾರೆ.

ಸೂ ॥ ಲೌಕಾಂತಿಕಾನಾಮಷ್ಟೌಸಾಗರೋಪಮಾಣಿ ಸರ್ವೇಷಾಂ ॥ ೪೨ ॥

ಟೀ ॥ ಸರ್ವೇಷಾಂ - ಸಮಸ್ತವಾದಂಥಾ, ಲೌಕಾಂತಿಕಾನಾಂ - ಲೌಕಾಂತಿಕ ದೇವತೆಗಳಿಗೆ,ಅಷ್ಟೌ-ಎಂಟಾದಂಥಾ, ಸಾಗರೋಪಮಾಣಿ-ಸಾಗರೋಪ ಮಾಯುಷ್ಯಗಳು ॥ ಇವರಿಗೆ ಜಘನ್ಯಾಯುಷ್ಯವಿಲ್ಲವು ॥೪೨॥

ಇತಿ ತತ್ವಾರ್ಥಾಧಿಗಮೇ ಮೋಕ್ಷಶಾಸ್ತ್ರೇ ಚತುರ್ಥೋಽಧ್ಯಾಯಃ,



ಅಥ ಪಂಚಮೋಽಧ್ಯಾಯ ಪ್ರಾರಂಭಃ.

ಅ ಜೀ ವ ಕಾ ಯಾ ಧಿ ಕ ರ ಣ ಂ.

ಅ ॥ ಅಜೀವದ್ರವ್ಯಗಳನ್ನು ಹೇಳುತ್ತಾರೆ.

ಸೂ ॥ ಅಜೀವಕಾಯಾಧರ್ಮಾಧರ್ಮಾಕಾಶಪುದ್ಗಲಾಃ ॥ ೧ ॥

ಟೀ ॥ ಧರ್ಮಾಧರ್ಮಾಕಾಶಪ್ರುದ್ಗಲಾಃ - ಧರ್ಮ - ಧರ್ಮವು,

ಅಧರ್ಮ - ಅಧರ್ಮವು, ಆಕಾಶ - ಆಕಾಶವು, ಪುದ್ಗಲಾಃ- ಪುದ್ಗಲವು, ಇವುಗಳು, ಅಜೀವಕಾಯಾಃ-ಅಜೀವಕಾಯಗಳೆಂದು ತಿಳಿಯುವುದು ||

ತಾ||ಧರ್ಮ,ಅಧರ್ಮ,ಆಕಾಶ, ಪುದ್ಗಲ ಈ ೪ ಅಜೀವಕಾಯಗಳು ಇವುಗಳು ಬಹುಪ್ರದೇಶ ಉಳ್ಳಂಥಾವುಗಳು ಆದಕಾರಣ ಇವುಗಳಿಗೆ ಕಾಯವೆಂದುಹೆಸರು ಬಂದಿರುತ್ತದೆ || ೧ ||

ಅ || ಧರ್ಮಾದಿಗಳು ದ್ರವ್ಯವೆಂದು ಹೇಳುತ್ತಾರೆ.

ಸೂ || ದ್ರವ್ಯಾಣಿ || ೨ ||

ಟೀ || ದ್ರವ್ಯಾಣಿ - ದ್ರವ್ಯಗಳು ||

ತಾ || ದ್ರವಂತಿ ತಾನ್ ತಾನ್ ಪರ್ಯಾಯಾನ್ ಗಚ್ಛಂತೀತಿ ದ್ರವ್ಯಾಣಿ || ಮುಂದೆ ಹೇಳುವ ದ್ರವ್ಯ ಲಕ್ಷಣ ಇರುವದ್ದರಿಂದ, ಧರ್ಮ, ಅಧರ್ಮ, ಆಕಾಶ, ಪುದ್ಗಲ, ಈ ೪ ದ್ರವ್ಯಗಳೆಂದು ತಿಳಿಯುವದು || ೨ ||

ಅ|| ಜೀವನೂ ದ್ರವ್ಯವೆಂದು ಹೇಳುತ್ತಾರೆ.

ಸೂ || ಜೀವಾಶ್ಚ || ೩ ||

ಟೀ || ಜೀವಾಶ್ಚ - ಜೀವಗಳೂಕೂಡ || ತಾ || ಜೀವಕ್ಕೆಕಾಯವೆಂಬ ದ್ರವ್ಯವೆಂಬ ಹೆಸರುಗಳುಇರುತ್ತವೆ || ಮುಂದೆಹೇಳುವ ಕಾಲ ದ್ರವ್ಯದೊಡನೆ ಜೀವಾದಿದ್ರವ್ಯಗಳು ಸೇರಿ ದ್ರವ್ಯಗಳು ಆರು ಆಗುತ್ತವೆ ||

ಅ || ಆ ಷಡ್ದ್ರವ್ಯಗಳಿಗೆ ವಿಶೇಷವನ್ನು ಹೇಳುತ್ತಾರೆ.

ಸೂ || ನಿತ್ಯಾವಸ್ಥಿತಾನ್ಯರೂಪಾಣಿ || ೪ ||

ಟೀ || ನಿತ್ಯಾವಸ್ಥಿತಾನಿ-ನಾಶರಹಿತವಾದಂಥಾವುಗಳು, ಅರೂಪಾಣಿ-ರೂಪುರಸಗಂಧಸ್ಪರ್ಶಗಳುಇಲ್ಲದೇ ಇರುವಂಥಾವುಗಳು || ತಾ || ಜೀವ, ಪುದ್ಗಲ, ಆಕಾಶ, ಧರ್ಮ, ಅಧರ್ಮ, ಕಾಲ ಈ ಆರುದ್ರವ್ಯಗಳು ಶಾಶ್ವತವಾದಂಥಾವುಗಳು, ರೂಪುಇಲ್ಲದೇಯಿರುವಂಥಾವುಗಳು- ಇವುಗಳೇಷಡ್ದ್ರವ್ಯಗಳು ಎಂದು ತಿಳಿಯುವದು ||೪ ||

ಅ || ಪುದ್ಗಲದ್ರವ್ಯಕ್ಕೆ ರೂಪಉಂಟೆಂದು ಹೇಳುತ್ತಾರೆ.

ಸೂ || ರೂಪಿಣಃ ಪುದ್ಗಲಾಃ || ೫ ||

ಟೀ || ಪುದ್ಗಲಾಃ ಪುದ್ಗಲದ್ರವ್ಯಗಳು,ರೂಪಿಣಃ-ಮೂರ್ತದ್ರವ್ಯಗಳು||

ತಾ || ಪುದ್ಗಲಾಃ ಎಂದುಬಹುವಚನವನ್ನು ಹೇಳಿರುವದ್ದರಿಂದ ಪುದ್ಗಲಗಳು, ಅಣು, ಸ್ಕಂಧಾದಿಭೇದದಿಂದ ಬಹುಭೇದವುಳ್ಳಂಥಾ ವುಗಳು ಎಂದು ತಿಳಿಯುವದು || ೫ ||

ಏಕದ್ರವ್ಯಾಧಿಕರಣಂ.

ಅ || ಧರ್ಮ, ಅಧರ್ಮ, ಆಕಾಶ ಈ ೩ ದ್ರವ್ಯಗಳು ಒಂದೊಂದೇಎಂದು ಹೇಳುತ್ತಾರೆ.

ಸೂ || ಆ ಆಕಾಶಾದೇಕದ್ರವ್ಯಾಣಿ || ೬ ||

ಟೀ || ಆಆಕಾಶಾತ್-ಆಕಾಶದ್ರವ್ಯಪರ್ಯಂತರದ್ದೆಶೆಯಿಂದ, ಏಕದ್ರವ್ಯಾಣಿ-ಪ್ರತ್ಯೇಕವಾಗಿ ವೊಂದೊಂದೇದ್ರವ್ಯಗಳು || ತಾ || ಧರ್ಮ ಅಧರ್ಮ,ಆಕಾಶ, ಈ ಮೂರು ಅಖಂಡವಾಗಿ ಒಂದೊಂದೇದ್ರವ್ಯಗಳಾಗಿರುತ್ತವೆ || ಉಳಿದ ಜೀವ,ಪುದ್ಗಲ, ಕಾಲ,ಇವುಗಳು ಖಂಡಗಳು ಆದ್ದರಿಂದ ಜೀವದ್ರವ್ಯವು ಅನಂತಾನಂತವು || ಪುದ್ಗಲದ್ರವ್ಯವು ಅನಂತಗುಣವು || ಕಾಲದ್ರವ್ಯವು ಲೋಕಮಾತ್ರವು. ಲೋಕಾಕಾಶಪ್ರದೇಶಗಳಲ್ಲಿ ವೊಂದೊಂದರಲ್ಲಿ ವೊಂದೊಂದೇಕಾಲಾಣುಗಳು ರತ್ನರಾಶಿಯಂತೆಇವೆ ||

ನಿಷ್ಕ್ರಿಯಾಧಿಕರಣಂ.

ಅ || ಹಿಂದೆಹೇಳಿದ ವೊಂದೊಂದಕ್ಕೂ ವಿಶೇಷವನ್ನು ಹೇಳುತ್ತಾರೆ.

ಸೂ || ನಿಷ್ಕ್ರಿಯಾಣಿ ಚ || ೭ ||

ಟೀ || ನಿಷ್ಕ್ರಿಯಾಣಿಚ-ಧರ್ಮ, ಅಧರ್ಮ, ಆಕಾಶ ಈ ೩ ದ್ರವ್ಯಗಳೂಕೂಡ ಅಲ್ಲಾಡುವದು ಸಂಚರಿಸುವದು ಎಂಬಕ್ರಿಯಾರಹಿತಗಳು || ತಾ || ತಂನಪ್ರದೇಶವನ್ನು ಬಿಟ್ಟು ಮತ್ತೊಂದು ಪ್ರದೇಶಕ್ಕೆ ಹೋಗುವ ವ್ಯಾಪಾರವೇ ' ಕ್ರಿಯೆ ' ಎನ್ನುವದು. ಧರ್ಮ-ಅಧರ್ಮ-ಆಕಾಶ ಈ ೩ ದ್ರವ್ಯಗಳಲ್ಲೂ ಆಕ್ರಿಯೆ ಇಲ್ಲದೇಇರುವದ್ದರಿಂದ ಇವುಗಳು ಕ್ರಿಯೆಇಲ್ಲದೇ ಇರುತ್ತವೆ. ಮತ್ತು ಲೋಕಾಕಾಶದಲ್ಲಿ ಇರುತ್ತವೆ || ೭ ||

ಪ್ರದೇಶಾಧಿಕರಣಂ.

ಅ || ಧರ್ಮ, ಅಧರ್ಮ, ಜೀವಗಳಿಗೆ ಪ್ರದೇಶವನ್ನು ಹೇಳುತ್ತಾರೆ.

ಸೂ || ಅಸಂಖ್ಯೇಯಾಃ ಪ್ರದೇಶಾಃ ಧರ್ಮಾಧರ್ಮೈಕ ಜೀವಾನಾಂ || ೮ ||

ಟೀ || ಧರ್ಮಾಧರ್ಮೈಕ ಜೀವಾನಾಂ- ಧರ್ಮ-ಧರ್ಮವು, ಅಧರ್ಮ-ಅಧರ್ಮವು, ಏಕಜೀವಾನಾಂ-ಒಂದು ಜೀವವು ಇವುಗಳಿಗೆ, ಅಸಂಖ್ಯೇಯಾಃಪ್ರದೇಶಾಃ-ಅಸಂಖ್ಯಾತ ಪ್ರದೇಶಗಳು ||

ತಾ || ಒಂದುಪರಮಾಣು ಇರುವಸ್ಥಳಕ್ಕೆ ಪ್ರದೇಶವೆಂದು ಹೆಸರು || ಜೀವದ್ರವ್ಯ, ಧರ್ಮದ್ರವ್ಯ, ಅಧರ್ಮದ್ರವ್ಯಗಳು ಪ್ರತಿಯೊಂದೂ ಅಸಂಖ್ಯಾತಪ್ರದೇಶವುಳ್ಳಂಥಾವುಗಳು || ೮ ||

ಅ|| ಆಕಾಶದ್ರವ್ಯಕ್ಕೆ ಪ್ರದೇಶವನ್ನು ಹೇಳುತ್ತಾರೆ.

ಸೂ || ಆಕಾಶಸ್ಯಾನಂತಾಃ || ೯ ||

ಟೀ || ಆಕಾಶಸ್ಯ-ಆಕಾಶದ್ರವ್ಯಕ್ಕೆ-ಅನಂತಾಃ-ಅನಂತಪ್ರದೇಶವು ||

ಅ || ಪುದ್ಗಲದ್ರವ್ಯಕ್ಕೆ ಪ್ರದೇಶವನ್ನು ಹೇಳುತ್ತಾರೆ.

ಸೂ || ಸಂಖ್ಯೇಯಾಸಂಖ್ಯೇಯಾಶ್ಚ ಪುದ್ಗಲಾನಾಂ || ೧೦ ||

ಟೀ || ಪುದ್ಗಲಾನಾಂ-ಪುದ್ಗಲಗಳಿಗೆ, ಸಂಖ್ಯೇಯಾಸಂಖ್ಯೇಯಾಶ್ಚ-ಸಂಖ್ಯೇಯ-ಸಂಖ್ಯಾತವು, ಅಸಂಖ್ಯೇಯಾಃ-ಅಸಂಖ್ಯಾತವು, ಚ-ಅನಂತವು ಇವುಗಳ ಪ್ರದೇಶಗಳು ಆಗುತ್ತವೆ. || ತಾ || ವಿಭಾಗಮಾಡುವದಕ್ಕೆ ಆಗದೇಯಿರುವದೇ ಶುದ್ಧಪರಮಾಣುವು. ಅದು ಒಂದೇ ಪ್ರದೇಶವುಳ್ಳದ್ದು ಈ ಪರಮಾಣುಗಳಲ್ಲಿ ಸೇರುವ ಬಿಡುವಶಕ್ತಿಯಿದೆ ಆದ್ದರಿಂದ ಎರಡೆರಡು ಪರಮಾಣು, ಮೂರುಮೂರು ಪರಮಾಣು, ಇದೇರೀತಿ ಸಂಖ್ಯಾತಪರಮಾಣು, ಅಸಂಖ್ಯಾತಪರಮಾಣು, ಅನಂತಪರಮಾಣುಸೇರಿದ ಸ್ಕಂಧ ( ಪುದ್ಗಲದ್ರವ್ಯ ) ವಿರುತ್ತದೆ. ಅಸಂಖ್ಯಾತಪ್ರಮಾಣವಾದಂಥಾ ಲೋಕದಲ್ಲಿ, ಅನಂತಪ್ರದೇಶಗಳುಳ್ಳಂಥಾ ಅನಂತಾನಂತ ಪ್ರದೇಶಗಳುಳ್ಳಂಥಾ ಪುದ್ಗಲವುಹ್ಯಾಗೆ ಇದೆಯೆಂದು ಪ್ರಶ್ನೆ ಮಾಡಿದರೆ 'ಸಮಾಧಾನಹ್ಯಾಗಂದರೆ ; ಸೂಕ್ಷ್ಮಪರಿಣಾಮಸಾಮರ್ಥ್ಯದೊಡನೆಕೂಡಿರುವದ್ದರಿಂದ ಸೂಕ್ಷ್ಮತ್ವದಿಂದ ಪರಿಣಮಿಸಿರುವಂಥಾ ಪರಮಾಣುಮೊದಲಾದ ಪುದ್ಗಲಗಳು ಒಂದೊಂದು ಆಕಾಶಪ್ರದೇಶದಲ್ಲಿ ಅನಂತಾನಂತ ಪ್ರದೇಶಗಳುಳ್ಳಂಥಾ ಪುದ್ಗಲಗಳುಇರುತ್ತಿಧಾವೆ

ಇತರದ್ರವ್ಯಗಳಿಂದ ಅವಗಾಹನಸಾಮರ್ಥ್ಯವು, ವಿರೋಧವಾದಂಥಾದ್ದು ಆಗುವದಿಲ್ಲ || ಹ್ಯಾಗಂದರೆ ? ಒಂದು ಸೂಕ್ಷ್ಮವಾದ ನಿಗೋದಶರೀರದಲ್ಲಿ ಅನಂತಕಾರ್ಮಣ ಕಾಯವುಪರಸ್ಪರ ವ್ಯಾಹತಿಯಿಲ್ಲದೆ ಹ್ಯಾಗೆ ಇಧೆಯೋ ಆಪ್ರಕಾರ ಒಂದು ಆಕಾಶ ಪ್ರದೇಶದಲ್ಲಿ ಅನಂತಾನಂತ ಪುದ್ಗಲಗಳು ಪರಸ್ಪರ ವಿರೋಧವಿಲ್ಲದೆ ಯಿರುತ್ತವೆ || ೧೦ ||

ಅ || ಪರಮಾಣುವಿಗೆ ಪ್ರದೇಶವಿಲ್ಲವೆಂದು ಹೇಳುತ್ತಾರೆ.

ಸೂ || ನಾಣೋಃ || ೧೧ ||

ಟೀ || ಅಣೋಃ - ಅಣುವಿಗೆ, ನ - ದ್ವಿತೀಯಾದಿ ಪ್ರದೇಶಗಳಿಲ್ಲ ||

ತಾ || ಪರಮಾಣುವಿಗೆ ಪ್ರದೇಶವಿಲ್ಲವು || ಪರಮಾಗಮದಲ್ಲಿ ಪರಮಾಣುವಿಗೆ ಒಂದು ಪ್ರದೇಶವು ಎಂದು ಹೇಳಿದೆ. ಯಾಕಂದರೆ ಅದನ್ನು ಖಂಡನೆ ಮಾಡುವದಕ್ಕೆ ಆಗುವದಿಲ್ಲ || ಹ್ಯಾಗಂದರೆ ಒಂದು ಆಕಾಶಕ್ಕೆ ಪ್ರದೇಶ ಭೇದವಿಲ್ಲದೇ ಯಿರುವದ್ದರಿಂದ ಅಪ್ರದೇಶಕವೆಂಬ ವ್ಯವಹಾರ ಹ್ಯಾಗೆ ಯಿಧೆಯೋ ಹಾಗೆ ಪರಮಾಣುವಿಗೆ ಒಂದು ಪ್ರದೇಶ ವಿದ್ದಾಗ್ಯೂ ದ್ವಿತೀಯಾದಿ ಪ್ರದೇಶಗಳಿಲ್ಲದೇ ಯಿರುವದ್ದರಿಂದ ಪರಮಾಣುವಿಗೆ ಪ್ರದೇಶಗಳು ಇಲ್ಲವೆಂದು ವ್ಯವಹರಿಸಲ್ಪಡುತ್ತಿಧೆ || ೧೧ ||

ಅ || ಲೋಕಾಕಾಶವನ್ನು ಹೇಳುತ್ತಾರೆ.

ಸೂ || ಲೋಕಾಕಾಶೇವಗಾಹಃ || ೧೨ ||

ಟೀ || ಲೋಕಾಕಾಶೇ - ಲೋಕಾಕಾಶದಲ್ಲಿ, ಅವಗಾಹಃ - ಎಲ್ಲಾ ದ್ರವ್ಯಗಳಿಗೂ ಇರುವಿಕೆ (ಸ್ಥಿತಿ) ಯು ಆಗುತ್ತದೆ ||

ತಾ || ಲೋಕಾಕಾಶದಿಂದ ಹೊರಗೆ ಅಲೋಕಾಕಾಶ ವಿರುತ್ತದೆ. ಅಲ್ಲಿ ಷಡ್ದ್ರವ್ಯಗಳಿಲ್ಲ. ಜೀವಾದಿ ದ್ರವ್ಯಗಳು ಎದುವರಿಗೆ ಇರುತ್ತದೋ ಅಲ್ಲಿನವರಿಗೆ ಲೋಕಾಕಾಶವೆಂದು ಹೆಸರು. ಆಕಾಶವು ೧೪ ರಜ್ಜುಪ್ರಮಿತವಾದಂಥಾದ್ದು || ೧೨ ||

ಅ || ಧರ್ಮಾ ಧರ್ಮಗಳಿಗೆ ಸ್ಥಾನವನ್ನು ಹೇಳುತ್ತಾರೆ.

ಸೂ || ಧರ್ಮಾಧರ್ಮಯೋಃ ಕೃತ್ಸ್ನೇ || ೧೩ ||

ಟೀ || ಧರ್ಮಾಧರ್ಮಯೋಃ - ಧರ್ಮದ್ರವ್ಯ ಅಧರ್ಮ ದ್ರವ್ಯಗಳಿಗೆ, ಕೃತ್ಸ್ನೇ - ಸಮಸ್ತ ಲೋಕಾಕಾಶದಲ್ಲಿ ಇರುವಿಕೆಯು ||

ತಾ || ಎಳ್ಳಿನಲ್ಲಿ ಎಣ್ಣೆ ಹ್ಯಾಗೆ ಎಳ್ಳಿನ ಎಲ್ಲಾಕಡೆಯುಲ್ಲೂ ವ್ಯಾಪಿಸಿಕೊಂಡಿದ್ದೆಯೋ ಅದರಂತೆ ಲೋಕಾಕಾಶದಲ್ಲಿ ಧರ್ಮದ್ರವ್ಯ ಅಧರ್ಮದ್ರವ್ಯವು ಎಲ್ಲಾಕಡೆಯಲ್ಲೂ ವ್ಯಾಪಿಸಿಕೊಂಡಿರುತ್ತದೆ || ೧೩ ||

ಅ || ಪುದ್ಗಲ ದ್ರವ್ಯಗಳಿಗೆ ವಿಶೇಷ ಅವಗಾಹನವನ್ನು ಹೇಳುತ್ತಾರೆ.

ಸೂ || ಏಕ ಪ್ರದೇಶಾದಿಷು ಭಾಜ್ಯಃ ಪುದ್ಗಲಾನಾಂ || ೧೪ ||

ಟೀ || ಏಕ ಪ್ರದೇಶಾದಿಷು - ಲೋಕಾಕಾಶದ ಒಂದು ಪ್ರದೇಶ ಮೊದಲಾದ್ದರಲ್ಲಿ, ಪುದ್ಗಲಾನಾಂ - ಪುದ್ಗಲ ದ್ರವ್ಯಗಳಿಗೆ (ಸ್ಥಾನವು), ಭಾಜ್ಯಃ-ವಿಕಲ್ಪಮಾಡತಕ್ಕದ್ದು ಅಂದರೆ-ಭಿನ್ನವಾಗಿ ಮಾಡತಕ್ಕದ್ದು ||

ತಾ||ಮೂರ್ತಿವುಳ್ಳವುಗಳಿಗೆ ಅವಗಾಹನಶಕ್ತಿಯುಸ್ವಭಾವವು|| ಸಂಖ್ಯೆಯು,ಅಸಂಖ್ಯೆಯು.ಅನಂತಗಳುಆದಂಥಾ ಪುದ್ಗಲ ಸ್ಕಂಧಗಳಿಗೆ ಒಂದು ಸಂಖ್ಯೆಯುಅಸಂಖ್ಯೆಯು ಪ್ರದೇಶಗಳಲ್ಲಿ ಅವಸ್ಥಾನವು ಆಗುತ್ತದೆ || ೧೪ ||

ಅ || ಜೀವಗಳಿಗೆ ಅವಗಾಹವನ್ನು ಹೇಳುತ್ತಾರೆ.

ಸೂ|| ಅಸಂಖ್ಯೇಯಾದಿಷು ಜೀವಾನಾಂ || ೧೫ ||

ಟೀ || ಅಸಂಖ್ಯೇಯಾದಿಷು - ಲೋಕದ ಅಸಂಖ್ಯೇಯು ಭಾಗ ಮೊದಲಾದವುಗಳಲ್ಲಿ, ಜೀವಾನಾಂ -ಜೀವಗಳಿಗೆ ಅವಗಾಹವು ಆಗುತ್ತೆ ||

ತಾ || ಲೋಕಾಕಾಶವನ್ನು ಅಸಂಖ್ಯಾತ ಭಾಗಮಾಡಿ ಅದರಲ್ಲಿ ಒಂದು ಭಾಗಕ್ಕೆ ಅಸಂಖ್ಯೇಯು ಭಾಗವೆಂದು ಹೆಸರು || ಸೂಕ್ಷ್ಮನಿಗೋದಲಬ್ಧ್ಯಪರ್ಯಾಪ್ತ ಜೀವನ ಜಘನ್ಯಾವಗಾಹವು ಘನಾಂಗುಲ ಸಂಖ್ಯೆಯು ಭಾಗ ಪ್ರಮಾಣವು || ಅದುಮೊದಲಾಗಿ, ಸರ್ವೋತ್ಕೃಷ್ಟವಾದ ಮಹಾ ಮತ್ಸ್ಯದ ಅವಗಾಹದ ವರಿವಿಗೂ || ಪ್ರದೇಶೋತ್ತರ ಕ್ರಮದಿಂದ ಬಂದ ಸಮುಸ್ತಾವಗಾಹದ ವಿಕಲ್ಪಗಳೆಲ್ಲವೂ ಲೋಕದ ಸಂಖ್ಯೆಯು ಭಾಗಗಳು. ಕೇವಲ ಸಮುದ್ಘಾತದಲ್ಲಿ ದಂಡ ಕವಾಟದಲ್ಲಿ ಲೋಕದ ಸಂಖ್ಯೇಯಭಾಗವೇಯೇ-ಪ್ರತರೆಯಲ್ಲಿಲೋಕದಸಂಖ್ಯಾತಬಹುಭಾಗವು, ಪೂರಣೆಯಲ್ಲಿ ಸರ್ವಲೋಕವು ಅವಗಾಹ ವಾಗುತ್ತಿದೆ || ೧೫ ||

ಅ || ಜೀವನು ಸೂಕ್ಷ್ಮ ಶರೀರದಲ್ಲೂ ಸ್ಥೂಲ ಶರೀರದಲ್ಲೂ ಇರುತ್ತಾನೆಂದು ಹೇಳುತ್ತಾರೆ.

ಸೂ || ಪ್ರದೇಶ ಸಂಹಾರ ವಿಸರ್ಪಾಭ್ಯಾಂ ಪ್ರದೀಪವತ್ || ೧೬ ||

ಟೀ || ಪ್ರದೇಶ ಸಂಹಾರ ವಿಸರ್ಪಾಭ್ಯಾಂ - ಪ್ರದೇಶ - ಪರಮಾಣು ಮಾತ್ರವಾದ(ಪ್ರದೇಶದ,) ಸಂಹಾರ-ಸಂಕೋಚಮಾಡುವದು, ವಿಸರ್ಪಾಭ್ಯಾಂ - ಹರಡೋಣವು (ವಿಸ್ತಾರವು) ಇವುಗಳ ದೆಶೆಯಿಂದ, ಪ್ರದೀಪವತ್ - ದೀಪದ ಬೆಳಕಿನಂತೆ ಆಗುತ್ತದೆ ||

ತಾ || ಜೀವನು ಸೂಕ್ಷ್ಮ ಶರೀರ ನಾಮ ಕರ್ಮೋದಯದಿಂದ ಸೂಕ್ಷ್ಮವಾದ ಶರೀರವನ್ನು, ಬಾದರ ಶರೀರ ನಾಮ ಕರ್ಮೋದಯದಿಂದ ದೊಡ್ಡ ಶರೀರವನ್ನು ಪಡೆಯುತ್ತಾನೆ || ನೀರಿನಲ್ಲಿ ಹಾಕಿದ ಎಣ್ಣೆಯಂತೆ ಪ್ರದೇಶಗಳು ಪ್ರಸರಿಸುವದು ಸಂಕೋಚ ವಾಗುವದು ಸಹ ಆಗುತ್ತೆ || ಮತ್ತು || ದೀಪವನ್ನು ಸಣ್ಣಪಾತ್ರೆಯಲ್ಲಿಟ್ಟರೆ ಅದರ ಬೆಳಕು ಆಪಾತ್ರೆಯಲ್ಲೀ ಇರುತ್ತೆ. ದೊಡ್ಡ ಪಾತ್ರೆಯಲ್ಲಿಟ್ಟರೆ ಆಪಾತ್ರೆಯ ವಿಸ್ತಾರವೆಷ್ಟಿದೆಯೋ ಅಷ್ಟು ಸ್ಥಳವನ್ನು ವ್ಯಾಪಿಸಿಕೊಂಡಿರುತ್ತದೆ||೧೬

## ಉ ಪ ಕಾ ರಾ ಧಿ ಕ ರ ಣ ೦.

ಅ || ಧರ್ಮಾಧರ್ಮಗಳ ಉಪಕಾರವನ್ನು ಹೇಳುತ್ತಾರೆ.

ಸೂ || ಗತಿಸ್ಥಿತ್ಯುಪಗ್ರಹೌ ಧರ್ಮಾಧರ್ಮಯೋರುಪಕಾರಃ ||

ಟೀ || ಗತಿಸ್ಥಿತ್ಯುಪಗ್ರಹೌ - ಗತಿ - ಗತ್ಯುಪಗ್ರಹವು, ಸ್ಥಿತ್ಯುಪಗ್ರಹೌ - ಸ್ಥಿತ್ಯುಪಗ್ರಹವು ಇವುಗಳು, ಧರ್ಮಾಧರ್ಮಯೋಃ - ಧರ್ಮ ದ್ರವ್ಯ ಅಧರ್ಮ ದ್ರವ್ಯಗಳ, ಉಪಕಾರಃ - ಉಪಕಾರವು ||

ತಾ || ದೇಶಾಂತರ ಪ್ರಾಪ್ತಿಗೆ ಕಾರಣ ವಾದದ್ದು ಗತಿ ಎಂಬುವದು || ಅದಕ್ಕೆ ವಿರೋಧವಾದದ್ದು ಸ್ಥಿತಿ ಯೆಂಬುವದು | ಜೀವ ಪುದ್ಗಲಗಳ ಸಂಚಾರಕ್ಕೆ ಧರ್ಮದ್ರವ್ಯ ಸಹಕಾರಿಯು || ಜೀವ ಪುದ್ಗಲಗಳ ಸ್ಥಿತಿಗೆ ಅಧರ್ಮ ದ್ರವ್ಯ ಸಹಕಾರಿಯು || ಆದರೆ ಇವುಗಳು ಪ್ರೇರಣೆಮಾಡುವದಿಲ್ಲ. ಹ್ಯಾಗೆಂದರೆ? ಮೀನಿನಸಂಚಾರಕ್ಕೆ ನೀರು, ಹೋಗುವಕುದುರೆನಿಲ್ಲುವದಕ್ಕೆ ಭೂಮಿಯುಇರುವಂತೆಇವೆ||ಧರ್ಮಾಧರ್ಮಗಳುಪಕಾರರೂಪಕಾರ್ಯ ವಿಶೇಷದಿಂದ ಅಸ್ತಿತ್ವಸಿದ್ಧಿ ಯಾಗುತ್ತದೆ || ೧೭ ||

ಅ || ಆಕಾಶದ ಉಪಕಾರವನ್ನು ಹೇಳುತ್ತಾರೆ.

ಸೂ || ಆಕಾಶಸ್ಯಾವಗಾಹಃ || ೧೮ ||

ಟೀ || ಆಕಾಶಸ್ಯ - ಆಕಾಶದ (ಉಪಕಾರವು) ಅವಗಾಹಃ - ಪ್ರದೇಶವನ್ನು ಕೊಡೋಣವೇಯೆ ಆಗುತ್ತದೆ ||

ತಾ || ಜೀವ ಪುದ್ಗಲವೊದಲಾದಷಡ್ದ್ರವ್ಯಗಳಿಗೆ ಪ್ರದೇಶವನ್ನು ಕೊಡುವದೇಯೆ ಆಕಾಶದ ಉಪಕಾರವು || ೧೮ ||

ಅ || ಪುದ್ಗಲ ದ್ರವ್ಯದ ಉಪಕಾರವನ್ನು ಹೇಳುತ್ತಾರೆ.

ಸೂ || ಶರೀರವಾಙ್ಮನಃ ಪ್ರಾಣಾಪಾನಾಃ ಪುದ್ಗಲಾನಾಂ || ೧೯ ||

ಟೀ || ಶರೀರ ವಾಙ್ಮನಃ ಪ್ರಾಣಾಪಾನಾಃ - ಶರೀರ - ಔದಾರಿಕಾದಿಶರೀರಗಳು, ವಾಕ್ - ಸತ್ಯಾದಿ ವಚನಗಳು, ಮನಃ - ಮನಸ್ಸು, ಪ್ರಾಣಪಾನಾಃ - ಉಚ್ಛ್ವಾಸನಿಚ್ಛ್ವಾಸಗಳು, ಪುದ್ಗಲಾನಾಂ - ಪುದ್ಗಲಗಳ ಉಪಕಾರವು ಆಗುತ್ತಿದೆ ||

ತಾ || ಶರೀರಾದಿಗಳು ಜೀವದ್ರವ್ಯಕ್ಕೆ ಉಂಟಾಗಿರುವದು ಪುದ್ಗಲ ದ್ರವ್ಯದಿಂದ ಆದಉಪಕಾರವು || ೧೯ ||

ಅ || ಸಂಸಾರದಲ್ಲಿ ಆದ ಸುಖಾದಿ ಕಾರ್ಯ್ಯವು ಪುದ್ಗಲ ದ್ರವ್ಯದ ಉಪಕಾರವೆಂದು ಹೇಳುತ್ತಾರೆ.

ಸೂ || ಸುಖದುಃಖ ಜೀವಿತ ಮರಣೋಪ ಗ್ರಹಾಶ್ಚ || ೨೦ ||

ಟೀ || ಸುಖದುಃಖ ಜೀವಿತ ಮರಣೋಪಗ್ರಹಾಶ್ಚ - ಸುಖ - ಸುಖವು, ದುಃಖ - ದುಃಖವು, ಜೀವಿತ - ಬದುಕೋಣವು, ಮರಣ - ಸಾವು, ಇವುಗಳು, ಉಪಗ್ರಹಾಶ್ಚ - ಉಪಕಾರಗಳು ||

ತಾ || ಸದ್ವೇದ್ಯಾಸದ್ವೇದ್ಯಾಯುಃಕರ್ಮಪುದ್ಗಲಗಳಿಂದಆದಉಪಕಾರವೇಸುಖದುಃಖಗಳು||ಚ ಶಬ್ದದಿಂದಕಾಂಸ್ಯಾದಿಗಳಿಗೆಭಸ್ಮಾದಿಗಳಿಂದಆ ದಉಪಕಾರವುಪುದ್ಗಲಗಳಿಗೆ ಪುದ್ಗಲಗಳಿಂದ ಆದ ಉಪಕಾರವು || ೨೦||

ಅ || ಜೀವಗಳ ಉಪಕಾರವನ್ನು ಹೇಳುತ್ತಾರೆ.

ಸೂ || ಪರಸ್ಪರೋಪ ಗ್ರಹೋ ಜೀವಾನಾಂ || ೨೧ ||

ಟೀ || ಜೀವನಾಂ - ಜೀವಗಳಿಗೆ, ಪರಸ್ಪರೋಪಗ್ರಹಃ - ಅನ್ಯೋನ್ಯ (ಒಂದುಜೀವದಿಂದ ಒಂದುಜೀವಕ್ಕೆ)ಉಪಕಾರವು ಆಗುತ್ತಿದೆ ||

ತಾ || ಸ್ವಾಮಿ ಭೃತ್ಯ - ಗುರು ಶಿಷ್ಯ - ಇವರು ಪರಸ್ಪರ ಉಪಕಾರಿಗಳಾಗುವಂತೆ ಜೀವಗಳು ಒಬ್ಬರಿಗೊಬ್ಬರು ಉಪಕಾರಿಗಳು || ೨೧ ||

ಅ || ಕಾಲದ್ರವ್ಯದ ಉಪಕಾರವನ್ನು ಹೇಳುತ್ತಾರೆ.

ಸೂ || ವರ್ತನಾಪರಿಣಾಮಕ್ರಿಯಾಃ ಪರತ್ವಾಪರತ್ವೇ ಚ ಕಾಲಸ್ಯ ||

ಟೀ || ವರ್ತನಾಪರಿಣಾಮಕ್ರಿಯಾಃ - ವರ್ತನಾ - ಷಡ್ದ್ರವ್ಯಪರ್ಯಾಯ ಪರಿಣತಿರೂಪ ವರ್ತನೆಯು, ಪರಿಣಾಮ - ಕ್ರೋಧಾದಿ ವರ್ಣಾದಿ ಪರಿಣಾಮವು, ಕ್ರಿಯಾಃ - ಪರಸ್ಪರ ಆತ್ಮನ ಕ್ರಿಯೆಯು, ಪರತ್ವಾಪರತ್ವೇಚ- ಕ್ಷೇತ್ರ ಕಾಲಕೃತ ದೂರ ಸಮೀಪಾದಿ ರೂಪ ಪೂರ್ವಾಪರಭಾವವು, ಕಾಲಸ್ಯ - ಕಾಲದ್ರವ್ಯದಿಂದ ಮಾಡಿದ ಉಪಕಾರವಾಗುತ್ತೆ ||

ತಾ || ದ್ರವ್ಯದಲ್ಲಿ ಪರ್ಯಾಯವು ಇರುತ್ತದೆ. ಆ ಪರ್ಯಾಯವನ್ನು ಕಾಲವು ಯಿರುವಹಾಗೆ ಮಾಡಿಸುವಂಥಾದ್ದಾದ ಕಾರಣ ವರ್ತನಾಲಕ್ಷಣದಿಂದ ಕೂಡಿದ್ದು ಕಾಲವು|| ಆಕಾಲವೇ ಸಮಯಾದಿಗಳು |ಜೀವನ ಕ್ರೋಧಾದಿ ಪರಿಣಾಮವು, ಪುದ್ಗಲದ್ರವ್ಯದ ವರ್ಣಾದಿ ಪರಿಣಾಮವು, ಧರ್ಮಾಧರ್ಮಾಕಾಶದ್ರವ್ಯಗಳ ಅಗುರು ಲಘು ಗುಣಗಳವೃದ್ಧಿ ಹಾನಿ ಶ್ರವವು|ಇವುಗಳೆಲ್ಲಾ ಪರಿಣಾಮವು|| ಚಲನಾತ್ಮಕ ವಾದಂಥಾದ್ದೇಯೇಕ್ರಿಯೆಯು. ಆ ಕ್ರಿಯೆಯು ೨ ಪ್ರಕಾರವು || ಜ್ಯೇಷ್ಠನಲ್ಲಿ ಕಾಲಕೃತ ಪರತ್ವವು, ಕನಿಷ್ಠನಲ್ಲಿ ಕಾಲಕೃತ ಅಪರತ್ವವು, ಇವುಗಳೆಲ್ಲಾ ಕಾಲಕೃತ ಉಪಕಾರಗಳಾಗಿ ತಿಳಿಯುವದು || ಆಕಾಲವು ಪರಮಾರ್ಥಕಾಲವೆಂತಲೂ ವ್ಯವಹಾರಕಾಲವೆಂತಲೂ ಎರಡು ವಿಧವು || ವರ್ತನಾ ಲಕ್ಷಣದಿಂದ ಕೂಡಿದ್ದು ಪರಮಾರ್ಥಕಾಲವು || ಪರಿಣಾಮಾದಿ ಲಕ್ಷಣದಿಂದ ಕೂಡಿದ್ದು ವ್ಯವಹಾರ ಕಾಲವು || ಆ ವ್ಯವಹಾರ ಕಾಲವು ಭೂತ, ವರ್ತಮಾನ, ಭವಿಷತ್ ಎಂದು ೩ ಪ್ರಕಾರವು ಆಗುತ್ತದೆ || ೨೨ ||

ಪುದ್ಗಲಸಾಮಾನ್ಯಲಕ್ಷಣಾಧಿಕಾರಂ.

ಅ || ಪುದ್ಗಲಗಳಿಗೆ ಸಾಮಾನ್ಯ ಲಕ್ಷಣವನ್ನು ಹೇಳುತ್ತಾರೆ.

ಸೂ || ಸ್ಪರ್ಶರಸಗಂಧವರ್ಣವಂತಃ ಪುದ್ಗಲಾಃ || ೨೩ ||

ಟೀ || ಸ್ಪರ್ಶ ರಸ ಗಂಧ ವರ್ಣವಂತಃ - ಸ್ಪರ್ಶ = ಕರ್ಕಶ- ಮೃದು - ಗುರು - ಲಘು - ಶೀತ - ಉಷ್ಣ - ಸ್ನಿಗ್ಧ - ರೂಕ್ಷ - ಎಂಬ ಎಂಟು ಸ್ಪರ್ಶಗಳು, ರಸ - ತಿಕ್ತ - ಕಟು - ಕಷಾಯ - ಆಮ್ಲ - ಮಧುರ ಎಂಬ ಐದುರಸಗಳು,ಗಂಧ-ಸುಗಂಧ-ದುರ್ಗಂಧವೆಂಬ ಎರಡು ಗಂಧಗಳು,

ವರ್ಣವಂತಃ-ಕೃಷ್ಣ ನೀಲ-ರುಧಿರ - ಪೀತ-ಶುಕ್ಲವೆಂಬ ಐದುವರ್ಣಗೆ ಳು ಇವುಗಳುಳ್ಳಂಥಾವುಗಳು, ಪುದ್ಗಲಾಃ - ಪುದ್ಗಲಗಳು ಆಗುತ್ತವೆ ||

ಅ || ಪುದ್ಗಲದ್ರವ್ಯದ ಪರ್ಯಾಯವನ್ನು ಹೇಳುತ್ತಾರೆ.

ಸೂ || ಶಬ್ದಬಂಧಸೌಕ್ಷ್ಮ್ಯಸ್ಥೌಲ್ಯಸಂಸ್ಥಾನಭೇದತಮ ಚ್ಛಾಯಾತಪೋದ್ಯೋತವಂತಶ್ಚ || ೨೪ ||

ಟೀ || ಶಬ್ದಬಂಧಸೌಕ್ಷ್ಮ್ಯಸ್ಥೌಲ್ಯಸಂಸ್ಥಾನಭೇದತಮಚ್ಛಾಯಾತಪೋದ್ಯೋತವಂತಶ್ಚ-ಶಬ್ದ-ಶಬ್ದವು, ಬಂಧ-ಬಂಧವು, ಸೌಕ್ಷ್ಮ್ಯ ಸೂಕ್ಷ್ಮತ್ವವು, ಸ್ಥೌಲ್ಯ-ಸ್ಥೂಲತ್ವವು, ಸಂಸ್ಥಾನ-ಸಂಸ್ಥಾನವು, ಭೇದ-ಭೇದವು, ತಮಃ-ಕತ್ತಲೆಯು, ಛಾಯಾ-ನೆಳಲು, ಆತಪ-ಬಿಸಲು, ಉದ್ಯೋತವಂತಶ್ಚ -ಪ್ರಕಾಶವು ಇವುಗಳುಳ್ಳಂಥಾವುಗಳು, (ಪುದ್ಗಲದ್ರವ್ಯಗಳು ಆಗುತ್ತವೆ )|| ತಾ || ಶಬ್ದವು ಭಾಷಾತ್ಮಕ ಅಭಾಷಾತ್ಮಕವೆಂದು ಎರಡುಭೇದವು || ಭಾಷಾತ್ಮಕವು ಸಾಕ್ಷರ-ಅನಕ್ಷರದಿಂದ ಎರಡುಪ್ರಕಾರವು || ವೈಶ್ರಸಿಕ ಪ್ರಯೋಗಿಕವೆಂದು ಬಂಧ ಎರಡುಪ್ರಕಾರವು || ಅಂತ್ಯಸೌಕ್ಷ್ಮ್ಯ - ಆಪೇಕ್ಷಿಕಸೌಕ್ಷ್ಮ್ಯವೆಂದು ಸೌಕ್ಷ್ಮ್ಯವು ಎರಡುಪ್ರಕಾರವು || ಅಂತ್ಯಸ್ಥೌಲ್ಯ ಆಪೇಕ್ಷಿಕಸ್ಥೌಲ್ಯವೆಂದು ಸ್ಥೌಲ್ಯ ಎರಡುಪ್ರಕಾರವು || ಇತ್ಥಂಲಕ್ಷಣವೆಂತಲೂ, ಅನಿತ್ಥಂಲಕ್ಷಣವೆಂತಲೂ, ಸಂಸ್ಥಾನ ಎರಡುಭೇದವು || ಉತ್ಕರ, ಚೂರ್ಣ, ಖಂಡ, ಚೂರ್ಣಿಕ,ಪ್ರತರ, ಅಣುಚಟನ,ಎಂದುಭೇದವು ಆರು ಪ್ರಕಾರವು||ಪ್ರಕಾಶವನ್ನು ನಿರೋಧಿಸುವದು ತಮಸ್ಸು ವರ್ಣಾದಿವಿಕಾರಗಳಿಂದ ಪರಿಣತವಾದಂಥಾದ್ದು ಒಂದು-ಪ್ರತಿಬಿಂಬಮಾತ್ರತಚ್ಛಾಯಾಒಂದು, ಅಂತುಛಾಯೆ ಎರಡುಪ್ರಕಾರವು || ಆತಪವು ಆದಿತ್ಯನಿಮಿತ್ತವಾದ ಉಷ್ಣಪ್ರಕಾಶಲಕ್ಷಣವು|| ಚಂದ್ರ,ಮಣಿ,ಖದ್ಯೋತ ಮೊದಲಾದವುಗಳಲ್ಲಿ ಉಂಟಾಗುವಪ್ರಕಾಶವು ಉದ್ಯೋತವೆಂಬುವದು||ಇವುಗಳೆಲ್ಲಾ ಪುದ್ಗಲದ್ರವ್ಯಗಳೆ || ೨೪||

ಅ || ಪುದ್ಗಲಗಳ ಭೇದವನ್ನು ಹೇಳುತ್ತಾರೆ.

ಸೂತ್ರ || ಅಣವಃ ಸ್ಕಂಧಾಶ್ಚ || ೨೫ ||

ಟೀ || ಅಣವಃ-ಪರಮಾಣುಗಳು, ಸ್ಕಂಧಾಶ್ಚ - ಸ್ಕಂಧಗಳೂಕೂಡ ಇಂತೆಂದು ಪುದ್ಗಲಗಳು ಎರಡು ಪ್ರಕಾರವು || ೨೫||

ತಾ ॥ ಪುದ್ಗಲಗಳು ಪರಮಾಣುವೆಂತಲೂ, ಸ್ಕಂಧವೆಂತಲೂ, ಎರಡುಪ್ರಕಾರವು ॥ ಗ್ರಂಥಾಂತರದಲ್ಲಿ ಪುದ್ಗಲದ್ರವ್ಯವು (೧) ಸೂಕ್ಷ್ಮಸೂಕ್ಷ್ಮ (೨) ಸೂಕ್ಷ್ಮ (೩) ಸೂಕ್ಷ್ಮಸ್ಥೂಲ (೪) ಸ್ಥೂಲಸೂಕ್ಷ್ಮ (೫) ಸ್ಥೂಲ (೬) ಸ್ಥೂಲಸ್ಥೂಲ ಈ ೬ ಪ್ರಕಾರವೆಂದು ಹೇಳಲ್ಪಡುತ್ತದೆ ॥ ೨೫ ॥

ಅ ॥ ಸ್ಕಂಧಗಳ ಉತ್ಪತ್ತಿಯನ್ನು ಹೇಳುತ್ತಾರೆ.

ಸೂ ॥ ಭೇದಸಂಘಾತೇಭ್ಯ ಉತ್ಪದ್ಯಂತೇ ॥ ೨೬ ॥

ಟೀ ॥ ಭೇದಸಂಘಾತೇಭ್ಯಃ-ಭೇದ-ವಿಭಾಗವು, ಸಂಘಾತೇಭ್ಯಃ-ಸಮೂಹವುಇವುಗಳದೆಶೆಯಿಂದ, ಉತ್ಪದ್ಯಂತೆ-ಸ್ಕಂಧಗಳುಉಂಟಾಗುತ್ತವೆ॥

ತಾ ॥ ಎರಡುಪರಮಾಣು ಮೊದಲಾಗಿ ಸಂಖ್ಯಾತ, ಅಸಂಖ್ಯಾತ, ಅನಂತಪರಮಾಣು ಪಟ್ಟಾಗಿಸೇರಿದರೆ ಅದಕ್ಕೆ ಸ್ಕಂಧವೆಂದು ಹೆಸರು. ಎರಡುಪರಮಾಣುವಿಗೆ ಹೆಚ್ಚಿರುವಸ್ಕಂಧವನ್ನು ವಿಭಾಗಮಾಡಿದರೆ ಆದು ಸ್ಕಂಧವು- ಎರಡು ಪರಮಾಣುವಿಗಿಂತ ಕಮ್ಮಿಯಿಲ್ಲದಿದ್ದರೆ ಅದಕ್ಕೂ ಸ್ಕಂಧವೆಂತಲೇ ಹೆಸರು ॥ ೨೬ ॥

ಅ ॥ ಪರಮಾಣು ಉತ್ಪತ್ತಿಯನ್ನು ಹೇಳುತ್ತಾರೆ.

ಸೂ ॥ ಭೇದಾದಣುಃ ॥ ೨೭ ॥

ಟೀ ॥ ಭೇದಾತ್-ಭೇದದ್ದೆಶೆಯಿಂದ, ಅಣುಃ-ಪರಮಾಣು ಉಂಟಾಗುತ್ತದೆ ॥

ತಾ ॥ ಭೇದದಿಂದ ಅಣುಆಗುತ್ತಲ್ಲದೆ ಸಂಘಾತದಿಂದ ಆಗುವದಿಲ್ಲ ॥

ಅ ॥ ಭೇದ ಸಂಘಾತಗಳಿಂದ ಪ್ರಯೋಜನವನ್ನು ಹೇಳುತ್ತಾರೆ.

ಸೂ ॥ ಭೇದಸಂಘಾತಾಭ್ಯಾಂ ಚಾಕ್ಷುಷಃ ॥ ೨೮ ॥

ಟೀ ॥ ಭೇದಸಂಘಾತಾಭ್ಯಾಂ-ಭೇದ-ವಿಭಾಗವು, ಸಂಘಾತ-ಸಮೂಹವು ಇವುಗಳಿಂದ, ಚಾಕ್ಷುಷಃ-ಕಣ್ಣಿಗೆಕಾಣುವ ಸ್ಕಂಧವಾಗುತ್ತದೆ ॥

ತಾ ॥ ಭೇದವು ಸಂಘಾತವು ಇರುವ ಪುದ್ಗಲಸ್ಕಂಧವು ಕಣ್ಣಿಗೆ ಕಾಣುತ್ತದೆ ॥ ೨೮ ॥

ದ್ರವ್ಯಲಕ್ಷಣಾಧಿಕರಣಂ.

ಅ ॥ ಧರ್ಮಾದಿದ್ರವ್ಯಗಳಿಗೆ ಸಾಮಾನ್ಯಲಕ್ಷಣವನ್ನು ಹೇಳುತ್ತಾರೆ.

ಸೂ ॥ ಸದ್ದ್ರವ್ಯಲಕ್ಷಣಂ ॥ ೨೯ ॥

ಟೀ ॥ ಸತ್-ಅಸ್ತಿತ್ವವು, ದ್ರವ್ಯಲಕ್ಷಣಂ - ದ್ರವ್ಯಗಳಿಗೆ ಲಕ್ಷಣವು. ಅಸ್ತಿತ್ವವೇ ಷಡ್ದ್ರವ್ಯಗಳಿಗೆ ಸಾಮಾನ್ಯಲಕ್ಷಣವು ॥ ೨೯ ॥

ಸ ಲ್ಲ ಕ್ಷ ಣಾ ಧಿ ಕ ರ ಣ ಂ.

ಅ ॥ ಸತ್ ಎಂಬ ಪದದ ಅರ್ಥವನ್ನು ಹೇಳುತ್ತಾರೆ.

ಸೂ ॥ ಉತ್ಪಾದವ್ಯಯಧ್ರೌವ್ಯಯುಕ್ತಂ ಸತ್ ॥ ೩೦ ॥

ಟೀ ॥ ಉತ್ಪಾದವ್ಯಯಧ್ರೌವ್ಯಯುಕ್ತಂ-ಉತ್ಪಾದ-ಚೇತನಾಚೇತನದ್ರವ್ಯದ ಸ್ವಜಾತಿಯನ್ನು ಬಿಡದೆ ಕಾರಣವಶದಿಂದ ಭವಾಂತರಪ್ರಾಪ್ತಿಯರೂಪಿನ ಉತ್ಪತ್ತಿಯು, ವ್ಯಯ-ಪೂರ್ವಭವಪರಿತ್ಯಾಗರೂಪವಾದ ವ್ಯಯವು, ಧ್ರೌವ್ಯ-ಅನಾದಿಪಾರಿಣಾಮಿಕಸ್ವಭಾವದಿಂದಆದ ಉತ್ಪಾದವ್ಯಯಭಾವರೂಪವಾದ ಧ್ರೌವ್ಯವು ಎಂಬುವ ಇವರೊಳಗೆ, ಯುಕ್ತಂ ಕೂಡಿರುವದು, ಸತ್-ಸತ್ತೆಂಬುವದು ಆಗುತ್ತೆ ॥

ತಾ ॥ ಸತ್ಎಂದರೆ ವಸ್ತುವಿಗೆ ಶಾಶ್ವತವು ॥ ಗಡಿಗೆಪರ್ಯಾಯದಂತೆ ನಿಮಿತ್ತವಶದಿಂದ ತಂಮಜಾತಿಯನ್ನು ಬಿಡದೇಚೇತನಾಚೇತನದ್ರವ್ಯದ ಮತ್ತೊಂದು ಪರ್ಯಾಯವನ್ನು ಪಡೆಯುವದಕ್ಕೆ ಉತ್ಪಾದವೆಂದು ಹೆಸರು ॥ ಮಣ್ಣು ಹೆಂಟೆಗೆ ಘಟಪರ್ಯಾಯದೋಪಾದಿಯಲ್ಲಿ ದ್ರವ್ಯಕ್ಕೆ ಪೂರ್ವಪರ್ಯಾಯ ನಾಶವೇ ವ್ಯಯವೆಂಬುವದು ॥ ಗಡಿಗೆಯಾಗಿರುವಾಗಲೂ, ಮಣ್ಣುಹೆಂಟೆಯಾಗಿರುವಕಾಲದಲ್ಲೂ ಮಣ್ಣು (ಮೃದ್ದ್ರವ್ಯವು) ಹ್ಯಾಗೆಸ್ಥಿರೀಭೂತವ್ವೋ ಹಾಗೆ ದ್ರವ್ಯದ ಸ್ಥಿರತ್ವವೇಯೇ ಧ್ರೌವ್ಯಎಂಬುವದು ಆಗುತ್ತೆ. ಇವುಗಳೊಡನೆ ಕೂಡಿರುವಂಥಾದ್ದುಯಾವದೋ ಅದೇ ಸತ್ ಎಂಬುವದು ಎಂದು ತಿಳಿಯುವದು ॥ ೩೦ ॥

ನಿ ತ್ಯಾ ಧಿ ಕ ರ ಣ ಂ.

ಅ ॥ ನಿತ್ಯದ ಲಕ್ಷಣವನ್ನು ಹೇಳುತ್ತಾರೆ.

ಸೂ ॥ ತದ್ಭಾವಾವ್ಯಯಂ ನಿತ್ಯಂ ॥ ೩೧ ॥

ಟೀ ॥ ತತ್ಭಾವಾವ್ಯಯಂ-ತದ್ಭಾವ- ಪ್ರತ್ಯಭಿಜ್ಞಾನಕಾರಣವಾದ ಸ್ವರೂಪದಿಂದ, ಅವ್ಯಯಂ-ನಾಶವಿಲ್ಲದೇಇರುವದೇಯೇ, ನಿತ್ಯಂ-ನಿತ್ಯವಾದಂಥಾದ್ದು ॥

ತಾ ॥ ಅದೇಯೋಯಿದು ಎಂಬುವದು ಪ್ರತಿಜ್ಞಾನವೆಂಬುವದು॥ ಯಾವಸ್ವರೂಪದಿಂದ ವಸ್ತುಕಾಣಲ್ಪಟ್ಟಿತೋ ಆ ಸ್ವರೂಪದಿಂದಲೇ ಮತ್ತೂ ಇರುವದ್ದರಿಂದ ಅದೇಯಿದು ಇಂತೆಂದು ಸ್ಮರಣವಿಷಯುವಾಗುತ್ತಾ ಇರುವದೇ ,,ಪ್ರತ್ಯಭಿಜ್ಞಾನ,, ವೆಂಬುವದು ॥ ಈ ಪ್ರತ್ಯಭಿಜ್ಞಾನದಲ್ಲಿ ವಸ್ತುಸ್ವರೂಪವಾದಂಥಾದ್ದು ತದ್ಭಾವವು ॥ ಈ ತದ್ಭಾವದಿಂದನಾಶವಿಲ್ಲದೇಯಿರುವದುಯಾವದೋ ಅದೇಯೋ ನಿತ್ಯವೆಂಬುವದು ॥ ಆ ನಿತ್ಯವು ಕಥಂಚಿತ್ತಾಗಿ ತಿಳಿಯತಕ್ಕದ್ದು ॥ ಸರ್ವಥಾನಿತ್ಯತ್ವಅಂಗೀಕಾರಮಾಡಿದರೆ ಮತ್ತೊಂದುಪ್ರಕಾರವಾಗಿ ಪದಾರ್ಥವು ಆಗದೇಹೋದದ್ದರಿಂದ, ಸಂಸಾರಕಾರಣವೂ, ಆ ಸಂಸಾರವಿನಾಶಕ್ರಿಯೆಯೂ ವಿರೋಧವಾಗುತ್ತದೆ. ಆದ್ದರಿಂದ ದ್ರವ್ಯಾಪೇಕ್ಷೆಯಿಂದ ನಿತ್ಯತ್ವವು. ಪರ್ಯಾಯಾಪೇಕ್ಷೆಯಿಂದ ಅನಿತ್ಯತ್ವವು ಆಗುತ್ತದೆ ॥ ೩೧ ॥

ಅ ॥ ನಿತ್ಯಾನಿತ್ಯತ್ವ ವಿರೋಧವಿಲ್ಲವೆಂದು ಹೇಳುತ್ತಾರೆ.

ಸೂ ॥ ಅರ್ಪಿತಾನರ್ಪಿತಸಿದ್ಧೇಃ ॥ ೩೨ ॥

ಟೀ ॥ ಅರ್ಪಿತಾನರ್ಪಿತಸಿದ್ಧೇಃ-ಅರ್ಪಿತ-ಪ್ರಾಧಾನ್ಯ (ವಿವಕ್ಷಿತ)ವು, ಅನರ್ಪಿತ- ಅಪ್ರಾಧಾನ್ಯ(ಅವಿವಕ್ಷಿತ ) ವೆಂಬುವ ಎರಡರಿಂದ, ಸಿದ್ಧೇಃ-ನಿತ್ಯಾನಿತ್ಯ ಸಿದ್ಧಿಯಪೇಕ್ಷೆಯಿಂದ ವಸ್ತುವನೈಕಾಂತಿಕವೆಂದು ತಿಳಿಯುವದು ॥

ತಾ ॥ ಅನೇಕಧರ್ಮಾತ್ಮಕವಾಗಿರುವಂಥಾ ವಸ್ತುವಿನ ಯಾವದಾದರು ಒಂದುಧರ್ಮದ ತಾತ್ಪರ್ಯದಿಂದ ಪ್ರಾಧಾನ್ಯವಾಗಿ ಯಿರೋಣವೇಯೋ ,,ಅರ್ಪಿತ,, ವೆಂಬುವದು ॥ ಯಿರುವಂಥಾಧರ್ಮವಾದಾಗ್ಯೂ ಪ್ರಯೋಜನವಿಲ್ಲದಪೇಕ್ಷೆಯಿಂದ ಅಮುಖ್ಯವಾದಂಥಾದ್ದು ಯಾವದುಂಟೋ ಅದೇಯೋ ,, ಅನರ್ಪಿತ ,, ವೆಂಬುವದು ॥ ಆ ಅರ್ಪಿತ-ಅನರ್ಪಿತ ಈ ಎರಡು ಕಾರಣಗಳಿಂದ ನಿತ್ಯ-ಅನಿತ್ಯ ಸಿದ್ಧಕಾರಣವಾಗುವದ್ದರಿಂದ ವಿರೋಧವಿಲ್ಲವು ॥ ಉದಾಹರಣೆ ॥ ಒಬ್ಬದೇವದತ್ತನಿಗೆ ಪಿತಾಪುತ್ರಭ್ರಾತೃಭಾಗಿನೇಯನೆಂಬುವಂಥಾ ಸಂಬಂಧವು ಜನಕತ್ವ ಜನ್ಯತ್ವವೊದಲಾದ ನಿಮಿತ್ತಗಳುಳ್ಳಂಥಾದ್ದಾಗಿ ವಿರೋಧವಾಗುವದಿಲ್ಲ. ಹ್ಯಾಗಂದರೆ, ಮಗನಅಪೇಕ್ಷೆಯಿಂದ ಪಿತೃವೆಂಬುವಂಥಾ ವ್ಯವಹಾರವೂ, ತಂದೆಯ ಅಪೇಕ್ಷೆಯಿಂದ ಮಗನೆಂಬುವವ್ಯವಹಾರವೂ, ಅಣ್ಣನ ಅಪೇಕ್ಷೆಯಿಂದ

ತ್ರವನ್ನು, ತಮ್ಮನ ಅಪೇಕ್ಷೆಯಿಂದ ಅಣ್ಣನು ಎಂಬುವವ್ಯವಹಾರವು ಒಬ್ಬ ದೇವದತ್ತನಿಗೆ ಅರ್ಪಣಾಭೇದದಿಂದ ಹ್ಯಾಗೆವಿರೋಧವಿಲ್ಲವೋ ಹಾಗೆ ದ್ರವ್ಯಗಳಿಗೆ ಅರ್ಪಣಾಭೇದದಿಂದ ನಿತ್ಯಾನಿತ್ಯವು ವಿರೋಧವಿಲ್ಲವು॥೩೨॥

ಬಂಧಾಧಿಕರಣಂ.

ಅ ॥ ಪರಮಾಣುಗಳಿಗೆ ಬಂಧಲಕ್ಷಣವನ್ನು ಹೇಳುತ್ತಾರೆ.

ಸೂ ॥ ಸ್ನಿಗ್ಧರೂಕ್ಷತ್ವಾದ್ಬಂಧಃ ॥ ೩೩ ॥

ಟೀ ॥ ಸ್ನಿಗ್ಧರೂಕ್ಷತ್ವಾತ್-ಸ್ನಿಗ್ಧ - ಜಿಗಟಾದಸ್ಪರ್ಶಲಕ್ಷಣವಾದ ಗುಣವು, ರೂಕ್ಷತ್ವಾತ್-ಬರಸಾದಸ್ಪರ್ಶಲಕ್ಷಣವಾದ ಗುಣವು, ಇವುಗಳದೆಸೆಯಿಂದ, ಬಂಧಃ-ಬಂಧವು ಆಗುತ್ತಾಯಿದೆ ॥

ತಾ ॥ ಸ್ನಿಗ್ಧರೂಕ್ಷಗಳಾದ ಎರಡುಪರಮಾಣುಗಳು ಪರಸ್ಪರವಾಗಿ ಸೇರಿದರೆ ದ್ವ್ಯಣುಕವಾದಂಥಾ ಸ್ಕಂಧವುಂಟಾಗುತ್ತದೆ. ಈ ಪ್ರಕಾರವಾಗಿ ಸಂಖ್ಯೇಯ-ಅಸಂಖ್ಯೇಯ- ಅನಂತಪ್ರದೇಶಗಳುಳ್ಳಂಥಾಸ್ಕಂಧಗಳನ್ನು ತಿಳಿಯುವದು ॥ ೩೩ ॥

ಅ ॥ ಪರಮಾಣುಗಳಿಗೆ ಬಂಧವಾಗದೇಯಿರುವದನ್ನು ಹೇಳುತ್ತಾರೆ.

ಸೂ ॥ ನ ಜಘನ್ಯಗುಣಾನಾಂ ॥ ೩೪ ॥

ಟೀ ॥ ಜಘನ್ಯಗುಣಾನಾಂ-ಜಘನ್ಯಗುಣವಿರುವ ಪರಮಾಣುಗಳಿಗೆ, ನ-ಬಂಧವಿಲ್ಲವು ॥

ತಾ ॥ ಏಕಗುಣಸ್ನಿಗ್ಧಪರಮಾಣುವಿಗೆ ಏಕಗುಣಸ್ನಿಗ್ಧವಾದ ಪರಮಾಣುವಿನಿಂದಲೂ, ದ್ವ್ಯಾದಿ-ಸಂಖ್ಯೇಯ- ಅಸಂಖ್ಯೇಯ- ಅನಂತಗುಣಸ್ನಿಗ್ಧ ಪರಮಾಣುವಿನಿಂದಲೂ, ಬಂಧವಿಲ್ಲವು. ಏಕಗುಣಸ್ನಿಗ್ಧಪರಮಾಣುವಿಗೆ, ಏಕಗುಣರೂಕ್ಷವಾದ ಪರಮಾಣುವಿನಿಂದ ಮತ್ತೂದ್ವ್ಯಾದಿ, ಸಂಖ್ಯೇಯಾಸಂಖ್ಯೇಯಾನಂತಗುಣ ಸ್ನಿಗ್ಧಪರಮಾಣುವಿನಿಂದಲೂ ಬಂಧವಾಗುವದಿಲ್ಲ. ಇದೇಪ್ರಕಾರ ರೂಕ್ಷಪರಮಾಣುವಿಗೂ ತಿಳಿಯುವದು ॥ ೩೪ ॥

ಅ ॥ ಗುಣಸಾಮ್ಯದಲ್ಲಿ ಬಂಧವಾಗುವದಿಲ್ಲವೆಂದು ಹೇಳುತ್ತಾರೆ.

ಸೂ ॥ ಗುಣಸಾಮ್ಯೇ ಸದೃಶಾನಾಂ ॥ ೩೫ ॥

ಟೀ ॥ ಗುಣಸಾಮ್ಯೇ-ಸಮಾನವಾದ ಗುಣವಲ್ಲಿಯೂ, ಸದೃಶಾನಾಂ-ಸ್ನಿ

ಗ್ಧರೂಕ್ಷ ಜಾತಿತ್ವದಿಂದ,ಸಮಾನಪಾದಪರಮಾಣುಗಳಿಗೂಬಂಧವಿಲ್ಲವು ||

ತಾ || ದ್ವಿಗುಣಸ್ನಿಗ್ಧ ಪರಮಾಣುಗಳಿಗೆ ದ್ವಿಗುಣರೂಕ್ಷಪರಮಾಣುಗಳಿಂದಲೂ, ದ್ವಿಗುಣಸ್ನಿಗ್ಧಪರಮಾಣುಗಳಿಗೆ ದ್ವಿಗುಣಸ್ನಿಗ್ಧಪರಮಾಣುಗಳಿಂದಲೂ, ದ್ವಿಗುಣರೂಕ್ಷ ಪರಮಾಣುಗಳಿಗೆ ದ್ವಿಗುಣರೂಕ್ಷಪರಮಾಣುಗಳಿಂದಲೂ ಬಂಧವಾಗುವದಿಲ್ಲ || ೩೫ ||

ಅ || ಬಂಧವಾಗುವ ರೀತಿಯನ್ನು ಹೇಳುತ್ತಾರೆ.

ಸೂ || ದ್ವ್ಯಧಿಕಾದಿ ಗುಣಾನಾಂ ತು ||೩೬||

ಟೀ || ದ್ವ್ಯಧಿಕಾದಿ ಗುಣಾನಾಂತು - ದ್ವ್ಯಧಿಕಾದಿ - ಎರಡು ಅಧಿಕವಾದಂಥಾ, ಗುಣಾನಾಂತು - ಗುಣಗಳುಳ್ಳಂಥಾ ಪರಮಾಣುವಿಗೆ ಬಂಧವಾಗುತ್ತದೆ ||

ತಾ || ದ್ವಿಗುಣವಾದ ಪರಮಾಣುಗಳಿಗೆ ನಾಲ್ಕು ಗುಣದಿಂದ ದ್ವಿಗುಣವಾಗುವದ್ದರಿಂದ ದ್ವಿಕವೆಂಬುದು || ಆದಿಶಬ್ದಕ್ಕೆ ಪ್ರಕಾರಾರ್ಥವು|| ಸಮಾನ ಅಸಮಾನ ಜಾತೀಯುಗಳಾದಂಥಾ, ದ್ವ್ಯಧಿಕಾದಿಗಳಿಗೆ ಬಂಧವಾಗುತ್ತೆ ಉಳಿದವುಗಳಿಗೆ ಇಲ್ಲವು || ಹ್ಯಾಗೆಂದರೆ || ದ್ವಿಗುಣಸ್ನಿಗ್ಧಗಳಗೂ ಚತುರ್ಗುಣ ಸ್ನಿಗ್ಧ ಪರಮಾಣುವಿಗೂ ಬಂದವಾಗುತ್ತದೆ|| ಆದರೆ ದ್ವಿಗುಣ ಸ್ನಿಗ್ಧ ಪರಮಾಣುವಿಗೆ ಪಂಚಗುಣ ಷಟ್ - ಸಪ್ತ - ಅಷ್ಟ - ಸಂಖ್ಯೇಯಾಸಂಖ್ಯೇಯಾನಂತ ಸ್ನಿಗ್ಧ ಪರಮಾಣುವಿನಿಂದಲೂ ಬಂಧವಾಗುವದಿಲ್ಲ || ತ್ರಿಗುಣ ಸ್ನಿಗ್ಧ ಪರಮಾಣುವಿಗೆ ಪಂಚಗುಣ ಸ್ನಿಗ್ಧ ಪರಮಾಣುವಿನಿಂದ ಬಂಧವಾಗುತ್ತದೆ || ಇದೇಪ್ರಕಾರವಾಗಿ ರೂಕ್ಷ ಪರಮಾಣು ರೂಕ್ಷಪರಮಾಣುವಿಗೂ, ಪರಸ್ಪರವಾಗಿಯೂ ಬಂಧವಾಗುತ್ತದೆ||

ಅ || ಅಧಿಕ ಗುಣದಿಂದ ಬಂಧವನ್ನು ಹೇಳಿದ್ದಕ್ಕೆ ಕಾರಣವನ್ನು ಹೇಳುತ್ತಾರೆ.

ಸೂ || ಬಂಧೇಧಿಕೌ ಪಾರಿಣಾಮಿಕೌ ಚ ||೩೭ ||

ಟೀ || ಬಂಧೇ - ಬಂಧಗಳಲ್ಲಿ, ಅಧಿಕೌ-ಹೆಚ್ಚಾದ (ಎರಡು)ಗುಣಗಳು, ಪಾರಿಣಾಮಿಕೌ - ಹೀನಗುಣಗಳನ್ನು ತಮ್ಮಂತೆ ಮಾಡುವದು ||

ತಾ || ಸ್ವಲ್ಪ ಗುಣವುಳ್ಳ ಸ್ನಿಗ್ಧವು ಹೆಚ್ಚುಗುಣದ ಸ್ಕಂಧವಾಗುತ್ತೆ || ಪ್ರವಿಸಿಕೊಂಡು ಬರುವ ಬೆಲ್ಲವು ಅಧಿಕವಾದಂಥಾ ಮಧುರ ರಸ ವುಳ್ಳಂಥಾದ್ದಾಗಿ ಆ ಬೆಲ್ಲದ ಮಧ್ಯದಲ್ಲಿರುವಧೂಳು ಮೊದಲಾದವು,

ಗಳಿಗೆ ತನ್ನ ಗುಣವಾದ ಮಧುರ ರಸವನ್ನು ಉಂಟುಮಾಡುವದರಿಂದ ಹ್ಯಾಗೆ ತನ್ನ ಪರಿಣಾಮವುಳ್ಳಂಥಾದ್ದಾಗಿ ಆಗುತ್ತದೆಯೋ? ಹಾಗೆ ಇತರವಾದ ಅಧಿಕ ಗುಣವುಳ್ಳ ಪರಮಾಣುವು ಸ್ವಲ್ಪವಾಗಿರುವ ಪರಮಾಣುವಿಗೆ ತನ್ನ ಗುಣವನ್ನು ಉಂಟುಮಾಡುವದ್ದರಿಂದ ಅದು ಪಾರಿಣಾಮಿಕವಾಗುತ್ತದೆ ॥ ಆಕಾರಣದಿಂದ ಪೂರ್ವಸ್ಥಿತಿಬಿಟ್ಟು ಮೂರನೇ ಅವಸ್ಥೆಯನ್ನು ಪಡೆದು ಏಕತ್ವವನ್ನು ಪಡೆಯುತ್ತದೆ ಹಾಗಲ್ಲದೆ ಹೋದರೆ || ಬಿಳೀದಾರ ಕಪ್ಪುದಾರದೋಪಾದಿಯಲ್ಲಿ ಸೇರಿದರೂ ಪರಿಣಾಮ ಯಿಲ್ಲದೇ ಇರುವದ್ದರಿಂದ ಬೇರೆ ಬೇರೆ ರೂಪದಿಂದಲೆ ಇರಬೇಕಾಗುತ್ತದೆ ॥ ೩೭ ॥

## ದ್ರವ್ಯಲಕ್ಷಣಾಧಿಕರಣಂ.

ಅ ॥ ದ್ರವ್ಯ ಲಕ್ಷಣವನ್ನು ಹೇಳುತ್ತಾರೆ ॥

ಸೂ ॥ ಗುಣಪರ್ಯಾಯವದ್ದ್ರವ್ಯಂ ॥ ೩೮ ॥

ಟೀ ॥ ಗುಣಪರ್ಯಾಯವತ್ - ಗುಣ-ಗುಣವು, ಪರ್ಯಾಯವತ್- ಪರ್ಯಾಯವು ಇವುಗಳುಳ್ಳಂಥಾದ್ದು, ದ್ರವ್ಯಂ - ದ್ರವ್ಯವು ।

ತಾ ॥ ಅನ್ವಯಿಗಳಾದಂಥಾ ಜ್ಞಾನಾದಿಗಳು ಜೀವನಿಗೆ ಗುಣಗಳಾಗುತ್ತವೆ। ಪುದ್ಗಲಾದಿಗಳಿಗೆ ರೂಪು ಮೊದಲಾದಂಥಾವುಗಳು ಗುಣಗಳಾಗುತ್ತವೆ ॥ ಈ ಗುಣಗಳ ವಿಕಾರಗಳು ವಿಶೇಷ ಸ್ವರೂಪದಿಂದ ಭೇದಿಸಲ್ಪಟ್ಟಂಥಾವುಗಳಾದರೆ ಅವೇ ಪರ್ಯಾಯವು ॥ ೩೮ ||

ಅ || ಕಾಲಕ್ಕೂ ದ್ರವ್ಯತ್ವವನ್ನು ಹೇಳುತ್ತಾರೆ।

ಸೂ । ಕಾಲಶ್ಚ || ೩೯ ॥

ಟೀ || ಕಾಲಶ್ಚ - ಕಾಲಕ್ಕೂ ಕೂಡ - ದ್ರವ್ಯವೆಂದು ಹೇಳಲ್ಪಡುತ್ತದೆ ॥ ತಾ || ಉತ್ಪಾದವ್ಯಯ ಧ್ರೌವ್ಯಯುಕ್ತಂಸತ್ - ಗುಣಪರ್ಯಾಯವದ್ದ್ರವ್ಯಂ || ಎಂಬ ೨ ಸೂತ್ರಗಳಲ್ಲಿ ಹೇಳುವ ಲಕ್ಷಣವುಕಾಲಕ್ಕೂ ಇರುವದ್ದರಿಂದ ಕಾಲಕ್ಕೂ ದ್ರವ್ಯವೆಂಬ ಹೆಸರು ಬಂದಿರುತ್ತದೆ ॥ ವರ್ತನಾಲಕ್ಷಣಃ ಕಾಲಃ ಇಂತೆಂದು ಕಾಲಕ್ಕೆ ಅಸ್ತಿತ್ವಲಕ್ಷಣ ಹೇಳಲ್ಪಟ್ಟಿದೆ || ಲೋಕಾಕಾಶಕ್ಕೆ ಎಷ್ಟು ಪ್ರದೇಶಗಳು ಇಧಾವೆಯೋ ಅಷ್ಟು ಕಾಲಾಣುಗಳು ಕ್ರಿಯಾಶೂನ್ಯಗಳಾದಂಥಾವುಗಳಾಗಿ ವೊಂದೊಂದು ಆಕಾಶಪ್ರದೇಶದಲ್ಲಿ ವೊಂದೊಂದು ಇರುವದ್ದರಿಂದ ರತ್ನರಾಶಿಯಂತೆ ಆಕಾಶ ಪ್ರದೇ

ಶಗಳಲ್ಲಿ ಇರುತ್ತವೆ ‖ ರೂಪಾದಿ ಗುಣಗಳು ಯಿಲ್ಲದೇ ಯಿರುವವದ್ದರಿಂದ ಕಾಲಾಣುಗಳು ಅಮೂರ್ತಗಳು, ವರ್ತನಾ ಲಕ್ಷಣ ವುಳ್ಳಂಥಾ ಮುಖ್ಯ ಕಾಲಕ್ಕೆ ಇದೇ ಪ್ರಮಾಣವು ‖ ೩೯ ‖

ಅ ‖ ಪರಮಾಣುಗಮ್ಯವಾದ ವ್ಯವಹಾರಕಾಲ ಪ್ರಮಾಣವನ್ನು ಹೇಳುತ್ತಾರೆ.

ಸೂ ‖ ಸೋಽನಂತಸಮಯಃ ‖ ೪೦ ‖

ಟೀ ‖ ಸಃ - ಆ ವ್ಯವಹಾರಕಾಲವು, ಅನಂತಸಮಯಃ - ಅನಂತ ಸಮಯವುಳ್ಳಂಥಾದ್ದು ಆಗುತ್ತದೆ ‖

ತಾ ‖ ವರ್ತಮಾನಕಾಲವು ಒಂದುಸಮಯ ವಾದಂಥಾದ್ದಾದಾಗ್ಯೂ, ಅತೀತ ಅನಾಗತ ಕಾಲಗಳ ಸಮಯಗಳು ಅನಂತಗಳಾಗುವದ್ದರಿಂದ ಕಾಲವು ಅನಂತ ಸಮಯವುಳ್ಳಂಥಾದ್ದು ‖ ಕಾಲದಲ್ಲಿ ಬಹಳ ಕಮ್ಮಿಯಾಗಿರುವದು ಸಮಯವೆಂಬುವದು ಇದರ ಲೆಖ್ಖದಿಂದ ಆವಳಿ, ಉಚ್ಛ್ವಾಸ ಘಳಿಗೆಮೊದಲಾದ ವ್ಯವಹಾರಕಾಲನಿಯಮಗಳು ಆಗುತ್ತದೆ‖ ನಿಶ್ಚಯಕಾಲದ ಪರ್ಯಾಯವೇ ಯೀ ವ್ಯವಹಾರ ಕಾಲವು ‖೪೦‖

## ಗು ಣಾ ಧಿ ಕ ರ ಣ ಂ .

ಅ ‖ ಗುಣಗಳು ಯಾವದೆಂದರೆ ಹೇಳುತ್ತಾರೆ.

ಸೂ ‖ ದ್ರವ್ಯಾಶ್ರಯಾ ನಿರ್ಗುಣಾ ಗುಣಾಃ ‖ ೪೧ ‖

ಟೀ ‖ ದ್ರವ್ಯಾಶ್ರಯಾಃ – ದ್ರವ್ಯಗಳನ್ನ ಆಧಾರವಾಗಿವುಳ್ಳಂಥಾ, ನಿರ್ಗುಣಾಃ - ಗುಣವಿಲ್ಲದೇ ಯಿರುವದು ಯಾವದೋ ಅದು, ಗುಣಾಃ - ಗುಣಗಳು ಇಂತೆಂದು ಹೇಳಲ್ಪಡುತ್ತದೆ ‖

ತಾ ‖ ದ್ವ್ಯಣುಕಾದಿ ಸ್ಕಂಧಗಳು ದ್ರವ್ಯಾಶ್ರಯ ವಾಗುವದ್ದರಿಂದ ಅವುಗಳಿಗೆ ಗುಣವ್ಯಪದೇಶಶಂಕಾನಿವೃತ್ತಿಗೋಸ್ಕರ ನಿರ್ಗುಣಯೆಂಬ ವಿಶೇಷವು ಬರುತ್ತದೆ. ದ್ರವ್ಯಾಶ್ರಯತ್ವವು ನಿರ್ಗುಣತ್ವವು ಇರುವದ್ದರಿಂದ ಘಟಾದಿ ಪರ್ಯಾಯವು ಗುಣತ್ವವನ್ನು ಹೊಂದುವದಿಲ್ಲವು. ದ್ರವ್ಯವು ನಿತ್ಯವು. ದ್ರವ್ಯಗಳನ್ನು ಆಶ್ರಯಿಸಿಕೊಂಡಿರುವವು ಗುಣಗಳು ಹೀಗೆಂತ ವಿಶೇಷಿಸಿದ್ದರಿಂದ ಪರ್ಯಾಯಗಳು ಕಾದಾಚಿತ್ಕಗಳಾಗುವದ್ದರಿಂದ ಅವುಗಳಿಗೆ ಗುಣತ್ವ ವಿಲ್ಲವು ‖ ೪೧ ‖

### ಪ ರಿ ಣಾ ಮಾ ಧಿ ಕ ರ ಣ ಂ .

ಅ || ಪರಿಣಾಮವನ್ನು ಹೇಳುತ್ತಾರೆ.

ಸೂ || ತದ್ಭಾವಃ ಪರಿಣಾಮಃ || ೪೨ ||

ಟೀ || ತದ್ಭಾವಃ - ಆಧರ್ಮಾದಿ ದ್ರವ್ಯಾದಿಗಳ ಸ್ವರೂಪವನ್ನು ಬಿಡದೆ ಪರ್ಯಾಯವನ್ನು ಪಡೆಯುವದು, ಪರಿಣಾಮಃ - ಪರಿಣಾಮವು || ತಾ || ಧರ್ಮಾದಿ ದ್ರವ್ಯಗಳು ಯಾವ ಸ್ವರೂಪದಿಂದ ಇರುತ್ತಿವೆಯೋ ಆಸ್ವರೂಪಕ್ಕೆ ಪರಿಣಾಮವೆಂದು ಹೆಸರು || ಆ ಪರಿಣಾಮವು ಆದಿಮಾನ್ - ಅನಾದಿಮಾನ್ ಎಂದು ೨ ವಿಧವು || ೪೨ ||

ಇತಿ ತತ್ವಾರ್ಥಾಧಿಗಮೇ ಮೋಕ್ಷಶಾಸ್ತ್ರೇ ಪಂಚಮೋಧ್ಯಾಯಃ



### ಷಷ್ಠೋಧ್ಯಾಯ ಪ್ರಾರಂಭಃ.

ಅ || ಯೋಗಸ್ವರೂಪವನ್ನು ಹೇಳುತ್ತಾರೆ.

ಸೂ || ಕಾಯವಾಙ್ಮನಃ ಕರ್ಮಯೋಗಃ || ೧ ||

ಟೀ || ಕಾಯವಾಙ್ಮನಃ ಕರ್ಮಯೋಗಃ-ಕಾಯ-ಶರೀರವು, ವಾಕ್-ವಚನವು, ಮನಃ-ಮನಸ್ಸು, ಇವುಗಳ, ಕರ್ಮ-ಶುಭಾಶುಭವಾದಂಥಾ ಕ್ರಿಯೆಯು, ಯೋಗಃ-ಯೋಗವೆಂದು ಹೇಳಲ್ಪಡುತ್ತದೆ ||

ತಾ || ಮನಸ್ಸು, ವಚನ ಶರೀರ ಇವುಗಳಿಂದ ಬರುವ ಶುಭಾಶುಭಕರ್ಮಗಳಿಗೆ ಯೋಗವೆಂದು ಹೆಸರು || ಆತ್ಮಪ್ರದೇಶಪರಿಸ್ಪಂದವೇ ಯೋಗವೆಂದು ಹೇಳಲ್ಪಡುತ್ತದೆ || ಆ ಯೋಗವು ೩ ಪ್ರಕಾರವು || ವೀರ್ಯಾಂತರಾಯಕ್ಷಯೋಪಶಮವುಂಟಾದರೆ, ಔದಾರಿಕ, ಔದಾರಿಕಮಿಶ್ರ, ವೈಕ್ರಿಯಕ, ವೈಕ್ರಿಯಕಮಿಶ್ರ, ಆಹಾರಕ, ಆಹಾರಕಮಿಶ್ರ, ಕಾರ್ಮಣಕಾಯ, ಎಂಬುವ ಏಳು ಪ್ರಕಾರ ಕಾಯವರ್ಗಣೆಗಳಲ್ಲಿ ಯಾವದಾದರು ಒಂದು ಕಾಯವರ್ಗಣೆಯನ್ನು ಆಶ್ರಯಾಪೇಕ್ಷೆಯಿಂದ ಆತ್ಮಪ್ರದೇಶದಲ್ಲಿ ಪರಿಸ್ಪಂದಲಕ್ಷಣವಾದ ಚಲನಕ್ರಿಯೆಯು, ಕಾಯಯೋಗವೆಂಬುವದು ಆಗುತ್ತದೆ || ಶರೀರನಾಮಕರ್ಮೋದಯದಿಂ

[೧೨]

ದ ಹುಟ್ಟಿದ ವಾಗ್ವರ್ಗಣಾಲಂಬನವು ಉಂಟಾಗುತ್ತಿರಲಾಗಿ ವೀರ್ಯಾಂತರಾಯಮತ್ಯಕ್ಷರಾದ್ಯಾವರಣ ಕ್ಷಯೋಪಶಮದಿಂದ ಉಂಟಾದ ಅಭ್ಯಂತರವಾಗ್ಲಬ್ಧಿಸಾನ್ನಿಧ್ಯವಾಗುತ್ತಿರಲಾಗಿ ವಾಕ್ಪರಿಣಾಮಾಭಿಮುಖವಾಗಿ ಇರುವಂಥಾ ಆತ್ಮಪ್ರದೇಶ ಪರಿಸ್ಪಂದವೇ ವಾಗ್ಯೋಗ ವೆಂಬುವದಾಗುತ್ತದೆ ॥ ಅಭ್ಯಂತರ ವೀರ್ಯಾಂತರಾಯನೋ ಇಂದ್ರಿಯಾವರಣ ಕ್ಷಯೋಪಶಮಾತ್ಮಕ ಮನೋಲಬ್ಧಿ ಸಾನ್ನಿಧ್ಯದಲ್ಲಿ ಬಾಹ್ಯನಿಮಿತ್ತಮನೋ ವರ್ಗಣಾ ಲಂಬನವುಂಟಾದರೆ ಸತ್ಯಾಸತ್ಯೋಭಯಾನುಭಯಾತ್ಮಕ ಚತುರ್ವಿಧ ಮನಃಪರಿಣಾಮಾಭಿಮುಖ ಜೀವಪ್ರದೇಶ ಪರಿಸ್ಪಂದವೇಯೇ ಮನೋಯೋಗವು ॥ ೧ ॥

## ಆಸ್ರವಾಧಿಕರಣಂ.

ಅ ॥ ಆಸ್ರವವನ್ನು ಹೇಳುತ್ತಾರೆ.

ಸೂ ॥ ಸ ಆಸ್ರವಃ ॥ ೨ ॥

ಟೀ ॥ ಸಃ-ಆಪೂರ್ವೋಕ್ತಯೋಗವು, ಆಸ್ರವಃ-ಆಸ್ರವ ಇಂತೆಂದು ಹೇಳಲ್ಪಡುತ್ತದೆ ॥ ತಾ ॥ ಶುಭಕರ್ಮ್ಮ ಅಶುಭಕರ್ಮ್ಮ ಬರುವದಕ್ಕೆ ಆಸ್ರವ ವೆಂದು ಹೆಸರು ॥ ೨ ॥

ಅ ॥ ಆಸ್ರವ ಭೇದವನ್ನು ಹೇಳುತ್ತಾರೆ.

ಸೂ ॥ ಶುಭಃ ಪುಣ್ಯಸ್ಯಾಶುಭಃ ಪಾಪಸ್ಯ ॥ ೩ ॥

ಟೀ ॥ ಶುಭಃ-ಶುಭಯೋಗವು, ಪುಣ್ಯಸ್ಯ-ಪುಣ್ಯಕರ್ಮದ (ಆಸ್ರವ ಉಂಟಾಗುತ್ತದೆ) ಅಶುಭಃ-ಅಶುಭಕರವಾದ ಯೋಗವು, ಪಾಪಸ್ಯ-ಪಾಪಕರ್ಮದ (ಆಸ್ರವ ಉಂಟಾಗುತ್ತದೆ) ॥

ತಾ ॥ ಜೀವಸಂರಕ್ಷಣೆಯು ಉಪಕಾರಮಾಡುವದು ಸುಳ್ಳುಹೇಳದೇಯಿರುವದು, ದೇವತಾಭಕ್ತಿ ಮೊದಲಾದ್ದರಿಂದ ಶುಭಯೋಗವು ಉಂಟಾಗುತ್ತೆ. ಇದರಿಂದ ಸಾತಾವೇದನೀಯ ಆಸ್ರವಕ್ಕೆ ಕಾರಣವಾಗುತ್ತದೆ ॥ ಪ್ರಾಣಿಹಿಂಸೆ, ಕಳವು, ಪರದಾರ, ಈರ್ಷೆ, ಅಸತ್ಯಹೇಳುವದು ಮೊದಲಾದದ್ದು ಅಶುಭಯೋಗವು, ಇದರಿಂದ ಅಸಾತಾವೇದನೀಯಕರ್ಮದ ಆಸ್ರವಕ್ಕೆ ಕಾರಣವಾಗುತ್ತದೆ ॥ ೩ ॥

ಅ ॥ ಆಸ್ರವಭೇದವನ್ನು ಹೇಳುತ್ತಾರೆ,

ಸೂ || ಸಕಷಾಯಾಕಷಾಯಯೋಃ ಸಾಂಪರಾಯಿಕೇ
ರ್ಯಾಪಥಯೋಃ || ೪ ||

ಟೀ || ಸಕಷಾಯಾಕಷಾಯಯೋಃ-ಸಕಷಾಯ-ಕ್ರೋಧಾದಿ ಕಷಾಯಮೊಡನೆಕೂಡಿದಂಥಾವರು, ಅಕಷಾಯಯೋಃ-ಕ್ರೋಧಾದಿಕಷಾಯಗಳಿಲ್ಲದಂಥಾವರು ಯಿವರುಗಳಿಗೆ, (ಕ್ರಮವಾಗಿ) ಸಾಂಪರಾಯಿಕೇರ್ಯಾಪಥಯೋಃ-ಸಾಂಪರಾಯಿಕ- ಸಂಸಾರವನ್ನೇ ಪ್ರಯೋಜನವಾಗಿ ವುಳ್ಳಂಥಾಕರ್ಮವು, ಈರ್ಯಾಪಥಯೋಃ-ಗಮನದ್ವಾರವನ್ನುಳ್ಳಂಥಾ ಕರ್ಮವು ಯಿವುಗಳಿಗೆ (ಆಸ್ರವವಾಗುತ್ತದೆ)||

ತಾ || ಕ್ರೋಧಾದಿ ಕಷಾಯಮೊಡನೆಕೂಡಿದಂಥಾ ಪ್ರಾಣಿಗಳ ಸಂಸಾರಕ್ಕೆ ಕಾರಣವಾದಂಥಾ ಆಸ್ರವಕ್ಕೆ ಸಾಂಪರಾಯಿಕಾಸ್ರವವೆಂದು ಹೆಸರು || ಉಪಶಾಂತಕಷಾಯ, ಕ್ಷೀಣಕಷಾಯ, ಸಯೋಗಿಕೇವಲಿ ಈ ೩ ಗುಣಸ್ಥಾನದವರಾದಂಥಾ ಕಷಾಯ ರಹಿತರಾದಂಥಾ ಪ್ರಾಣಿಗಳ ಆಸ್ರವಕ್ಕೆ ಈರ್ಯಾಪಥಾಸ್ರವವೆಂದು ಹೇಸರು || ೪ ||

ಅ || ಸಾಂಪರಾಯಿಕಾಸ್ರವದ ಭೇದವನ್ನು ಹೇಳುತ್ತಾರೆ.

ಸೂ || ಇಂದ್ರಿಯಕಷಾಯ ವ್ರತಕ್ರಿಯಾಃ ಪಂಚಚ
ತುಃ ಪಂಚಪಂಚವಿಂಶತಿಸಂಖ್ಯಾಃ ಪೂರ್ವಸ್ಯ ಭೇದಾಃ||೫||

ಟೀ || ಇಂದ್ರಿಯಕಷಾಯಾವ್ರತಕ್ರಿಯಾಃ-ಇಂದ್ರಿಯ ಸ್ಪರ್ಶಾದಿ ಇಂದ್ರಿಯಗಳು, ಕಷಾಯ-ಕ್ರೋಧಾದಿ ಕಷಾಯಗಳು, ಅವ್ರತ-ಹಿಂಸಾದಿ ಅವ್ರತಗಳು, ಕ್ರಿಯಾಃ-ಕ್ರಿಯೆಗಳು (ಕ್ರಮವಾಗಿ) ಪಂಚ-ಐದು, ಚತುಃ-ನಾಲ್ಕು, ಪಂಚ-ಐದು, ಪಂಚವಿಂಶತಿ=ಇಪ್ಪತ್ತೈದು, ಸಂಖ್ಯಾಃ-ಸಂಖ್ಯೆಗಳುಳ್ಳಂಥಾವುಗಳು, ಪೂರ್ವಸ್ಯ-ಮೊದಲನೇದಾದ ಸಾಂಪರಾಯಿಕಾಸ್ರವದ, ಭೇದಾಃ-ವಿಕಲ್ಪಗಳು ||

ತಾ || ಸ್ಪರ್ಶನ, ರಸನ, ಘ್ರಾಣ, ಚಕ್ಷು, ಶ್ರೋತ್ರವೆಂಬ ೫ ಇಂದ್ರಿಯಗಳು || ಕ್ರೋಧ, ಮಾನ, ಮಾಯಾ, ಲೋಭವೆಂಬ ೪ ಕಷಾಯಗಳು || ಕೊಲೆ, ಹುಸಿ, ಕಳವು, ಪರದಾರ, ಅತಿಕಾಂಕ್ಷೆಎಂಬ ೫ ಅವ್ರತಗಳು || ಇಪ್ಪತ್ತೈದು ಕ್ರಿಯೆಗಳು ಯಾವವೆಂದರೆ (೧) ಚೈತ್ಯ (ಜಿನಬಿಂಬ) ಗುರುಶಾಸ್ತ್ರ, ಪೂಜನಮೊದಲಾದ ಲಕ್ಷಣವುಳ್ಳಂಥಾ

ಸಮ್ಯಕ್ತ್ವವನ್ನು ಹೆಚ್ಚಿಸುವಂಥಾ ಕ್ರಿಯೆಯು ॥ ಸಮ್ಯಕ್ತ್ವಕ್ರಿಯೆಎಂ
ಧು ಹೆಸರು ॥ (೨) ಅನ್ಯದೇವತಾಸ್ತವನ ಮೊದಲಾದ ಮಿಥ್ಯಾತ್ವಹೇ
ತುವಾದಂಥಾ ಕ್ರಿಯೆಗೆ ಮಿಥ್ಯಾತ್ವಕ್ರಿಯೆಯೆಂದು ಹೆಸರು ॥ ೩ ಶರೀ
ರಾದಿಗಳಿಂದ ಗಮನಾಗಮನಾದಿಪ್ರಯೋಜಕವಾದ ಕ್ರಿಯೆಗೆ ಪ್ರಯೋ
ಗಕ್ರಿಯೆ ಎಂಬುಹೆಸರು ॥ ೪ ಪ್ರಯತ್ನಮಾಡದೇಯಿರುವಂಥಾ ಸಂಯ
ತನ ಉಪಕರಣಾದಿಗಳನ್ನು ತೆಗದುಕೊಳ್ಳುವದಕ್ಕೆಸಮಾಧಾನಕ್ರಿಯೆ
ಎಂದುಹೆಸರು ॥ ೫ ಈರ್ಯಾಪಥನಿಮಿತ್ತವಾದಂಥಾ ಕ್ರಿಯೆಗೆ ಈ
ರ್ಯಾಪಥಕ್ರಿಯೆಯೆಂದು ಹೆಸರು ॥ ೬ ಕ್ರೋಧಾದಿಕಷಾಯಗಳ ವೇ
ಗದಿಂದ ಮನಸ್ಸಿನ ದುಷ್ಟವಾದ ವ್ಯಾಪಾರಕ್ಕೆ ಪ್ರದೋಷಕ್ರಿಯೆಎಂದು
ಹೆಸರು ॥ ೭ ॥ ಹಿಂಸೆಗೆ ಉಪಕರಣಕೆಲಸಗಳನ್ನು ಮಾಡುವದಕ್ಕೆ ಅ
ಧಿಕರಣಕ್ರಿಯೆಯೆಂದು ಹೆಸರು ॥ ೮ ॥ ಅನ್ಯಪ್ರಾಣಿಗೆ ಅಥವಾ ತನಗೆ
ದುಃಖತರವಾಗಿರುವಂಥಾ ವ್ಯಾಪಾರಗಳನ್ನು ಮಾಡುವದಕ್ಕೆ ಪರಿತಾ
ಪಕ್ರಿಯೆಎಂದು ಹೆಸರು ॥ ೯ ॥ ಪ್ರಾಣಿಗಳ ಆಯುಷ್ಯ ಇಂದ್ರಿಯಬ
ಲ ಪ್ರಾಣಗಳನ್ನು ಅಗಲಿಸುವದಕ್ಕೆ ಪ್ರಾಣಾತಿಪಾತಕ್ರಿಯೆಎಂದು ಹೆ
ಸರು ॥ ೧೦ ॥ ಅಭಿಲಾಷೆಯೊಡನೆ ಕೂಡಿದಂಥಾವನಾಗಿ ಪ್ರಮಾದವುಳ್ಳ
ವನಾಗಿ ರಮಣೀಯವಾದ ರೂಪನ್ನು ನೋಡುವ ಅಭಿಪ್ರಾಯಕ್ಕೆ ದರ್ಶ
ನಕ್ರಿಯೆಎಂದು ಹೆಸರು ॥ ೧೧ ॥ ಪ್ರಮಾದವಶದಿಂದ ಮನೋಹರವಾ
ದ ಸ್ಪರ್ಶನಮಾಡುವ ವಸ್ತುವನ್ನು ಸ್ಪರ್ಶನಮಾಡುವ ಅಭಿಪ್ರಾಯಕ್ಕೆ
ಸ್ಪರ್ಶನಕ್ರಿಯೆಯೆಂದು ಹೆಸರು ॥ ೧೨ ॥ ಹಿಂಸಾದಿ ವಿಷಯಗಳಿಗೆ ಅ
ಪೂರ್ವವಾದಕಾರಣಗಳನ್ನು ಮಾಡುವದು ಪ್ರತ್ಯಯಕ್ರಿಯೆಎಂಬುಹೆಸರು ॥
೧೩ ॥ ಸ್ತ್ರೀ ಪುರುಷ ಪಶು ಮೊದಲಾದವುಗಳುಇರುವ, ಮಲಗುವ,
ಕೂತುಕೊಳ್ಳುವಸ್ಥಳದಲ್ಲಿ ಮಲಮೂತ್ರ ವಿಸರ್ಜನೆಮಾಡುವದಕ್ಕೆ ಸ
ಮಂತಾನುಪಾತಕ್ರಿಯೆಎಂದು ಹೆಸರು ॥ ೧೪ ॥ ಗುಡಿಸದೇ ನೋಡದೇಯಿ
ರುವಂಥಾ ಭೂಮಿಯಲ್ಲಿ ಕೂತುಕೊಳ್ಳುವದು ಮಲಗುವದು ಮಾಡು
ವದಕ್ಕೆ ಅನಾಭೋಗಕ್ರಿಯೆಎಂದು ಹೆಸರು ॥ ೧೫ ॥ ಇತರರುಮಾಡ
ತಕ್ಕಂಥಾ ಕೆಲಸವನ್ನೂಕೂಡ ತನ್ನಸ್ವಹಸ್ತದಿಂದಮಾಡುವದಕ್ಕೆ ಸ್ವಹ
ಸ್ತಕ್ರಿಯೆಎಂದು ಹೆಸರು ॥ ೧೬ ॥ ಪಾಪವೃದ್ಧಿಯಾಗುವದರಲ್ಲಿ ಅಂ

ಗೀಕಾರಮಾಡುವುದಕ್ಕೆ ನಿಸರ್ಗಕ್ರಿಯೆಎಂದು ಹೆಸರು ॥ ೧೭ ॥ ಅನ್ಯ ರಿಂದಮಾಡಿದಂಥಾ ಗುಪ್ತವಾದದೋಷವನ್ನು ಪ್ರಕಾಶಮಾಡುವದಕ್ಕೆ ವಿದಾರಣಕ್ರಿಯೆ ಎಂದು ಹೆಸರು ॥ ೧೮ ॥ ಚಾರಿತ್ರಮೋಹದ ಉದಯ ದಿಂದ ಆವಶ್ಯಕಾದಿಯಲ್ಲಿ ಹೇಳಿದ ಆಜ್ಞೆಯಂತೆ ಅಂದರೆ ಆಗಮಶಾಸ್ತ್ರ ದಲ್ಲಿ ಹೇಳಿದಂತೆ ಮಾಡಲಾರದೆ ಬೇರೇವಿಧವಾಗಿ ಮಾಡುವದಕ್ಕೆ ಆಜ್ಞಾ ವ್ಯಾಪಾದಾನಕ್ರಿಯೆಎಂದು ಹೆಸರು ॥ ೧೯ ॥ ಪ್ರಮಾದ ಆಲಸ್ಯ ಇವುಗ ಳಿಂದ ಪರಮಾಗಮದಲ್ಲಿಹೇಳಿದ ವಿಧಿಯನ್ನು ನಡಸುವದರಲ್ಲಿ ಅನಾದ ರಮಾಡಿದರೆ ಅದಕ್ಕೆ ಅನಾಕಾಂಕ್ಷಾಕ್ರಿಯೆಎಂದು ಹೆಸರು ॥ ೨೦ ॥ ಛೇ ದನ ಭೇದನಾದಿ ಕೆಲಸಗಳಲ್ಲಿ ವಿಶೇಷಅಭಿಲಾಷೆಯು ಅಥವಾ ಇತರರನು ಮಾಡುವದನ್ನುನೋಡಿ ಸಂತೋಷಪಡುವದು ಇದು ಆರಂಭಕ್ರಿಯೆ ಎಂದು ಹೆಸರು ॥ ೨೧ ॥ ವಸ್ತುವಾಹನಾದಿ ಪರಿಗ್ರಹಗಳು ನಾಶವಾ ಗದೇಯಿರುವಂತೆ ಸಂರಕ್ಷಣೇಮಾಡುವದಕ್ಕೆ ಪರಿಗ್ರಹ ಕ್ರಿಯೆಎಂದು ಹೆಸರು ॥ ೨೨ ॥ ಜ್ಞಾನದರ್ಶನಾದಿಗಳನ್ನು ವಂಚಿಸುವ ನಡತೆಗೆ ಮಾ ಯಾಕ್ರಿಯೆ ಎಂದು ಹೆಸರು ॥ ೨೩ ॥ ಮಿಥ್ಯಾತ್ವದ ಕೆಲಸವನ್ನು ಮಾಡುವ ಮಾಡಿಸುವ ಇತರರನ್ನು ಪ್ರಶಂಸೆಮಾಡಿ ಅವರಿಗೆ ಮಿಥ್ಯಾತ್ವದೃಢವಾ ಗುವಂತೆ ಮಾಡುವದಕ್ಕೆ ಮಿಥ್ಯಾದರ್ಶನಕ್ರಿಯೆಎಂದು ಹೆಸರು ॥ ೨೪ ॥ ಸಂಯಮ ಘಾತಿಕರ್ಮೋದಯವಶದಿಂದ ನಿವೃತ್ತಿಯಿಲ್ಲದೇಯಿರುವದು ಅಂದರೆ ಒಂದುವಸ್ತುವನ್ನು ಪರಿತ್ಯಾಗಮಾಡದೇಯಿರುವದಕ್ಕೆ ಅಪ್ರ ತ್ಯಾಖ್ಯಾನಕ್ರಿಯೆ ಎಂದು ಹೆಸರು ॥ ೨೫ ॥ ಈ ೨೫ ಕ್ರಿಯೆಗಳು ಹಿಂ ದೆಹೇಳಿದವುಗಳುಸೇರಿಸಾಂಪರಾಯಿಕಾಸ್ರವವನ್ನುಉಂಟುಮಾಡುತ್ತವೆ.॥ ಈ ಮನವಚನಕಾಯಗಳೆಲ್ಲಾ ಆತ್ಮಕಾರ್ಯವಾಗಿರುವದ್ದರಿಂದ ಸಮ ಸ್ತಸಂಸಾರವು ಜೀವಸಾಧಾರಣವು ಆಗುತ್ತದೆ ॥ ೫ ॥

ಅ ॥ ಸಾಂಪರಾಯಿಕಾಸ್ರವದ ವಿಶೇಷವನ್ನು ಹೇಳುತ್ತಾರೆ.

ಸೂ ॥ ತೀವ್ರಮಂದಜ್ಞಾತಾಜ್ಞಾತಭಾವಾಧಿಕರಣ ವೀ ರ್ಯೇಭ್ಯಸ್ತದ್ವಿಶೇಷಃ ॥ ೬ ॥

ಟೀ॥ ತೀವ್ರಮಂದಜ್ಞಾತಾಜ್ಞಾತಾಧಿಕರಣ ವೀರ್ಯೇಭ್ಯಃ-ತೀ ವ್ರ-ತೀವ್ರವಾದ ಪರಿಣಾಮವು, ಮಂದ-ಮಂದವಾದ ಪರಿಣಾಮವು, ಜ್ಞಾ

ತ-ತಿಳಿದ ಪರಿಣಾಮವು, ಅಜ್ಞಾತಭಾವ - ತಿಳಿಯದೇಯಿದ್ದ ಪರಿಣಾಮ ವು, ಅಧಿಕರಣ- ಜೀವಾಜೀವದ್ರವ್ಯವು, ವೀರ್ಯ್ಯೇಭ್ಯಃ-ದ್ರವ್ಯದ ಸಾಮ ರ್ಥ್ಯವು ಇವುಗಳಿಂದ, ತದ್ವಿಶೇಷಃ - ತತ್-ಆ ಸಾಂಪರಾಯಿಕಾಸ್ರವದ, ವಿಶೇಷಃ-ವಿಶೇಷವು ॥ ತಾ ॥ ಬಾಹ್ಯಾಭ್ಯಂತರಕಾರಣದಿಂದ ಹೆಚ್ಚಿದ ಕ್ರೋಧಾದಿಗಳ ಆ ವೇಶದಿಂದ ಹಿಂದೆಹೇಳಿದ ಇಂದ್ರಿಯಾದಿ ಜೀವಪರಿ ಣಾಮಕ್ಕೆ ತೀವ್ರ(ವೇಗ)ಭಾವವು ॥ ಮಂದವಾದ ಕ್ರೋಧಾದಿಗಳ ಪರಿ ಣಾಮವೇ ಮಂದಭಾವವು ॥ ಹಿಂಸಾದಿಗಳು ಕೆಟ್ಟಕೆಲಸವೆಂದುತಿಳಿದು ಅದನ್ನೇ ಮಾಡುವದು ಜ್ಞಾತಭಾವವು ॥ ಮದದಿಂದ ಪ್ರಮಾದಾದಿಗ ಳಿಂದ ತನಗೆತಿಳಿಯದೆ ಮಾಡುವದು ಅಜ್ಞಾತಭಾವವು ॥ ಹಿಂದೆಹೇಳಿ ದ ೪ ಭಾವಗಳಿಗೂ ಅಧಿಕರಣವಾದಂಥಾದ್ದು ಜೀವಅಜೀವದ್ರವ್ಯವು॥ ದ್ರವ್ಯದ ಶಕ್ತಿವಿಶೇಷವೇ ವೀರ್ಯವು ॥ ಇವುಗಳಕಾರಣದಿಂದ ಸಾಂ ಪರಾಯಿಕಾಸ್ರವದ ತಾರತಮ್ಯವು ಉಂಟಾಗುತ್ತದೆ ॥ ೬ ॥

## ಆ ಸ್ರ ವಾ ಧಿ ಕ ರ ಣಂ.

ಅ ॥ ಆಸ್ರವಾಧಿಕರಣ ಭೇದಪ್ರತಿಪತ್ತಿಯನ್ನು ಹೇಳುತ್ತಾರೆ.

ಸೂ ॥ ಅಧಿಕರಣಂ ಜೀವಾಜೀವಾಃ ॥

ಟೀ ॥ ಜೀವಾಜೀವಾಃ-ಜೀವ-ಜೀವವು, ಅಜೀವಾಃ-ಅಜೀವವು ಇವು ಗಳು, ಅಧಿಕರಣಂ-ಆಸ್ರವಕ್ಕೆ ಆಧಾರವು ॥ ತಾ ॥ ಹಿಂಸೆಮೊದಲಾದ್ದ ಕ್ಕೆ ಉಪಕರಣವನ್ನು ಪಡೆದಿರುವ ಪರ್ಯಾಯದೊಡನೆ ಕೂಡಿದಂಥಾ ಜೀವದ್ರವ್ಯವು, ಅಜೀವದ್ರವ್ಯವು ಆಸ್ರವಕ್ಕೆ ಅಧಿಕರಣವಾಗುತ್ತವೆ ॥೭॥

ಅ ॥ ಮೊದಲ ಅಧಿಕರಣವನ್ನು ಹೇಳುತ್ತಾರೆ.

ಸೂ ॥ ಆದ್ಯಂಸಂರಂಭಸಮಾರಂಭಾರಂಭಯೋಗಕೃತ
ಕಾರಿತಾನುಮತಕಷಾಯ ವಿಶೇಷೈಸ್ತ್ರಿಸ್ತ್ರಿಸ್ತ್ರಿಶ್ಚ
ತುಶ್ಚೈಕಶಃ ॥ ೮ ॥

ಟೀ ॥ ಆದ್ಯಂ-ಮೊದಲ ಜೀವಾಧಿಕರಣವು, ಸಂರಂಭಸಮಾರಂಭಾರಂಭ ಯೋಗಕೃತಕಾರಿತಾನುಮತ ಕಷಾಯವಿಶೇಷೈಃ-ಸಂರಂಭ-ಸಂರಂಭವು- ಸಮಾರಂಭ-ಸಮಾರಂಭವು, ಆರಂಭ-ಆರಂಭವು, ಯೋಗ-ಮನ, ವಚನ, ಕಾಯಗಳು,ಕೃತ-ಮಾಡುವದು,ಕಾರಿತ-ಮಾಡಿಸುವದು,ಅನುಮತ-ಅಂಗೀ

ಕಾರವಡುವವು, ಕಷಾಯ-ಕ್ರೋಧಾದಿಗಳು ಇವುಗಳ, ವಿಶೇಷೈಃ-ವಿಶೇಷಗಳಿಂದ, ಏಕಶಶ್ಚ-ಪ್ರೊಂದೊಂದು ಕೂಡ, ತ್ರಿ-ಮೂರು, ತ್ರಿಃ-ಮೂರು, ತ್ರಿಃ-ಮೂರು, ಚತುಃ-ನಾಲ್ಕು, ಈಭೇದಗಳಿಂದ ೧೦೮ ಭೇದನಾಗುತ್ತದೆ ॥ ತಾ ॥ ಸಂರಂಭ-ಸಮಾರಂಭ, ಆರಂಭ, ಈ ೩ ಗಳನ್ನು ಮನ, ವಚನ, ಕಾಯ ಈ ೩ ರಿಂದಗುಣಿಸಿದರೆ ವೊಂಭತ್ತು ಆಗುತ್ತದೆ ॥ ಈ ವೊಂಭತ್ತನ್ನು ಕೃತ, ಕಾರಿತ, ಅನುಮತ, ವೆಂಬ ೩ ರಿಂದ ಗುಣಿಸಿದರೆ ಮೂರೊಂಭತ್ತಲು ೨೭ ಆಗುತ್ತದೆ, ಇದನ್ನುಕ್ರೋಧ-ಮಾನ- ಮಾಯಾ- ಲೋಭವೆಂಬ ೪ ರಿಂದ ಗುಣಿಸಿದರೆ ೧೦೮ ಪ್ರಕಾರ ಆಸ್ರವಬರುತ್ತದೆ ॥ ಚ ಕಾರ ಸೂತ್ರದಲ್ಲಿ ಹೇಳಿದ್ದರಿಂದ ಅನಂತಾನುಬಂಧ, ಅಪ್ರತ್ಯಾಖ್ಯಾನ, ಪ್ರತ್ಯಾಖ್ಯಾನ, ಸಂಜ್ವಲನಗಳೆಂಬ ಈ ೪ ರಿಂದ ಗುಣಿಸಿದರೆ ೪೩೨ ಭೇದನಾಗುತ್ತದೆಂದು ತಿಳಿಯುವದು ॥ ಪ್ರತಿದಿನದಲ್ಲೂ ಪಾಪಾಸ್ರವಗಳು ನಮಗೆ ೧೦೮ ಪ್ರಕಾರಬರುತ್ತದೆ. ಅವುಗಳ ನಾಶಕ್ಕೋಸ್ಕರ ೧೦೮ ಜಪಗಳನ್ನು ಮಾಡಬೇಕೆಂಬನಿಯುಮವು ॥ ಆ ೧೦೮ ನ್ನೂವಿಲೆಯಾಗಿ ಹೇಳಲ್ಪಡುತ್ತದೆ ಕೊಲೆ ಮೊದಲಾದ್ವರಲ್ಲಿ ಪ್ರಮಾದಿಯಾದಂಥಾ ವನ ಉದ್ಯೋಗದಲ್ಲಿ ಆಗ್ರಹ (ಪರಿಣಾಮ) ವನ್ನು ಮಾಡುವದು ಸಂರಂಭವು ॥ ಹಿಂಸಾದಿಗಳನ್ನುಮಾಡುವದಕ್ಕೆ ಉಪಕರಣಾದಿಗಳನ್ನು ಸಿದ್ಧಮಾಡುವದು ಸಮಾರಂಭವು॥ ಪ್ರಾಣಗಳನ್ನು ಪ್ರಾಣಿಗಳಿಂದ ಬಿಡಿಸುವದು ಅಂಪರೆ ಪ್ರವರ್ತಿಸುವದು ಆರಂಭವು ॥ ತಾನೇಮಾಡುವದು ಕೃತವು ॥ ಇನ್ನೊಬ್ಬರಿಂದ ಮಾಡಿಸುವದು ಕಾರಿತವು ॥ ಇನ್ನೊಬ್ಬರುಮಾಡಿದ್ದಕ್ಕೆ ಒಡಂಬಡುವದು ಅನುಮತವು ॥ ೧ ಕ್ರೋಧಕೃತ ಕಾಯಸಂರಂಭ ೨ ಮಾನಕೃತಕಾಯಸಂರಂಭ ೩ ಮಾಯಾಕೃತಕಾಯಸಂರಂಭ ೪ಲೋಭಕೃತಕಾಯಸಂರಂಭ. (ಈ ನಾಲ್ಕುತಾನೆಮಾಡುವದು) ೫ ಕ್ರೋಧಕಾರಿತಕಾಯ ಸಂರಂಭ ೬ ಮಾನಕಾರಿತಕಾಯ ಸಂರಂಭ ೭ ಮಾಯಾಕಾರಿತಕಾಯಸಂರಂಭವು, ೮ ಲೋಭಕಾರಿತಕಾಯಸಂರಂಭವು (ಈ ೪ ಇನ್ನೊಬ್ಬನಿಂದ ಮಾಡಿಸುವದು) ೯ ಕ್ರೋಧಾನುಮತಕಾಯ ಸಂರಂಭವು ೧೦ ಮಾನಾನುಮತಕಾಯ ಸಂರಂಭವು. ೧೧ ಮಾಯಾನುಮತಕಾಯ

ಸಂರಂಭವು. ೧೨ ಲೋಭಾನುಮತ ಕಾಯಸಂರಂಭವು. ( ಈ ೪ ಇತರರು ಮಾಡಿದ್ದಕ್ಕೆ ಒಡಂಬಡುವದು || ಈ ೧೨ ಕಾಯ ಸಂರಂಭವಾಗುತ್ತದೆ. ಇದೇ ಮೇರೆ ವಚನ ಸಂರಂಭವು ೧೨ ಭೇದವು. ಮತ್ತು ಇದೇ ಮೇರೆ ಮನಸ್ಸಂರಂಭವು ೧೨ ಭೇದವು ಒಟ್ಟು ೩೬ ಸಂರಂಭದ ಭೇದವಾಗುತ್ತದೆ. ಇದೇಮೇರೆ ಸಮಾರಂಭದ್ದು ೩೬ ಭೇದವು. ಅನಂತರ ಆರಂಭದ್ದು ೩೬ ಭೇದವು ವಟ್ಟು ಸೇರಿದರೆ ೧೦೮ ಆಗುತ್ತದೆ || ೮ ||

ಅ || ಜೀವಾಧಿಕರಣಭೇದವನ್ನು ಹೇಳುತ್ತಾರೆ.

ಸೂ || ನಿರ್ವರ್ತ್ತನಾ ನಿಕ್ಷೇಪ ಸಂಯೋಗ ನಿಸರ್ಗ್ಗಾದ್ವಿ ಚತುರ್ದ್ವಿತ್ರಿ ಭೇದಾಃ ಪರಂ || ೯ ||

ಟೀ || ಪರಂ - ಅಜೀವಾಧಿಕರಣವು, ದ್ವಿಚತುರ್ದ್ವಿತ್ರಿ ಭೇದಾಃ- ದ್ವಿ - ಎರಡು, ಚತುಃ - ನಾಲ್ಕು, ದ್ವಿ - ಎರಡು, ತ್ರಿ - ಮೂರು, ಭೇದಾಃ- ಭೇದವುಳ್ಳಂಥಾ, ನಿರ್ವರ್ತನಾ ನಿಕ್ಷೇಪ ಸಂಯೋಗ ನಿಸರ್ಗಾಃ- ನಿರ್ವರ್ತನಾ - ನಿರ್ವರ್ತನೆಯು, ನಿಕ್ಷೇಪ - ನಿಕ್ಷೇಪವು, ಸಂಯೋಗ - ಸಂಯೋಗವು, ನಿಸರ್ಗ್ಗಾಃ - ನಿಸರ್ಗವು ಇವುಗಳು ( ಮೇಲೆ ಹೇಳಿದ ಭೇದಗಳುಳ್ಳವುಗಳು|| ತಾ ||ಮೂಲಗುಣ ನಿರ್ವರ್ತನಾಧಿಕರಣ, ಉತ್ತರಗುಣ ನಿರ್ವರ್ತನಾಧಿಕರಣಎಂದುನಿರ್ವರ್ತನೆಯು ೨ ಭೇದವು||ಮೂಲಗುಣ ನಿರ್ವರ್ತನಾಧಿಕರಣವು ೧ ಶರೀರ,೨ ವಾಕ್,೩ ಮನಸ್ಸು,೪ ಪ್ರಾಣ,೫ಅಪಾನವುಎಂದು ೫ ಪ್ರಕಾರವು. ಕಾಷ್ಠ, ಪುಸ್ತ, ಚಿತ್ರ ಬರೆಯುವದು ಮೊದಲಾದದ್ದು ಮಾಡುವದು ಉತ್ತರಗುಣ ನಿರ್ವರ್ತನಾಧಿಕರಣವು || ಇನ್ನು ಕೆಲವರು ಬೇರೇ ವಿಧವಾಗಿ ಹೇಳುತ್ತಾರೆ || ಶರೀರದಿಂದ ಕೆಟ್ಟ ಚೇಷ್ಟೆ ಉಂಟುಮಾಡುವದು ದೇಹದುಃಪ್ರಯುಕ್ತನಿರ್ವರ್ತನಾಧಿಕರಣವು || ಹಿಂಸೆಗೆ ಉಪಯೋಗವಾದ ಆಯುಧಾದಿಗಳನ್ನು ರಚನೆ ಮಾಡುವದಕ್ಕೆ ಉಪಕರಣ ನಿರ್ವರ್ತನಾಧಿ ಕರಣವು. ಎಂದು ಈ ಎರಡುಭೇಧವನ್ನು ಹೇಳುತ್ತಾರೆ || ೧ ಸಹಸಾ ನಿಕ್ಷೇಪಾಧಿಕರಣಂ. ೨ ಅನಾಭೋಗ ನಿಕ್ಷೇಪಾಧಿಕರಣ. ೩ ದುಃಪ್ರಮೃಷ್ಟ ನಿಕ್ಷೇಪಾಧಿಕರಣ. ೪ ಅಪ್ರತ್ಯವೇಕ್ಷಿತ ನಿಕ್ಷೇಪಾಧಿಕರಣ ಯೆಂದು ನಿಕ್ಷೇಪಾಧಿಕರಣ ೪ ಪ್ರಕಾರವು ||ಭೂಮಿಯನ್ನು ನೋಡದೆ ವಸ್ತುಗಳನ್ನು ಇರಿಸುವದು ಅಪ್ರತ್ಯವೇಕ್ಷಿತಾ

ನಿಕ್ಷೇಪಾಧಿಕರಣವು॥ ಭೂಮಿಯನ್ನು ಗುಡಿಸದೇ ವಸ್ತುಗಳ ನಿರಿಸುವದು ದುಃಪ್ರಮೃಷ್ಟ ನಿಕ್ಷೇಪಾಧಿಕರಣವು॥ ತ್ವರೆಯಿಂದ ಭೂಮಿಯಲ್ಲಿವಸ್ತುಗಳನ್ನು ಇರಿಸುವದಕ್ಕೆ ಸಹಸಾನಿಕ್ಷೇಪಾಧಿಕರಣವು॥ ಭೂಮಿಯಲ್ಲಿ ನೋಡದೆಗುಡಿಸದೆ ಶರೀರಾದಿಗಳನ್ನು ಇರಿಸುವದು ಅನಾಭೋಗ ನಿಕ್ಷೇಪಾಧಿಕರಣವು ॥ ಭಕ್ತಪಾನ ಸಂಯೋಗಾಧಿಕರಣ, ಉಪಕರಣಸಂಯೋಗಾಧಿಕರಣ ಎಂದುಸಂಯೋಗ ಎರಡು ಪ್ರಕಾರವು॥ಅನ್ನಪಾನ ದ್ರವ್ಯಗಳನ್ನು ಪರಸ್ಪರ ಮಿಶ್ರ ಮಾಡುವದು ಭಕ್ತಪಾನ ಸಂಯೋಗಾಧಿಕರಣವು ॥ ಪಾತ್ರಾದಿಗಳ ಸಾಮಗ್ರಿಗಳನ್ನು ಪರಸ್ಪರವಾಗಿರಿಸುವದು ಉಪಕರಣ ಸಂಯೋಗಾಧಿಕರಣವು ॥ ಕಾಯನಿಸರ್ಗ - ಮನೋನಿಸರ್ಗ - ವಾಗ್ನಿಸರ್ಗಾಧಿಕರಣವೆಂದು ನಿಸರ್ಗಾಧಿಕರಣವು ೩ ಪ್ರಕಾರವು ॥ ದುಷ್ಟಪ್ರಕಾರವಾದ ಶರೀರದಿಂದ ಪ್ರವರ್ತಿಸುವದು ಕಾಯನಿಸರ್ಗಾಧಿಕರಣವು ॥ ಕೆಟ್ಟರೀತಿ ವಚನದಿಂದ ಪ್ರವರ್ತಿಸುವದು ವಾಕ್ ನಿಸರ್ಗಾಧಿಕರಣವು ॥ ದುಷ್ಟವಾದ ಮನಸ್ಸಿನಿಂದ ಪ್ರವರ್ತಿಸುವದು ಮನೋನಿಸರ್ಗಾಧಿಕರಣವು ॥ ಈ ಮೇರೆ ೧೧ ಪ್ರಕಾರ ಅಜೀವಾಧಿಕರಣವು ॥

## ಜ್ಞಾ ನ ದ ರ್ಶ ನಾ ವ ರ ಣಾ ಧಿ ಕ ರ ಣ ೦.

ಅ ॥ ಜ್ಞಾನಾವರ್ಣೀಯ - ದರ್ಶನಾವರ್ಣೀಯ ಕರ್ಮಗಳು ಬರುವದಕ್ಕೆ ಕಾರಣವನ್ನು ಹೇಳುತ್ತಾರೆ.

ಸೂ ॥ ತತ್ಪ್ರದೋಷ ನಿಹ್ನವಮಾತ್ಸರ್ಯಾಂತರಾಯ ಸಾಧನೋಪ ಘಾತಾ ಜ್ಞಾನದರ್ಶನಾವರಣಯೋಃ ॥ ೧೦ ॥

ಟೀ ॥ ತತ್ಪ್ರದೋಷ ನಿಹ್ನವ ಮಾತ್ಸರ್ಯಾಂತರಾಯಸಾಧನೋಪಘಾತಾಃ - ತತ್ - ಆಜ್ಞಾನದರ್ಶನಗಳಲ್ಲಿ, ಪ್ರದೋಷ - ದುಷ್ಟಪರಿಣಾಮವು, ನಿಹ್ನವ - ಮರಸುವದು, ಮಾತ್ಸರ್ಯ - ಮಚ್ಚರಿಸುವದು, ಅಂತರಾಯ - ವಿಘ್ನವು, ಆಸಾಧನ - ಶರೀರ ವಚನಗಳಿಂದ ಇತರರ ಪ್ರಕಾಶವನ್ನು ಮುಚ್ಚುವದು, ಉಪಘಾತಾಃ ಬಾಧೆಯು ಇವುಗಳು, ಜ್ಞಾನದರ್ಶನಾ ವರಣಯೋಃ - ಜ್ಞಾನಾವರಣೀಯ - ದರ್ಶನಾವರಣೀಯ - ಕರ್ಮಗಳಿಗೆ ಆಸ್ರವ ವಾಗುತ್ತದೆ ॥

ತಾ || ಮೋಕ್ಷಕ್ಕೆ ಕಾರಣವಾಗಿರುವ ತತ್ವಜ್ಞಾನವನ್ನು ಹೇಳುತ್ತಾ ಇದ್ದರೆ ಅದನ್ನು ಹೇಳದೇಯಿರುವಂಥಾಬಬ್ಬನಿಗೆ ಅಂತರಂಗದಲ್ಲಿಕೇಳಬಾರದು ಪ್ರಶಂಸೆಮಾಡಬಾರದು ಎಂಬುವ ದುಷ್ಟಭಾವವು ಪ್ರದೋಷವೆಂಬುವದು ಆಗುತ್ತದೆ||ಯಾವದಾದರು ಕಾರಣದಿಂದ ಶಾಸ್ತ್ರವಿಷಯುವನ್ನುಕೇಳದರೆ ಅವರಿಗೆ ತನಗೆತಿಳದಿದ್ದರೂ ತಿಳಿಯುವದಿಲ್ಲವೆಂದು ಮರಮಾಚುವದುನಿಹ್ನವವು||ತನಗೆತಿಳದ ಶಾಸ್ತ್ರವಿಷಯವನ್ನು ಇತರರಿಗೆ ಹೇಳಿದರೆ ಅವನೂ ತನ್ನಂತೆ ಆದಾನೆಂಬುವದೆ ಮೊದಲಾದದ್ದು ಮಾತ್ಸರ್ಯವು|| ಮೋಕ್ಷ ಶಾಸ್ತ್ರಾಭ್ಯಾಸ ಮಾಡುವದನ್ನು ಮತ್ತು ಅದಕ್ಕೆ ಬೇಕಾದ ಪುಸ್ತಕ ಸ್ಥಳ ವಗ್ಯೆರೆ ಅನುಕೂಲಗಳು ಮಾಡುವದನ್ನು ಸಹತಡೇಮಾಡುವದು ಕೆಡಿಸುವದುಸಹ ಅಂತರಾಯವು|| ಇತರರಿಂದ ಪ್ರಕಾಶಮಾಡಿದ ಜ್ಞಾನವನ್ನು ಮರೆಸುವದು ಆಸಾಧನವು || ಇತರರು ಜ್ಞಾನದಿಂದ ಪ್ರಸಿದ್ಧಿಯಾಗಿದ್ದರೆ ಅಂಥಾವರ ಜ್ಞಾನವನ್ನು ಪ್ರಸಿದ್ಧಿಯನ್ನು ದೇಹದಿಂದಲೂ ಮಾತಿನಿಂದಲೂ ದೂಷಣೆ ಮಾಡುವದು ಉಪಘಾತವು|| ಈಮೇಲೆ ಹೇಳಿದ ಪ್ರದೋಷಾದಿ ಆರುಗಳನ್ನು ಜ್ಞಾನದ ವಿಷಯದಲ್ಲಿ ಜ್ಞಾನಿಗಳಲ್ಲಿ ಮಾಡಿದರೆ ಜ್ಞಾನಾವರಣೀಯ ಕರ್ಮಕ್ಕೂ, ದರ್ಶನ ವಿಷಯದಲ್ಲಿ ದರ್ಶನವುಳ್ಳವರಲ್ಲಿ ಮಾಡಿದರೆ ದರ್ಶನಾವರಣೀಯ ಕರ್ಮಕ್ಕೂ ಆಸ್ರವ ವಾಗುತ್ತದೆ || ೧೦ ||

ಅ ಸ ದ್ವೇ ದ್ಯಾ ಸ್ರ ವಾ ಧಿ ಕ ರ ಣ ಂ.

ಅ || ದಾರಿದ್ರಾದಿಪಾಪ ಕರ್ಮ ಬರುವದನ್ನು ಹೇಳುತ್ತಾರೆ.

ಸೂ || ದುಃಖ ಶೋಕ ತಾಪಾಕ್ರಂದನ ವಧ ಪರಿದೇವನಾನ್ಯಾತ್ಮಪರೋಭಯಸ್ಥಾನ್ಯಸದ್ವೇದ್ಯಸ್ಯ || ೧೧ ||

ಟೀ || ದುಃಖ ಶೋಕ ತಾಪಾಕ್ರಂ ದನವಧ ಪರಿದೇವನಾನಿ - ದುಃಖ - ದುಃಖವು, ಶೋಕ - ಶೋಕವು, ತಾಪ - ಸಂತಾಪವು, ಆಕ್ರಂದನ - ಅಳುವದು, ವಧ - ಕೊಲೆಯು, ಪರಿದೇವನಾನಿ - ಸಂಕ್ಲೇಶ ಪರಿಣಾಮಾಲಂಬನ ಸ್ವಪರಾನುಗ್ರಹಾಭಿಲಾಷಾ ವಿಷಯಾನುಕಂಪಾ ಪ್ರಚುರಾತ್ಮಕ ಪರಿವೇದನವು, ಅಂದರೆ ಅನುಕಂಪ ಪೂರ್ವಕವಾದ ರೋದನವು, ಆತ್ಮ ಪರೋಭಯಸ್ಥಾನಾನಿ-ಆತ್ಮ - ತಾನು, ಪರ - ಅನ್ಯನು,

ಉಭಯು, ಇಬ್ಬರು ಇವರುಗಳಲ್ಲಿ, ಸ್ಥಾನಾನಿ - ಇರುವಂಥಾವುಗಳು-ಅಸದ್ವೇದ್ಯಾಸ್ರವಕ್ಕೆ ಕಾರಣ ವಾಗುತ್ತವೆ ||

ತಾ || ಇಷ್ಟವಿಯೋಗ ಅನಿಷ್ಟ ಸಂಯೋಗದಿಂದ ನಿಷ್ಠೂರ ಮಾತನ್ನು ಕೇಳುವದು ಮೊದಲಾದ ಬಾಹ್ಯ ಕಾರಣಗಳುಳ್ಳಂಥಾ ಪೀಡಾಲಕ್ಷಣವಾದಂಥಾ ಪರಿಣಾಮವೇಯೇ ದುಃಖವು|| ಉಪಕಾರವನ್ನು ಮಾಡುವಂಥಾ ಬಂಧು ಜನ ಮೊದಲಾದವರು ನಾಶವಾಗುವದ್ದರಿಂದ ಅವರಲ್ಲಿರುವ ಅಭಿಲಾಷೆಯಿಂದ ಕೂಡಿದ ಮನುಷ್ಯನ ಚಿಂತೆ ಖೇದ ಇವುಗಳ ಪರಿಣಾಮವೇ ಶೋಕವು || ತಿರಸ್ಕಾರ ಕಠಿಣವಾದಮಾತು ಇವುಗಳನ್ನು ಕೇಳಿದ್ದರಿಂದ ಮಲೀಮಸವಾದ ಅಂತಃಕರಣವುಳ್ಳ ಮನುಷ್ಯನಿಗೆ ತೀವ್ರ ಪರಿಣಾಮವೇ ತಾಪವು|| ಸಂತಾಪದಿಂದ ಕಣ್ಣುನೀರು ಮೊದಲಾದದ್ದು ಸುರಿಸುತ್ತಾ ಬಹಳ ಪ್ರಲಾಪ ಮಾಡುವದು ಆಕ್ರಂದನವು|| ಆಯುಷ್ಯ - ಇಂದ್ರಿಯಬಲ-ಪ್ರಾಣ - ಇವುಗಳನ್ನು ಅಗಲಿಸುವದು ವಧೆಯು || ಸಂಕ್ಲೇಶ ಪರಿಣಾಮವನ್ನು ಆಶ್ರಯಿಸಿ ಇರುವಂಥಾವನು ತನಗೂ ಅನ್ಯನಿಗೂ ಅನುಗ್ರಹ ಮಾಡುವ ಅಭಿಲಾಷೆ ವಿಷಯವಾಗಿ ವುಳ್ಳಂಥಾ ಅನುಕಂಪವೇ ಪ್ರಚುರವಾಗಿ ವುಳ್ಳಂಥಾ ಗುಣದ ಜ್ಞಾಪಕದ ಕೀರ್ತನ ಪೂರ್ವಕವಾಗಿ ಅಳುವುದು ಪರಿದೇವನವು ||ಇವುಗಳು, ತನ್ನಲ್ಲಿಯಾದರೂ, ಇನ್ನೊಬ್ಬನಲ್ಲಿಯಾದರೂ, ತಮ್ಮಿಬ್ಬರಲ್ಲಿಯಾದರೂ ಇರುವಂಥಾವುಗಳು ಆದರೆ ಅದು ಅಸಾತಾವೇದನೀಯ ಕರ್ಮಕ್ಕೆ ಆಸ್ರವವು ಆಗುತ್ತದೆ|| ೧೧||

ಸದ್ವೇದ್ಯಾಸ್ರವಾಧಿಕರಣಂ.

ಅ || ಪುಣ್ಯಕರ್ಮ ಬರುವದನ್ನು ಹೇಳುತ್ತಾರೆ.

ಸೂ || ಭೂತವ್ರತ್ಯನುಕಂಪಾದಾನ ಸರಾಗಸಂಯಮಾದಿಯೋಗಃ ಕ್ಷಾಂತಿಶ್ಶೌಚಮಿತಿ ಸದ್ವೇದ್ಯಸ್ಯ || ೧೨ ||

ಟೀ || ಭೂತವ್ರತ್ಯನುಕಂಪಾದನ ಸರಾಗಸಂಯಮಾದಿ ಯೋಗಃ - ಭೂತ - ಪ್ರಾಣಿಗಳು, ವ್ರತಿ - ಅಹಿಂಸಾದಿ ವ್ರತವುಳ್ಳವರು ಇವರುಗಳಲ್ಲಿ, ಅನುಕಂಪಾ - ದಯೆಯು, ದಾನ - ಸತ್ಪಾತ್ರದಾನವು. ಸರಾಗಸಂಯಮ - ಸರಾಗಚಾರಿತ್ರವು, ಆದಿ-ಆದಿ ಶಬ್ದದಿಂದ ದೇಶಸಂಯಮವು ಅಕಾಮನಿರ್ಜರೆಯು- ಬಾಲತಪಸ್ಸು ಎಂಬುವನುಳ್ಳವರಲ್ಲಿ,ಯೋಗಃ-

ಸಮಾಧಾನವು, ಕ್ಷಾಂತಿಃ - ಕ್ಷಮೆಯು, ಶೌಚಂ - ಜೀವಿತಾರೋಗ್ಯೇಂದ್ರಿಯ ಭೋಗದಲ್ಲಿ ಲೋಭವಿಲ್ಲದೇ ಇರುವದು, ಇತಿ - ಇತಿ ಶಬ್ದದಿಂದ ಅರ್ಹತ್ಪರಮೇಷ್ಠಿಗಳ ಪೂಜಾದಿಗಳು ಬಾಲವೃದ್ಧ ತಪಸ್ವಿಗಳಲ್ಲಿವೈಯ್ಯಾವೃತ್ಯಾದಿಗಳು, ಸದ್ವೇದ್ಯಸ್ಯ-ಸಾತಾವೇದನೀಯ ಕರ್ಮಕ್ಕೆ ಆಸ್ರವವು ಆಗುತ್ತವೆ ॥

ತಾ ॥ ಚತುರ್ಗತಿಯಲ್ಲಿರುವ ಪ್ರಾಣಿಗಳಿಗೆ ಮತ್ತು ಪಂಚಾಣುವ್ರತ ಮಹಾವ್ರತವನ್ನು ಧರಿಸಿರುವರಿಗೆ ಉಂಟಾದ ದುಃಖವನ್ನು ನೋಡಿ ಆದುಃಖವನ್ನುಹೋಗಲಾಡಿಸುವದಕ್ಕೆ ಆವಿಷಯದಪರಿಣಾಮಕ್ಕೆ ಭೂತವ್ರತ್ಯನುಕಂಪಾ ಎಂದು ಹೆಸರು || ಇತರರಿಗೆ ಉಪಕಾರಾರ್ಥವಾಗಿ ತಂನ ದ್ರವ್ಯ ಆಹಾರಔಷಧಾದಿಗಳನ್ನು ಕೊಡುವದು ದಾನವು ॥ ಪ್ರೀತಿಯೊಡನೆ ಕೂಡಿದ ಸಂಯಮವು ಸರಾಗಸಂಯಮ ವಾಗುತ್ತದೆ ॥ ಆದಿ ಶಬ್ದದಿಂದ ಸಂಯಮಾ ಸಂಯಮ-ಅಕಾಮನಿ ರ್ಜರಾ-ಬಾಲತಪಸ್ಸು ಇವುಗಳನ್ನು ಚಂದಾಗಿ ಭಾವನೆಮಾಡುವದು ಮತ್ತು ಕ್ರೋಧಾದಿ ಕಷಾಯಗಳನ್ನು ಬಿಡುವದು||ಇವುಗಳನ್ನು ಕ್ರಮವಾಗಿ ಆಚರಿಸುವದಕ್ಕೆ ಯೋಗವೆಂದು ಹೆಸರು ॥ ಶುಭ ಪರಿಣಾಮದಿಂದ ಕ್ರೋಧಾದಿಗಳು ಇಲ್ಲದಿದ್ದರೆ ಅದೇ ಕ್ಷಾಂತಿಯು ॥ ಲೋಭವನ್ನು ಬಿಡುವದು ಶೌಚವು ॥ ಇತಿ ಶಬ್ದದಿಂದ ಅರ್ಹತ್ಪೂಜೆ ಮಾಡುವದರಲ್ಲಿ ಪರಿಣಾಮವು ಬಾಲವೃದ್ಧ ತಪಸ್ವಿಗಳಿಗೆ ವೈಯ್ಯಾವೃತ್ಯ ಮೊದಲಾದಂಥಾದ್ದು ಮಾಡುವದು ಇವುಗಳೆಲ್ಲಾ ಸಾತಾವೇದನೀಯ ಕರ್ಮಕ್ಕೆ ಆಸ್ರವ ವಾಗುತ್ತದೆ ॥ ೧೨ ॥

ದ ರ್ಶ ನ ಮೋ ಹ ನೀ ಯಾ ಸ್ರ ವಾ ಧಿ ಕ ರ ಣ ಂ .

ಅ ॥ ದರ್ಶನ ಮೋಹನೀಯ ಕರ್ಮ ಬರುವದನ್ನು ಹೇಳುತ್ತಾರೆ.

ಸೂ ॥ ಕೇವಲಿ ಶ್ರುತಸಂಘ ಧರ್ಮದೇವಾ ವರ್ಣವಾದೋ ದರ್ಶನ ಮೋಹಸ್ಯ ॥ ೧೩ ॥

ಟೀ ॥ ಕೇವಲಿ ಶ್ರುತ ಸಂಘ ಧೇವಾ ವರ್ಣವಾದಃ - ಕೇವಲಿ - ಕೇವಲ ಜ್ಞಾನಿಗಳು, ಶ್ರುತ - ಪರಮಾಗಮವು, ಸಂಘ - ಚತುಸ್ಸಂಘವು, ಧರ್ಮ - ಅಹಿಂಸಾಲಕ್ಷಣ ಧರ್ಮವು, ದೇವಾ - ಚತುರ್ನಿಕಾಯಾ ಮರರ್ಗಳು ಇವರ್ಗಳಲ್ಲಿ, ಅವರ್ಣವಾದಃ - ಅಪವಾದ ಮಾಡಂಥಾದ್ದು,

( ಹೇಳುವದು ) ದರ್ಶನಮೋಹಸ್ಯ-ದರ್ಶನ ಮೋಹನೀಯ ಕರ್ಮಕ್ಕೆ ಆಸ್ರವ ವಾಗುತ್ತದೆ ॥

ತಾ ॥ ಕೇವಲಿಗಳು ಆಹಾರಾದಿಗಳನ್ನು ತೆಗದುಕೊಳುತ್ತಿದ್ದರೆಂಬುವದು ಕೇವಲಿ ಅವರ್ಣವಾದವು॥ ಜಿನಮತ ಶಾಸ್ತ್ರದಲ್ಲಿ ಮದ್ಯಮಾಂಸಾದಿ ಸೇವನೆ ಮಾಡುವದುಮೊದಲಾದ ದೋಷಗಳನ್ನು ಹೇಳಿವೆಎಂಬುವದು ಶಾಸ್ತ್ರ ಅವರ್ಣವಾದವು ॥ ರತ್ನತ್ರಯ ಪವಿತ್ರಗಾತ್ರರಾದ ಚಾತುರ್ವರ್ಣವನ್ನು ದೂಷಿಸುವದು ಸಂಘಾವರ್ಣವಾದವು ॥ ಜಿನೇಶ್ವರರಿಂದ ಹೇಳಲ್ಪಟ್ಟ ದಯಾ ಮೂಲ ಧರ್ಮವನ್ನು ನಡೆಸುವರಿಗೆಅಸುರಗತಿ ಮೊದಲಾದ ದೋಷವನ್ನು ಹೇಳುವದು ಧರ್ಮಾವರ್ಣವಾದವು ॥ ಚತುರ್ನಿಕಾಯಾ ಮರರುಗಳಿಗೆ ಮದ್ಯ ಮಾಂಸಾದಿ ಸೇವಿಗಳೆಂಬುವದೇ ಮೊದಲಾದ ದೋಷ ಹೇಳುವದು ದೇವಾವರ್ಣವಾದವು ॥ ಈ ಮೇಲೆ ಹೇಳಿದ ಕೇವಲಿ ಮೊದಲಾದ ಐದು ವಿಷಯದಲ್ಲಿ ದೋಷಾರೋಪಣೆ ಮಾಡುವದ್ದರಿಂದ ದರ್ಶನ ಮೋಹನೀಯ ಕರ್ಮಾಸ್ರವ ವಾಗುತ್ತದೆ ॥ ೧೩ ॥

## ಚಾ ರಿ ತ್ರ ಮೋ ಹ ನೀ ಯಾ ಸ್ರ ವಾ ಧಿ ಕ ರ ಣ ಂ.

ಅ ॥ ಚಾರಿತ್ರ ಮೋಹನೀಯ ಕರ್ಮ ಬರುವದನ್ನು ಹೇಳುತ್ತಾರೆ.

ಸೂ ॥ ಕಷಾಯೋದಯಾತ್ತೀವ್ರ ಪರಿಣಾಮಶ್ಚಾರಿತ್ರ ಮೋಹಸ್ಯ ॥ ೧೪ ॥

ಟೀ ॥ ಕಷಾಯೋದಯಾತ್ - ಕ್ರೋಧಾದಿಗಳ ಉದಯದ್ವಿಶೆಯಿಂದ, ತೀವ್ರ ಪರಿಣಾಮಃ - ತೀವ್ರವಾದ ಪರಿಣಾಮವು, ಚಾರಿತ್ರಮೋಹಸ್ಯ - ಚಾರಿತ್ರ ಮೋಹನೀಯ ಕರ್ಮಕ್ಕೆ ಆಸ್ರವ ವಾಗುತ್ತದೆ ॥

ತಾ ॥ ತನಗೂ ಇತರನಿಗೂ ಕ್ರೋಧಮಾನ ಮಾಯಾಲೋಭಗಳನ್ನು ಹೆಚ್ಚಿಸುವದು, ತಪಸ್ವಿಗಳನ್ನು ದೂಷಿಸುವದು, ಸಂಕ್ಲಿಷ್ಟ ಲಿಂಗ ಅಂದರೆ ಕಷ್ಟವಾದ ವೇಷದ ವ್ರತ ಮಾಡುವದು ಮೊದಲಾದದ್ದು ಮಾಡುವದರಿಂದ ಕಷಾಯ ವೇದನೀಯ ಕರ್ಮಾಸ್ರವ ವಾಗುತ್ತದೆ ॥ ಸದ್ಧರ್ಮವನ್ನು ಪರಿಹಾಸ್ಯ ಮಾಡುವದು, ದೀನ ಜನಗಳನ್ನು ನೋಡಿ ಹಾಸ್ಯ ಮಾಡುವದು, ನಿಸ್ಸಾರವಾದ ಹಾಸ್ಯ ಪ್ರಾಯವಾದಂಥಾ ಮಾತು ಮೊದಲಾದದ್ದು ಆಡುವದರಿಂದ ಹಾಸ್ಯ ವೇದನೀಯ ಕರ್ಮಕ್ಕೆ ಆಸ್ರವ

ವಾಗುತ್ತದೆ॥ವಿಚಿತ್ರ ಕ್ರೀಡೆಯಲ್ಲಿ ಆಸಕ್ತಿಯು, ವ್ರತಶೀಲಗಳಲ್ಲಿ ಸುತರಾಂ ರುಚಿ ಇಲ್ಲದೇ ಯಿರುವದು, ಇತರರಿಗೆ ರತಿಯನ್ನು ಉಂಟುಮಾಡುವದು, ಮತ್ತು ರತಿಯನ್ನು ನಾಶಮಾಡುವದು, ಪಾಪದಲ್ಲಿರುವಂಥಾವರುಗಳ ಸಂಸರ್ಗ ಮಾಡುವವರಲ್ಲಿ ಕುಶಲವಾದವರನ್ನು ಪ್ರೋತ್ಸಾಹ ಮಾಡುವದು ಮೊದಲಾದದ್ದು ರತಿವೇದನೀಯ ಕರ್ಮಾಸ್ರವವು॥ ತನಗೆ ಶೋಕವನ್ನು ಉಂಟುಮಾಡುವದು ಅನ್ಯರ ಶೋಕವನ್ನು ನೋಡಿ ಸಂತೋಷವಡುವದುಮೊದಲಾದದ್ದು ಶೋಕವೇದನೀಯ ಕರ್ಮಕ್ಕೆಆಸ್ರವವು॥ ತನಗೆ ಭಯವನ್ನು ಉಂಟುಮಾಡಿಕೊಳ್ಳುವದು, ಇತರರಿಗೆ ಭಯವನ್ನು ಉಂಟುಮಾಡುವದು, ನಿರ್ದಯವಾಗಿರುವದು ಇತರರಿಗೆ ತೊಂದರೆ ಕೊಡುವದು ಮೊದಲಾದದ್ದು ಭಯವೇದನೀಯ ಕರ್ಮಕ್ಕೆ ಆಸ್ರವವು॥ಕುಶಲರಾಗಿಯು, ಆಚಾರ ಶೀಲರಾಗಿಯು, ಸಮರ್ಥರಾಗಿಯು ಇರುವರನ್ನು ನೋಡಿ ಜುಗುಪ್ಸೆ ಮಾಡುವದು ಅಪವಾದ ಹೇಳುವದು ಮೊದಲಾದದ್ದು ಜುಗುಪ್ಸಾ ವೇದನೀಯ ಕರ್ಮಕ್ಕೆ ಆಸ್ರವವು॥ ಲಲಿತಾಭಿಲಾಷೆಯು, ಅತಿಸಂಧಾನದಲ್ಲಿ ಅಪೇಕ್ಷೆಯು, ಪ್ರವೃದ್ಧರಾಗ ಪರಾಂಗನಾದರಹಸನಾದಿಗಳು ಮೊದಲಾದದ್ದು ಸ್ತ್ರೀ ವೇದನೀಯ ಕರ್ಮಕ್ಕೆಆಸ್ರವವು॥ಸ್ವಲ್ಪಕ್ರೋಧವು ಅತ್ಯುತ್ಸಾಹ ವಿಲ್ಲದೆ ಸ್ವದಾರ ಸಂತೋಷವು ವಸ್ತುಗಳಲ್ಲಿ ಪ್ರೀತಿಯು ಇಲ್ಲದೇ ಯಿರುವದೇ ಮೊದಲಾದದ್ದು ಪುಂ ವೇದನೀಯ ಕರ್ಮಕ್ಕೆ ಆಸ್ರವವು॥ ವೇಗವಾದ ಕ್ರೋಧಾದಿಗಳು, ಗುಹ್ಯೇಂದ್ರಿಯ ಮೊದಲಾದವುಗಳನ್ನು ಛೇದಿಸುವದು, ಪುರುಷ ಸ್ತ್ರೀಯರಲ್ಲಿ ಅನಂಗ ಕ್ರೀಡೆಯಲ್ಲಿ ಆಸಕ್ತಿ, ಮತ್ತೊಬ್ಬನ ಹೆಂಡತಿಯನ್ನು ಅಪೇಕ್ಷೆಮಾಡುವದು ಮೊದಲಾದದ್ದು ನಪುಂಸಕ ಕರ್ಮಕ್ಕೆ ಆಸ್ರವವು॥ ಇವುಗಳೆಲ್ಲಾ ಚಾರಿತ್ರ ಮೋಹನೀಯ ಕರ್ಮಗಳು ಬರುವದಕ್ಕೆ ಕಾರಣವು ॥ ೧೪ ॥

ನ ರ ಕಾ ಯು ಷ್ಯಾ ಧಿ ಕ ರ ಣ ಂ.

ಅ ॥ ನರಕಕ್ಕೆ ಹೋಗುವದಕ್ಕೆ ಆಯುಷ್ಯಾಸ್ರವವನ್ನು ಹೇಳುತ್ತಾರೆ.

ಸೂ ॥ ಬಹ್ವಾರಂಭ ಪರಿಗ್ರಹತ್ವಂ ನಾರಕಸ್ಯಾಯುಷಃ ॥ ೧೫ ॥

ಟೀ ॥ ಬಹ್ವಾರಂಭ ಪರಿಗ್ರಹತ್ವಂ - ಬಹು - ಅನೇಕಗಳಾದಂಥಾ, ಆರಂಭ - ಪ್ರಾಣಿಗಳಿಗೆ ದುಃಖಕ್ಕೆ ಕಾರಣವಾದ ವ್ಯಾಪಾರವು, ಪರಿಗ್ರ

ಹತ್ವಂ - ಚೇತನ ಅಚೇತನ ಮಿಶ್ರವಾದ ಪರಿಗ್ರಹವು, ನಾರಕಸ್ಯ - ನರಕ ಗತಿ ಸಂಬಂಧವಾದ, ಆಯುಷಃ - ಆಯುಃ ಕರ್ಮದ ಆಸ್ರವವು ||

ತಾ || ಪ್ರಾಣಿಗಳ ದುಃಖಕ್ಕೆ ಕಾರಣವಾದ ನಡತೆಯು, ಬಹಳ ಪರಿಗ್ರಹವು ಹಿಂಸೆ ಮೊದಲಾದ ಕ್ರೂರ ವ್ಯಾಪಾರದಲ್ಲಿ ಸರ್ವದಾ ಪ್ರವರ್ತಿಸುವದು ಪರದ್ರವ್ಯ ಅಪಹರಿಸುವದು, ಪಂಚೇಂದ್ರಿಯ ವಿಷಯದಲ್ಲಿ ಅಧಿಕಾಭಿಲಾಷೆಯು. ಮರಣ ಕಾಲದಲ್ಲಿ ಕೃಷ್ಣ ಲೇಶ್ಯಾಪರಿಣಾಮದಿಂದ ಉಂಟಾದ ರೌದ್ರ ಧ್ಯಾನವು ಇವು ಮೊದಲಾದದ್ದು ನರಕಾಯುಷ್ಯ ಕರ್ಮಕ್ಕೆ ಆಸ್ರವ ವಾಗುತ್ತದೆ || ೧೫ ||

ತಿ ರ್ಯ ಗ್ಯೋ ನ್ಯಾ ಯು ಷ್ಯಾ ಸ್ರ ವಾ ಧಿ ಕ ರ ಣಂ.

ಅ || ತಿರ್ಯಕ್ ಪ್ರಾಣಿಗಳು ಆಗುವದಕ್ಕೆ ಆಯುಷ್ಯಾಸ್ರವವನ್ನು ಹೇಳುತ್ತಾರೆ.

ಸೂ || ಮಾಯಾತ್ಯೈರ್ಯಗ್ಯೋನಸ್ಯ || ೧೬ ||

ಟೀ || ಮಾಯಾ - ವಂಚನೆ ಸ್ವಭಾವವು, ತಿರ್ಯಗ್ಯೋನಸ್ಯ - ತಿರ್ಯಗ್ಗತಿ ಆಯುಷ್ಯಕ್ಕೆ ಆಸ್ರವ ವಾಗುತ್ತದೆ ||

ತಾ || ಚಾರಿತ್ರ ಮೋಹನೀಯ ಕರ್ಮೋದಯದಿಂದ ಉಂಟಾದ ಆತ್ಮ ಕುಟಿಲ ಭಾವ ರೂಪವಾದ ವಂಚನೆಯು, ಮಿಥ್ಯಾತ್ವದೊಡನೆ ಕೂಡಿದ ಧರ್ಮೋಪದೇಶವು, ಶೀಲವಿಲ್ಲದೇ ಇರುವದು, ಬಹಳ ಸಂಧಾನದಲ್ಲಿ ಪ್ರೀತಿಯು, ನೀಲ ಕಪೋತ ಲೇಶ್ಯಾ ಪರಿಣಾಮದಿಂದ ಉಂಟಾದ ಆರ್ತ ಧ್ಯಾನವು ಮರಣಕಾಲದಲ್ಲಿ ಯಿರುವದರಿಂದ ತಿರ್ಯಗ್ಗತಿ ಆಯುಷ್ಯಕ್ಕೆ ಆಸ್ರವ ವಾಗುತ್ತದೆ || ೧೬ ||

ಮ ನು ಷ್ಯಾ ಯು ಷ್ಯಾ ಸ್ರ ವಾ ಧಿ ಕ ರ ಣಂ.

ಅ || ಮನುಷ್ಯನಾಗುವದಕ್ಕೆ ಆಯುಷ್ಯಾಸ್ರವವನ್ನು ಹೇಳುತ್ತಾರೆ.

ಸೂ || ಅಲ್ಪಾರಂಭ ಪರಿಗ್ರಹತ್ವಂ ಮಾನುಷಸ್ಯ || ೧೭ || ೦

ಟೀ || ಅಲ್ಪಾರಂಭ ಪರಿಗ್ರಹತ್ವಂ - ಅಲ್ಪ - ಸ್ವಲ್ಪವಾದಂಥಾ, ಆರಂಭ-ಪ್ರಾಣಿ ಪೀಡಾ ಹೇತುವಾದಂಥಾ ವ್ಯಾಪಾರವು, ಪರಿಗ್ರಹತ್ವಂ- ಬಾಹ್ಯಾಭ್ಯಂತರ ಪರಿಗ್ರಹವು, ಮಾನುಷಸ್ಯ - ಮನುಷ್ಯಾಯುಷ್ಯದ ಆಸ್ರವ ವಾಗುತ್ತದೆ ||

Funding: Tattva Heritage Foundation,Kolkata. Digitization: eGangotri.



ತಾ || ಸ್ವಲ್ಪವಾದಂಥಾ ಪ್ರಾಣಿ ಪೀಡಾ ಹೇತುವಾದಂಥಾ ವ್ಯಾಪಾರವು, ಸ್ವಲ್ಪ ಪರಿಗ್ರಹವು, ವಿನಯಸ್ವಭಾವವು, ಶೀಲತ್ವವು, ಮಂಗಳಕರವಾದ ಸ್ವಭಾವವು, ಒಳ್ಳೇ ಗುಣವುಳ್ಳ ವ್ಯವಹಾರವು, ಸ್ವಲ್ಪ ಕ್ರೋಧಾದಿಗಳು, ಮರಣ ಕಾಲದಲ್ಲಿ ಸಂಕ್ಲೇಶ ಪರಿಣಾಮ ಇಲ್ಲದೇ ಯಿರುವದು ಯಿವು ಮೊದಲಾದ್ದರಿಂದ ಮನುಷ್ಯಾಯುಷ್ಯಾಸ್ರವವು ಆಗುತ್ತದೆ||

ಅ || ಮತ್ತು ಮನುಷ್ಯಾಯುಷ್ಯಾಸ್ರವವನ್ನು ಹೇಳುತ್ತಾರೆ.

ಸೂ || ಸ್ವಭಾವ ಮಾರ್ದವಂ ಚ || ೧೮ ||

ಟೀ || ಸ್ವಭಾವ ಮಾರ್ದವಂಚ- ಸ್ವಭಾವ ಸ್ವಭಾವದಿಂದ, ಮಾರ್ದವಂ - ನಿರಹಂಕಾರವಾಗಿರುವದು, ಚ - ಮನುಷ್ಯಗತ್ಯಾಸ್ರವವು ||

ತಾ || ಉಪದೇಶ ವಿಲ್ಲದೇ ಸ್ವಭಾವದಿಂದಲೇ ನಿರಹಂಕಾರವಾಗಿ ಕೋಮಲವಾಗಿರುವದು ಮನುಷ್ಯಗತಿಯ ಆಯುಷ್ಯದ ಆಸ್ರವಕ್ಕೆ ಕಾರಣವಾದಂಥಾದ್ದು ಆಗುತ್ತದೆ || ೧೮ ||

ಅ || ಸಾಮಾನ್ಯವಾಗಿ ಎಲ್ಲಾ ಆಯುಷ್ಯಾಸ್ರವವನ್ನು ಹೇಳುತ್ತಾರೆ.

ಸೂ || ನಿಶ್ಶೀಲ ವ್ರತತ್ವಂ ಚ ಸರ್ವೇಷಾಂ || ೧೯ ||

ಟೀ || ನಿಶ್ಶೀಲ ವ್ರತತ್ವಂ-ಶೀಲಗಳು ವ್ರತಗಳು ಇಲ್ಲದೇ ಯಿರುವದು, ಚ - ಅಲ್ಪಾರಂಭ ಪರಿಗ್ರಹತ್ವವು, ಸರ್ವೇಷಾಂ - ಸಮಸ್ತವಾದಂಥಾ ಆಯುಃ ಕರ್ಮಗಳಿಗೆ ಆಸ್ರವ ವಾಗುತ್ತದೆ ||

ತಾ || ಅಹಿಂಸಾದಿ ವ್ರತಗಳು ದಿಗ್ವ್ರತಾದಿ ಶೀಲಗಳು ಯಿಲ್ಲದೇ ಯಿರುವದು ಅಲ್ಪಾರಂಭ ಪರಿಗ್ರಹತ್ವವು ಯಿವುಗಳಿಂದ ಚತುರ್ಗತಿಯ ಆಸ್ರವಕ್ಕೆ ಕಾರಣ ವಾಗುತ್ತದೆ || ೧೯ ||

## ದೇ ವಾ ಯು ಷ್ಯಾ ಧಿ ಕ ರ ಣ ಂ.

ಅ || ದೇವಗತಿ ಪಡೆಯುವದಕ್ಕೆ ಕಾರಣವಾದ ಆಸ್ರವವನ್ನು ಹೇಳುತ್ತಾರೆ

ಸೂ|| ಸರಾಗ ಸಂಯಮ ಸಂಯಮಾಸಂಯಮಾಕಾಮನಿರ್ಜರಾ ಬಾಲತಪಾಂಸಿ ದೈವಸ್ಯ || ೨೦ ||

ಟೀ || ಸರಾಗಸಂಯಮಸಂಯಮಾಸಂಯಮಾಕಾಮನಿರ್ಜರಾ ಬಾಲತಪಾಂಸಿ - ಸರಾಗಸಂಯಮ - ಸರಾಗ ಚಾರಿತ್ರವು. ಸಂಯಮಾಸಂಯಮ - ದೇಶಚಾರಿತ್ರ (ಸಂಯಮ ) ವು, ಅಕಾಮನಿರ್ಜರಾ-

ಅಕಾಮನಿರ್ಜರೆಯು, ಬಾಲತಪಾಂಸಿ - ಮಿಥ್ಯಾತ್ವದೊಡನೆಕೂಡಿದ ತಪಸ್ಸು, ಇವುಗಳು, ದೈವಸ್ಯ - ದೇವಗತಿಯ ಆಯುಃ ಕರ್ಮಾಸ್ರವಕ್ಕೆ ಕಾರಣ ವಾಗುತ್ತದೆ ॥

ತಾ ॥ ಕರ್ಮಗಳನ್ನು ನಾಶ ಮಾಡುವದರಲ್ಲಿಯೂ, ವ್ರತಾದಿ ಶುಭಾಚರಣೆ ಮಾಡುವದರಲ್ಲಿಯೂ, ರಾಗದೊಡನೆಕೂಡಿದಭಾವಕ್ಕೆ ಸರಾಗಸಂಯಮವೆಂದು ಹೆಸರು ॥ ಸಂಯಮಾಸಂಯಮ-ತ್ರಸಕಾಯಗಳಿಗೂ ಹಿಂಸೇಮಾಡದೇಯಿರುವನು ಮೊದಲಾದದ್ದು ಸಂಯಮವು. ಸ್ಥಾವರಹಿಂಸಾನಿವೃತ್ತಿರೂಪವಾದ ಅಸಂಯಮವು ಈ ಎರಡು ಪರಿಣಾಮಕ್ಕೆ ಸಂಯಮಾಸಂಯಮವೆಂದು ಹೆಸರು ॥ ಪರಾಧೀನದ್ದೆಶೆಯಿಂದ ಹೊಟ್ಟೆಹಸಿವು, ಬಾಯಾರಿಕೆ ಮೊದಲಾದ ಬಾಧೆಗಳನ್ನು ಅನುಭವಿಸುವಾಗ್ಯೆ ಮತ್ತು ಬ್ರಹ್ಮಚರ್ಯ, ಭೂಶಯನ,ಮತ್ತು ಮರಣ ಏಟು,ವಗ್ಯೆರೆಹಿಂಸೆ, ಪರಿತಾಪ ಮೊದಲಾದ್ದನ್ನು ಅನುಭವಿಸುವಾಗ್ಯೆ ಮಂದವಾದ ಕ್ರೋಧ ಮಾನ ಮಾಯಾ ಲೋಭ ರೂಪಭಾವನೆಗಳಿರುವದು ಅಕಾಮನಿರ್ಜರೆಯು ॥ ಆತ್ಮಜ್ಞಾನವಿಲ್ಲದೆ ಮಿಥ್ಯಾತ್ವದೊಡನೆಕೂಡಿದ ಪಂಚಾಗ್ನಿಮೊದಲಾದ ತಪಸ್ಸುಗಳಿಗೆ ಬಾತಪಸ್ಸು (ಅಜ್ಞಾನತಪಸ್ಸು) ಎಂದು ಹೆಸರು ॥ ಈ ಮೇಲೆ ಹೇಳಿದವುಗಳಿಂದ ದೇವಾಯುಃಕರ್ಮಾಸ್ರವವಾಗುತ್ತದೆ ॥ ೨೦ ॥

ಅ ॥ ಸಮ್ಯಕ್ತ್ವವೂ ದೇವಾಯುಷ್ಯಾಸ್ರವಕಾರಣವೆಂದು ಹೇಳುತಾರೆ.

ಸೂ ॥ ಸಮ್ಯಕ್ತ್ವಂ ಚ ॥ ೨೧ ॥

ಟೀ ॥ ಸಮ್ಯಕ್ತ್ವಂ-ನಿಶ್ಚಯವ್ಯವಹಾರರೂಪ ಸಮ್ಯಕ್ತ್ವಪರಿಣಾಮವು, ಚ-ಹಿಂದೆಹೇಳಿದವೂಕೂಡ ದೇವಾಯುಃಕರ್ಮಾಸ್ರವವುಆಗುತ್ತದೆ ॥ ತಾ ॥ ಹಿಂದಲಸೂತ್ರದಲ್ಲಿ ಹೇಳಿದ ಸರಾಗಸಂಯಮ ಸಂಯಮಾಸಂಯಮವೆಂಬುವಗಳು ಸಮ್ಯಕ್ತ್ವಇಲ್ಲದೇ ಯಿದ್ದರೂ ಇರುವದ್ದರಿಂದ,ಸೌಧರ್ಮಾದಿವಿಶೇಷಜ್ಞಾಪಕ ನಿಮಿತ್ತವಾಗಿ ,, ಸಮ್ಯಕ್ತ್ವಂಚ,, ಎಂದು ಸರಾಗದೇಶಚಾರಿತ್ರಗರ್ಭೀಕೃತವಾದ ಬೇರೇಸೂತ್ರವನ್ನು ಹೇಳಿದರು ॥ ೨೧ ॥

ಅ ಶು ಭ ನಾ ಮಾ ಸ್ರ ವಾ ಧಿ ಕ ರ ಣ ೦.

ಅ || ಅಶುಭಕರ್ಮಗಳು ಬರುವದನ್ನು ಹೇಳುತ್ತಾರೆ.

ಸೂ || ಯೋಗವಕ್ರತಾವಿಸಂವಾದನಂ ಚಾ ಶುಭ

ಸ್ಯ ನಾಮ್ನಃ || ೨೨ ||

ಟೀ || ಯೋಗವಕ್ರತಾ-ಮನವಚನಕಾಯವ್ಯಾಪಾರಗಳಲ್ಲಿ ಕುಟಿಲ ಭಾವವು, ವಿಸಂವಾದನಂಚ- ಮತ್ತೊಂದುಪ್ರಕಾರ ಪ್ರವರ್ತಿಸುವದು ಇವುಗಳು, ಅಶುಭಸ್ಯ-ಅಪ್ರಶಸ್ತವಾದಂಥಾ, ನಾಮ್ನಃ- ನಾಮಕರ್ಮದ ಆಸ್ರವಗಳು ಆಗುತ್ತವೆ || ತಾ || ಮನಸ್ಸು, ದೇಹ, ಮಾತು ಇವುಗಳವ್ಯಾಪಾರದಲ್ಲಿ ಕುಟಿಲಪರಿಣಾಮವು ಯೋಗವಕ್ರತಾಎಂಬುವದು ಆಗುತ್ತದೆ || ಅಭ್ಯುದಯನಿಶ್ರೇಯಸಪ್ರಯೋಜನದಲ್ಲಿ ಸಮೀಚೀನವಾಗಿ ಪ್ರವರ್ತಿಸುವವರನ್ನುಕುರಿತು ಆ ಪ್ರಕಾರಮಾಡಬೇಡ ಎಂದು ಹೇಳಿ ಅದಕ್ಕೆವಿಪರೀತವಾದ ವಾಗ್ವ್ಯಾಪಾರಮಾಡುವದಕ್ಕೆ ವಿಸಂವಾದವು ಎಂದುಹೆಸರು || ಚ ಎಂದುಹೇಳಿದ್ದರಿಂದ ಮಿಥ್ಯಾದರ್ಶನ, ಪೈಶೂನ್ಯವೊದಲಾದವುಗಳಿಂದಲೂಸಹ ಅಶುಭನಾಮಕರ್ಮಾಸ್ರವವಾಗುತ್ತದೆ || ೨೨ ||

ಶು ಭ ನಾ ಮಾ ಸ್ರ ವಾ ಧಿ ಕ ರ ಣ ೦.

ಅ || ಶುಭಕರ್ಮ ಬರುವದನ್ನು ಹೇಳುತ್ತಾರೆ.

ಸೂ || ತದ್ವಿಪರೀತಂ ಶುಭಸ್ಯ || ೨೩ ||

ಟೀ || ತದ್ವಿಪರೀತಂ-ತತಃ - ಆ ಅಶುಭನಾಮಕರ್ಮಕ್ಕೆ, ವಿಪರೀತಂ-ವಿರುದ್ಧವಾದದ್ದು, ಶುಭಸ್ಯ-ಶುಭನಾಮಕರ್ಮಕ್ಕೆ ಆಸ್ರವವಾಗುತ್ತದೆ || ತಾ || ಆ ಅಶುಭನಾಮಕರ್ಮಕ್ಕೆ ವಿಪರೀತವಾದದ್ದು ಅಂದರೆ. ಶರೀರವಚನಗಳ ಋಜುಭಾವವು, ಧರ್ಮದಲ್ಲಿರುಚಿಯು, ಧಾರ್ಮಿಕರದರ್ಶನಸಂಭ್ರಮವು ಪ್ರಶಸ್ತವಾದ ಪರಿಣಾಮವು ಸಂಸಾರದಲ್ಲಿಭೀರುತ್ವವು, ಯಿವುವೊದಲಾದ ಶುಭಪರಿಣಾಮಗಳಿಂದ ಶುಭನಾಮಕರ್ಮಕ್ಕೆ ಆಸ್ರವವಾಗುತ್ತದೆ || ೨೩ ||

ತೀ ರ್ಥ ಕ ರ ನಾ ಮಾ ಸ್ರ ವಾ ಧಿ ಕ ರ ಣ ೦.

ಅ || ತೀರ್ಥಕರ ನಾಮಕರ್ಮದ ಆಸ್ರವವನ್ನು ಹೇಳುತ್ತಾರೆ.

ಸೂ || ದರ್ಶನವಿಶುದ್ಧಿರ್ವಿನಯ ಸಂಪನ್ನತಾಶೀಲವ್ರತೇ

ಷ್ವನತೀಚಾರೋಽಭೀಕ್ಷ್ಣಜ್ಞಾನೋಪಯೋಗ ಸಂವೇ
ಗೌ ಶಕ್ತಿತಸ್ತ್ಯಾಗತಪಸೀ ಸಾಧುಸಮಾಧಿರ್ವೈಯ್ಯಾವೃತ್ತ್ಯ
ಕರಣಮರ್ಹದಾಚಾರ್ಯ್ಯ ಬಹುಶ್ರುತಪ್ರವಚನ ಭಕ್ತಿ
ರಾವಸ್ಯಕಾಪರಿಹಾಣಿ ಮಾರ್ಗಪ್ರಭಾವನಾ ಪ್ರವಚನ
ವತ್ಸಲತ್ವಮಿತಿ ತೀರ್ಥಕರತ್ವಸ್ಯ ||೨೪ ||

ಟೀ|| ೧ ದರ್ಶನವಿಶುದ್ಧಿಃ-ಸಮ್ಯಕ್ತ್ವದಲ್ಲಿ ಇಪ್ಪತ್ತೈದು ಮಲಗಳನ್ನು ಬಿಟ್ಟಿರುವದು, ೨ವಿನಯಸಂಪನ್ನತಾ-ಜ್ಞಾನ ಜ್ಞಾನವುಳ್ಳವರು ಇವರಲ್ಲಿ ಆದರವು ಕಷಾಯ ನೋಕಷಾಯಗಳನ್ನು ಬಿಟ್ಟಿರುವದು, ೩ಶೀಲವ್ರತೇಷು-ಶೀಲವ್ರತಇವುಗಳಲ್ಲಿ, ಅನತಿಚಾರಃ-ಪಾಪವಿಲ್ಲದನಡತೆಯು, ೪ ಅಭೀಕ್ಷ್ಣಜ್ಞಾನೋಪಯೋಗಸಂವೇಗೌ-ಅಭೀಕ್ಷ್ಣ - ಸರ್ವದಾ- ಜ್ಞಾನ-ಸಮ್ಯಜ್ಜ್ಞಾನದಲ್ಲಿ, ಉಪಯೋಗ-ಕೂಡಿರುವದು ಅಂದರೆ ವಸ್ತುಗಳ ಯಥಾಸ್ವರೂಪವನ್ನು ತಿಳಿದಿರುವದು,೫ ಸಂವೇಗೌ-ಧರ್ಮದಲ್ಲಿಪ್ರೀತಿಯುಸಂಸಾರವಲ್ಲಿ ಭೀರುತ್ವವು, ಶಕ್ತಿತಸ್ತ್ಯಾಗತಪಸೀ ೬ಶಕ್ತಿತಃ-ತನ್ನ ಶಕ್ತಿಗೆ ಅನುಸಾರವಾಗಿ, ತ್ಯಾಗ-ದಾನವು ಪರಿಗ್ರಹವನ್ನು ಬಿಡುವದು, ೭ ತಪಸೀ-ಜೀವಮಾರ್ಗಕ್ಕೆ ವಿರೋಧವಿಲ್ಲದಹಾಗೆ ಕಾಯಕ್ಲೇಶದ ಅನುಷ್ಠಾನವನ್ನು ಮಾಡುವದು,೮ ಸಾಧುಸಮಾಧಿಃ-ಮುನಿಜನಗಳ ಅವರತಪಸ್ಸಿನ-ಕಷ್ಟವಿಘ್ನಗಳನ್ನು ಪರಿಹರಮಾಡುವದು, ೯ ವೈಯ್ಯಾವೃತ್ಯಕರಣಂ-ಸಾಧುಜನರಿಗೆ ದುಃಖವುಂಟಾದರೆ ದೋಷವಿಲ್ಲದವಿಧಿಯಿಂದ ಪರಿಹರಿಸುವುದು, ಅರ್ಹದಾಚಾರ್ಯಬಹುಶ್ರುತಪ್ರವಚನಭಕ್ತಿಃ-೧೦ಅರ್ಹತ್-ಅರ್ಹತ್ಪರಮೇಷ್ಠಿಗಳು,೧೧ಆಚಾರ್ಯ-ಆಚಾರ್ಯರು,೧೨ಬಹುಶ್ರುತ-ಸ್ವಸಮಯಪರಮಯಗಳನ್ನು ತಿಳಿದಂಥಾವರು, (ಉಪಾಧ್ಯಾಯರು ), ೧೩ ಪ್ರವಚನ-ಪರಮಾಗಮವು ಇವುಗಳಲ್ಲಿ, ಭಕ್ತಿಃ- ಭಾವವಿಶುದ್ಧಿಯೊಡನೆಕೂಡಿದ ಅನುರಾಗವು,೧೪ ಆವಶ್ಯಕಾಪರಿಹಾಣಿಃ- ೧ ಸಾಮಾಯಿಕ ೨ ಸ್ತವನ ೩ ವಂದನಾ ೪ ಪ್ರತಿಕ್ರಮಣ ೫ ಪ್ರತ್ಯಾಖ್ಯಾನ ೬ ಕಾಯೋತ್ಸರ್ಗಎಂಬ ಈ ೬ಷಡಾವಶ್ಯಕಕ್ರಿಯೆಗಳಿಗೆಹಾನಿಯಿಲ್ಲದೇಯಿರೋಣವು,೧೫ ಮಾರ್ಗಪ್ರಭಾವನಾ-ಜಿನಪೂಜೆ ಜ್ಞಾನ ತಪಸ್ಸು ಧರ್ಮಇವುಗಳನ್ನು ಪ್ರಕಾಶಮಾಡುವದು,೧೬ಪ್ರವಚನವತ್ಸಲತ್ವಂ-ಹಸುವುತನ್ನಕರುವಿನಲ್ಲಿಪ್ರೀ

ತ್ರಿಯಿಡುವಂತೆ ಸ್ವಧರ್ಮದಲ್ಲಿರುವ ಚಾತುರ್ವರ್ಣದವರಲ್ಲಿಯೂ ಕೃತ್ರಿಮವಿಲ್ಲದಸ್ನೇಹವನ್ನು ಮಾಡುವದು, ಇತಿ- ಈ ಪ್ರಕಾರವಾಗಿ ಅಂದರೆ ಹಿಂದೆ ಹೇಳಿದ ೧೬ ಭಾವನೆಗಳು, ತೀರ್ಥಂಕರತ್ವಸ್ಯ-ತೀರ್ಥಂಕರರ ನಾಮ ಕರ್ಮಕ್ಕೆ ಆಸ್ರವವಾಗುತ್ತವೆ ||

ನೀ ಚೈ ರ್ಗೋ ತ್ರಾ ಸ್ರ ವಾ ಧಿ ಕ ರ ಣ ಂ.

ಅ || ನೀಚಗೋತ್ರದಲ್ಲಿ ಹುಟ್ಟುವದಕ್ಕೆ ಆಸ್ರವವನ್ನು ಹೇಳುತ್ತಾರೆ.

ಸೂ || ಪರಾತ್ಮನಿಂದಾಪ್ರಶಂಸೆಸದಸದ್ಗುಣೋಚ್ಛಾದ
ನೋದ್ಭಾವನೇ ಚ ನೀಚೈರ್ಗೋತ್ರಸ್ಯ || ೨೫ ||

ಟೀ || ಪರಾತ್ಮನಿಂದಾಪ್ರಶಂಸೇ-ಪರ-ಅನ್ಯರು, ಆತ್ಮ-ತಾನುಇವರುಗಳ, ನಿಂದಾ-ದೂಷಣೆಯು, ಪ್ರಶಂಸೇ - ಸ್ತೋತ್ರವು ಇವುಗಳು, ಸದಸದ್ಗುಣೋಚ್ಛಾದನೋದ್ಭಾವನೇಚ-ಸತ್-ಇರುವಂಥಾ, ಅಸತ್-ಇಲ್ಲದೇಯಿರುವಂಥಾ, ಗುಣ-ಗುಣಗಳನ್ನು, (ಕ್ರಮವಾಗಿ) ಆಚ್ಛಾದನ-ಮರಸುವದು,ಉದ್ಭವನೇ ಚ-ಪ್ರಕಾಶಮಾಡುವದು ಇವುಗಳು,ನೀಚೈರ್ಗೋತ್ರಸ್ಯ-ನೀಚಗೋತ್ರಕರ್ಮಕ್ಕೆ ಆಸ್ರವವಾಗುತ್ತದೆ ||

ತಾ || ಇತರರನ್ನುದೂಷಿಸುವದು ತನ್ನನ್ನುಸ್ತೋತ್ರಮಾಡಿಕೊಳ್ಳುವದು, ಇನ್ನೊಬ್ಬರಲ್ಲಿದ್ದ ಒಳ್ಳೇಗುಣವನ್ನು ಮರಸುವದು ಅಂದರೆ ಪ್ರಕಾಶಮಾಡದೇಯಿರುವದು ತನ್ನಲ್ಲಿಲ್ಲದ ಗುಣವನ್ನು ಪ್ರಕಾಶಮಾಡುವದು ಇವುಗಳು ನೀಚಗೋತ್ರದ ಆಸ್ರವಕ್ಕೆಕಾರಣವಾಗುತ್ತದೆ || ೨೫||

ಉ ಚ್ಚೈ ರ್ಗೋ ತ್ರಾ ಸ್ರ ವಾ ಧಿ ಕ ರ ಣ ಂ.

ಅ || ಉತ್ತಮಕುಲವನ್ನು ಪಡೆಯುವದಕ್ಕೆ ಬೇಕಾದ ಆಸ್ರವವನ್ನು ಹೇಳುತ್ತಾರೆ.

ಸೂ || ತದ್ವಿಪರ್ಯಯೋನೀಚೈರ್ವೃತ್ಯನುತ್ಸೇಕೌ
ಚೋತ್ತರಸ್ಯ || ೨೬ ||

ಟೀ || ತದ್ವಿಪರ್ಯಯಃ-ತತ್-ಆನೀಚೈರ್ಗೋತ್ರಾಸ್ರವಕ್ಕೆ, ವಿಪರ್ಯಯಃ-ವಿಪರೀತ ವಾದಂಥಾ ಆತ್ಮನಿಂದೆಮೊದಲಾದಾಥಾದ್ದು, ನೀಚೈರ್ವೃತ್ಯನುತ್ಸೇಕೌ-ನೀಚೈರ್ವೃತ್ತಿ-ಗುಣೋತ್ಕೃಷ್ಟರಾದಂಥಾವರುಗಳಲ್ಲಿ ವಿನಯದಿಂದನಮ್ರಭಾವವು, ಅನುತ್ಸೇಕೌ-ಉತ್ಕೃಷ್ಟಜ್ಞಾನಿ

ಯೊದರು ಮದವಿಲ್ಲದೇ ಇರುವದು, ಇವ್ರುಗಳು, ಉತ್ತರಸ್ಯ - ಉಚ್ಚೈ ಗೋತ್ರ ಕರ್ಮಕ್ಕೆ ಆಸ್ರವ ವಾಗುತ್ತದೆ||

ತಾ || ಆತ್ಮನಿಂದೆಯು, ಪರಪ್ರಶಂಸೆಯು, ಇದ್ದಂಥಾ ಗುಣಗಳನ್ನು ಪ್ರಕಾಶ ಮಾಡುವದು ಇಲ್ಲದೇ ಯಿರುವ ಗುಣವನ್ನು ಪುರಸು ಥವು ಗುಣಾಧಿಕರಲ್ಲಿ ನಮ್ರಾಭಾವವು, ಜ್ಞಾನಾದಿಗಳಿಂದತಾನು ಅಧಿಕನಾದರು ಗರ್ವಪಡದೇ ಯಿರುವದು ಇವ್ರುಗಳೆಲ್ಲಾ ಉಚ್ಚೈರ್ಗೋತ್ರ ಕರ್ಮಕ್ಕೆ ಆಸ್ರವ ಕಾರಣಗಳು ಆಗುತ್ತವೆ || ೨೬ ||

ಅ|| ತಡೇಮಾಡುವದರಿಂದ ಅಂತರಾಯ ಕರ್ಮ ಬರುತ್ತೆಂದು ಹೇಳುತ್ತಾರೆ.

ಸೂ || ವಿಘ್ನಕರಣ ಮಂತರಾಯಸ್ಯ || ೨೭ ||

ಟೀ || ವಿಘ್ನಕರಣಂ - ದಾನಾದಿಗಳಿಗೆ ವಿಘ್ನವನ್ನು ಮಾಡುವ ಪರಿಣಾಮವು, ಅಂತರಾಯಸ್ಯ - ಅಂತರಾಯ ಕರ್ಮಕ್ಕೆ ಆಸ್ರವ ವಾಗುತ್ತದೆ|| ತಾ || ದಾನವನ್ನು ಕೊಡುವದಕ್ಕೆ ವಿಘ್ನಮಾಡಿದರೆ ದಾನಾಂತರಾಯ ಕರ್ಮಾಸ್ರವ ವಾಗುತ್ತದೆ| ಇತರರಲಾಭಕ್ಕೆ ವಿಘ್ನ ಮಾಡಿದರೆ ಲಾಭಾಂತರಾಯ ಕರ್ಮಾಸ್ರವ ವಾಗುತ್ತದೆ || ಇತರರು ಭೋಗಪಡುವದಕ್ಕೆ ವಿಘ್ನ ಮಾಡಿದರೆ ಭೋಗಾಂತರಾಯ ಕರ್ಮಾಸ್ರವವಾಗುತ್ತದೆ || ಇತರರ ಉಪಭೋಗಕ್ಕೆ ವಿಘ್ನ ಮಾಡಿದರೆ ಉಪಭೋಗಾಂತರಾಯ ಕರ್ಮಾಸ್ರವ ವಾಗುತ್ತದೆ| ಇತರರ ಬಲ ವೀರ್ಯ ಇವ್ರುಗಳನ್ನು ಹೋಗಲಾಡಿಸುವರಿಗೆ ವೀರ್ಯಾಂತರಾಯ ಕರ್ಮಾಸ್ರವ ವಾಗುತ್ತದೆ || ೨೭ ||

ಇತಿ ತತ್ವಾರ್ಥಾಧಿಗಮೆ ಮೋಕ್ಷಶಾಸ್ತ್ರೇ ಷಷ್ಠೋಧ್ಯಾಯಃ.



## ಸಪ್ತಮೋಧ್ಯಾಯ ಪ್ರಾರಂಭಃ.

### ವ್ರತಾಧಿಕರಣಂ.

ಅ || ವ್ರತ ಲಕ್ಷಣವನ್ನು ಹೇಳುತ್ತಾರೆ.

ಸೂ || ಹಿಂಸಾನೃತಸ್ತೇಯಾಬ್ರಹ್ಮಪರಿಗ್ರಹೇಭ್ಯೋವಿರತಿರ್ವ್ರತಂ ||

ಟೀ ॥ ಹಿಂಸಾನೃತಸ್ತೇಯಾ ಬ್ರಹ್ಮಪರಿಗ್ರಹೇಭ್ಯಃ. ಹಿಂಸಾ - ಕೊಲೆಯು, ಅನೃತ - ಸುಳ್ಳು, ಸ್ತೇಯ - ಕಳವು, ಅಬ್ರಹ್ಮ - ಸ್ತ್ರೀಭೋಗವು, ಪರಿಗ್ರಹೇಭ್ಯಃ - ಪರಿಗ್ರಹವು ಯಿವುಗಳ ದೆಸೆಯಿಂದ, ವಿರತಿಃ - ಅಗಲಿಕೆಯು, ವ್ರತಂ - ವ್ರತವು ಇಂತೆಂದು ಹೇಳಲ್ಪಡುತ್ತದೆ ॥೧॥

ತಾ ॥ « ಶುಭಃಪುಣ್ಯಸ್ಯ », ಎಂಬುದಾಗಿ ಆಸ್ರವಾಧ್ಯಾಯದಲ್ಲಿ ಹೇಳಲ್ಪಟ್ಟ ಪುಣ್ಯಾಸ್ರವವನ್ನು ಈ ಅಧ್ಯಾಯದಲ್ಲಿ ವಿವರಿಸುತ್ತಾರೆ. ಹಿಂಸಾದಿಗಳ ಬಿಡೋಣವು ವ್ರತವಾಗುತ್ತದೆ. ಶುಭ ಮನೋವಾಕ್ಕಾಯಗಳನ್ನು ಬಿಡೋಣವು ವ್ರತವೆಂಬುವದು ಹೋಗಲಾಡಿಸಲ್ಪಡುತ್ತದೆ. ಅಂದರೆ ಆತ್ಮನಿಗೆ ಅಶುಭೋಪಯೋಗ, ಶುಭೋಪಯೋಗ, ಶುದ್ಧೋಪಯೋಗಗಳೆಂದು ಮೂರುಪ್ರಕಾರವು, ಹಿಂಸಾದಿ ಪಾಪ ಸಂಬಂಧವಾದದ್ದು ಅಶುಭೋಪಯೋಗವು, ಪುಣ್ಯಸಂಬಂಧವಾದದ್ದು ಶುಭೋಪಯೋಗವು. ಪುಣ್ಯಪಾಪಗಳನ್ನು ಬಿಟ್ಟ ನಿರ್ಮಲವಾದ ಚಿತ್ತಶುದ್ಧಿಯು ಶುದ್ಧೋಪಯೋಗವಾಗುತ್ತದೆ. ಆದ್ದರಿಂದ ನಿರ್ಮಲಚಿತ್ತನಾಗಿ ಇರೋಣವು ವ್ರತವಾಗುವದಿಲ್ಲ ಆ ಶುದ್ಧೋಪಯೋಗದಿಂದ ಮೋಕ್ಷವಾಗುತ್ತದೆ ॥

ಅ ॥ ವ್ರತಗಳ ಭೇದಗಳನ್ನು ಹೇಳುತ್ತಾರೆ.

ಸೂ ॥ ದೇಶಸರ್ವತೋಣುಮಹತೀ ॥ ೨ ॥

ಟೀ ॥ ದೇಶಸರ್ವತಃ - ದೇಶ = ಏಕದೇಶವು, ಸರ್ವತಃ - ಸಮಸ್ತವು ಇವುಗಳ ದೆಸೆಯಿಂದ, ( ಅಗಲಿಕೆಯು ) ಅಣುಮಹತೀ - ಅಣು- ಅಣುವ್ರತವು, ಮಹತೀ- ಮಹಾವ್ರತವು ಇಂತೆಂದು ಆಗುತ್ತದೆ॥

ತಾ ॥ ಹಿಂಸಾದಿಗಳನ್ನು ಒಂದುಕಡೆ ಬಿಟ್ಟು ಮತ್ತೊಂದುಕಡೆ ಇಟ್ಟುಕೊಂಡಿದ್ದರೆ ಅಣುವ್ರತವೆಂತಲು, ನಿರವಶೇಷವಾಗಿಬಿಟ್ಟು ಇದ್ದರೆ ಮಹಾವ್ರತವೆಂತಲು, ಆ ಐದು ವ್ರತಗಳು ಎರಡೆರಡು ಪ್ರಕಾರಗಳಾಗುತ್ತಲಿವೆ ॥ ೨ ॥

## ವ್ರ ತ ಭಾ ವ ನಾ ಧಿ ಕ ರ ಣ ಂ.

ಅ ॥ ಈ ೫ ವ್ರತಗಳು ಸ್ಥಿರವಾಗಿರುವ ಭಾವನಾ ಭೇದಗಳನ್ನು ಹೇಳುತ್ತಾರೆ,

ಸೂ ॥ ತತ್ಸ್ಥೈರ್ಯಾರ್ಥಂ ಭಾವನಾಃ ಪಂಚ ಪಂಚ ॥ ೩ ॥

ಟೀ || ತತ್ಸ್ಥೈರ್ಯಾರ್ಥಂ - ತತ್- ಆ ಅಹಿಂಸಾದಿವ್ರತಗಳ, ಸ್ಥೈರ್ಯಾರ್ಥಂ - ಸ್ಥಿರವಾಗಿರುವದಕ್ಕೋಸ್ಕರ, ಭಾವನಾಃ - ಭಾವನೆಗಳು, ಪಂಚ ಪಂಚ - ಐದೈದು ಆಗುತ್ತವೆ ||

ತಾ || ಆ ಅಹಿಂಸಾದಿ ವ್ರತಗಳು ಹೋಗುತ್ತವಾದಕಾರಣ ಅವುಗಳು ಕೆಡದಂತೆ ಆ ವ್ರತಗಳನ್ನು ನಿಲ್ಲಿಸಿಕೊಳ್ಳುವದಕ್ಕೋಸ್ಕರ ಒಂದೊಂದು ವ್ರತವನ್ನು ಕುರಿತು ಐದೈದು ಭಾವನೆಗಳನ್ನು ಮಾಡಬೇಕು || ಪದೆಪದೆ ಚಿಂತನೆ ಮಾಡುವದಕ್ಕೆ ಭಾವನೆ ಎಂದು ಹೆಸರು || ೩ ||

ಅ ಹಿಂ ಸಾ ವ್ರ ತ ಭಾ ವ ನಾ ಧಿ ಕ ರ ಣಂ.

ಅ || ಹಿಂಸೆಮಾಡಬಾರದೆಂಬುವದು ದೃಢವಾಗಿರುವದಕ್ಕೆ ಭಾವನೆಗಳನ್ನು ಹೇಳುತ್ತಾರೆ.

ಸೂ || ವಾಙ್ಮನೋಗುಪ್ತೀರ್ಯಾದಾನನಿಕ್ಷೇಪಣಸಮಿತ್ಯಾಲೋಕಿತಪಾನಭೋಜನಾನಿ ಪಂಚ || ೪ ||

ಟೀ|| ವಾಙ್ಮನೋಗುಪ್ತೀರ್ಯಾದಾನ ನಿಕ್ಷೇಪಣ ಸಮಿತ್ಯಾಲೋಕಿತಪಾನ ಭೋಜನಾನಿ-ವಾಕ್- ವಾಗ್ಗುಪ್ತಿಯು, ಮನೋಗುಪ್ತಿ - ಮನೋಗುಪ್ತಿಯು, ಈರ್ಯಾ - ಈರ್ಯಾಸಮಿತಿಯು, ಆದಾನ ನಿಕ್ಷೇಪಣ-ಆದಾನನಿಕ್ಷೇಪಣಾ ಸಮಿತಿಯು, ಆಲೋಕಿತಪಾನ ಭೋಜನಾನಿ - ನೋಡಿ ಪಾನ ಭೋಜನ ಮಾಡುವದು, ಇವುಗಳು, ಪಂಚ - ಈ ಐದು ಅಹಿಂಸಾವ್ರತದ ಭಾವನೆಗಳು ||

ತಾ || ವಿಶೇಷ ಮಾತನಾಡುವದ್ದರಿಂದ ಸೂಕ್ಷ್ಮ ಪ್ರಾಣಿಗಳಿಗೆ ಹಿಂಸೆಯು, ಸ್ಥೂಲಪ್ರಾಣಿಬಾಧೆಯು ಆಗುತ್ತದೆ ಯಾದಕಾರಣ ವಾಗ್ಗುಪ್ತಿಯನ್ನು ಅಂಗೀಕರಿಸಿದರೆ ಅಹಿಂಸಾವ್ರತ ವೃದ್ಧಿಯಾಗುತ್ತೆ. ಇದೇ ವಾಗ್ಗುಪ್ತಿಯು || ಮನಸ್ಸನ್ನು ಸ್ವೇಚ್ಛೆಯಾಗಿ ಬಿಡದೆ ಆಜ್ಞಾ ವಿಚಯವೆಂಬ ಧರ್ಮಧ್ಯಾನದಿಂದ ಅಂದರೆ ಶಾಸ್ತ್ರೋಕ್ತ ಪ್ರಕಾರ ಆಲೋಚಿಸಿ ಹೇಯೋಪಾದೇಯಗಳನ್ನು ತಿಳಿದು ಮನೋನಿಗ್ರಹ ಮಾಡೋಣವು ಎಂಬುದುಮನೋಗುಪ್ತಿಯು.||ತಿರಗಾಡುವದರಲ್ಲಿಯುಉಗುಳುವಲ್ಲಿಯು ಶಿಂಬಳ ತೆಗೆಯುವಲ್ಲಿಯು ಪ್ರಾಣಿ ಘಾತವಾಗುತ್ತವೆ ಯಾದಕಾರಣ ಇದರ ಸಂಕ್ಷೇಪಮಾಡೋಣವೆಂಬುದು ಈರ್ಯಾಸಮಿತಿಯು || ಪದಾರ್ಥ ವಿಡು

ವದರಲ್ಲಿಯು ತೆಗೆದುಕೊಳ್ಳುವಲ್ಲಿಯು ಅನೇಕ ಪ್ರಾಣಿಹಿಂಸೆಯಾಗದಂತೆ ತೆಗೆದುಕೊಳ್ಳೋಣವು ಮಡಗೋಣವು ಎಂಬ ಆದಾನ ನಿಕ್ಷೇಪಣಾಸ ಮಿತಿಯು || ಜಲಪಾನಾದಿಗಳ ಮಾಡುವಲ್ಲಿಯು ಭೋಜನ ಮಾಡುವಲ್ಲಿ ಯು ಪ್ರಾಣಿಹಿಂಸೆ ಬರುತ್ತದೆ ಯಾದಕಾರಣ ಜಲವನ್ನು ಶೋಧಿಸಿ ಚಂ ದಾಗಿ ನೋಡಿ ನೀರು ಕುಡಿಯೋಣವು, ಸೂಕ್ಷ್ಮ ಕ್ರಿಮಿಗಳು ಇರತಕ್ಕ ಕಾಯಿಪಲ್ಯಗಳನ್ನು ಇಂಥಾ ಯಿತರ ವಸ್ತುಗಳನ್ನು ತನ್ನ ಶರೀರಕ್ಕೆ ವ ಡಂಬಡದ ವಸ್ತುಗಳನ್ನು ಬಿಟ್ಟುಭೋಜನಮಾಡೋಣವು ಯೆಂಬ ಆಲೋ ಕಿತ ಪಾನಭೋಜನವು || ಈ ಐದುಭಾವನೆಗಳು ಜೀವಸನ್ನೇ ಕುರಿತು ವುಂಟಾಗುತ್ತಾಗಿ ಈ ಭಾವನೆಯಿಂದ ಅಹಿಂಸಾವ್ರತ ಸ್ಥಿರವಾಗುತ್ತೆ||೪||

## ಸತ್ಯವ್ರತಭಾವನಾಧಿಕರಣಂ.

ಅ || ಸುಳ್ಳಾಡಬಾರದೆಂಬುವದು ದೃಢವಾಗಿರುವದಕ್ಕೆ ಭಾವನೆಗಳನ್ನು ಹೇಳುತ್ತಾರೆ.

ಸೂ || ಕ್ರೋಧಲೋಭಭೀರುತ್ವ ಹಾಸ್ಯಪ್ರತ್ಯಾಖ್ಯಾನಾನ್ಯನು ವೀಚಿಭಾಷಣಂ ಪಂಚ || ೫ ||

ಟೀ || ಕ್ರೋಧಲೋಭಭೀರುತ್ವ ಹಾಸ್ಯಪ್ರತ್ಯಾಖ್ಯಾನಾನಿ - ಕ್ರೋಧ = ಕೋಪ, ಲೋಭ - ಆಶೆ - ಭೀರುತ್ವ - ಭಯ, ಹಾಸ್ಯ - ಹಾಸ್ಯ ಇವುಗಳನ್ನು, ಪ್ರತ್ಯಾಖ್ಯಾನಾನಿ - ಬಿಡೋಣವು, ಅನುವೀಚಿಭಾಷ ಣಂಚ - ನಿರವದ್ಯ ಭಾಷಣವುಕೂಡ, ಪಂಚ - ಈ ಐದು ಸತ್ಯವ್ರತದ ಭಾವನೆಗಳು ||

ತಾ || ಕ್ರೋಧಬಿಡೋಣವು, ಲೋಭಬಿಡೋಣವು, ಭಯಬಿ ಡೋಣವು, ಹಾಸ್ಯಬಿಡೋಣವು, ಪಾಪಕರವಾದ ಮಾತುಬಿಡೋಣವು, ಈ ಐದುಗಳು ಸತ್ಯವ್ರತವನ್ನು ವೃದ್ಧಿಮಾಡುತ್ತಲಿವೆ, ಇವುಗಳು ಉಂ ಟಾದರೆ ಯಥಾರ್ಥಮಾತು ಹೊರಡುವದಿಲ್ಲ. ವಂಚನಾದಿಗಳಿಂದ ಸುಳ್ಳು ಮಾತಾಗಲಿ ಪರಹಿಂಸಾ ಜನಕವಾದ ಮಾತುಗಳಾಗಲಿ ಉಂಟಾಗುತ್ತೆ ಯಾದಕಾರಣ ಸತ್ಯವ್ರತದ ಹಾನಿಯಾಗುತ್ತೆ. ಆದ್ದರಿಂದ ಸತ್ಯವ್ರತದ ಸ್ಥಿರೀಕರಣಾರ್ಥವಾಗಿ ಈ ಐದು ಭಾವನೆಗಳನ್ನು ಮಾಡಬೇಕು || ೫ ||

## ಅಸ್ತೇಯಭಾವನಾಧಿಕರಣಂ.

ಅ ॥ ಕಳ್ಳತನ ಮಾಡಬಾರದೆಂಬುವದು ದೃಢವಾಗಿರುವದಕ್ಕೆ ಭಾವನೆಗಳನ್ನು ಹೇಳುತ್ತಾರೆ.

ಸೂ ॥ ಶೂನ್ಯಾಗಾರವಿಮೋಚಿತಾವಾಸ ಪರೋಪರೋಧಾಕರಣ ಭೈಕ್ಷ್ಯಶುದ್ಧಿಸದ್ಧರ್ಮಾವಿಸಂವಾದಾಃ ಪಂಚ ॥

ಟೀ ॥ ಶೂನ್ಯಾಗಾರವಿಮೋಚಿತಾವಾಸ ಪರೋಪರೋಧಾಕರಣ ಭೈಕ್ಷ್ಯಶುದ್ಧಿಸದ್ಧರ್ಮಾವಿಸಂವಾದಾಃ - ಶೂನ್ಯಾಗಾರ- ಜನರಿಲ್ಲದಮನೆ, ವಿಮೋಚಿತಾವಾಸ-ಬಿಡಲ್ಪಟ್ಟವಾಸಸ್ಥಳ, ಪರೋಪರೋಧಾಕರಣ - ಅನ್ಯರಿಗೆ ಉಪದ್ರವವನ್ನು ಮಾಡದೇಯಿರುವದು, ಭೈಕ್ಷ್ಯಶುದ್ಧಿ- ಆಚಾರಶಾಸ್ತ್ರಾನುಸಾರ ಅನ್ನಾದಿಗಳತೆಗೆದುಕೊಳ್ಳುವದು, ಸದ್ಧರ್ಮಾವಿಸಂವಾದಾಃ- ಧರ್ಮದಲ್ಲಿವಿವಾದಮಾಡದೇ ಇರುವದು ಇವುಗಳು, ಪಂಚ- ಐದು ಅಚೌರ್ಯವ್ರತದ ಭಾವನೆಗಳು ॥ ೬ ॥

ತಾ ॥ ಜನಗಳುಯಾರೂ ಇಲ್ಲದಪ್ರದೇಶದಲ್ಲಿವಾಸವು, ಅಂದರೆ.-ಯತಿಗಳು ಗುಹಾತರುಕೋಟರಗಳಲ್ಲಿ ವಾಸಮಾಡೋಣವು. ಗೃಹಸ್ಥರಾದಾಗ್ಯೂ ಧರ್ಮವಿರುದ್ಧಜನಗಳಿಲ್ಲದ ಪ್ರದೇಶದಲ್ಲಿ ಇರೋಣವು ॥ ವಿಮೋಚಿತಾ ವಾಸವೆಂದರೆ ಯಾರಿಗೂ ಅಪೇಕ್ಷೆಇಲ್ಲದೆ ಬಿಡಲ್ಪಟ್ಟಪ್ರದೇಶವು. ಪರೋಪರೋಧಾಕರಣವೆಂದರೆ ಜನಗಳಿಗೆ ಅಪೇಕ್ಷೆವುಳ್ಳಪ್ರದೇಶದಲ್ಲಿವಾಸಮಾಡಬಾರದುಅದರಿಂದ ಕಲಹವುಂಟಾಗಿ ಪರಹಿಂಸೆ ಸಂಭವಿಸುತ್ತದೆ. ಆದಕಾರಣ ಪರದ್ರವ್ಯಾಪಹಾರ ಮಾಡಿದಂತೆ ಆಗುತ್ತೆ ॥ ಆಚಾರ ಸೂತ್ರೋಕ್ತವಾಗಿ ಯತಿಯಾದರೆ ಯತಿಮಾರ್ಗಪ್ರಕಾರ ಭಿಕ್ಷೆ ಮಾಡೋಣವು. ಗೃಹಸ್ಥನಾದಾಗ್ಯೂ ಸ್ನಾನಜಪಾದಿಗಳನ್ನುಮಾಡಿ ಧರ್ಮಶಾಸ್ತ್ರಾನುಸಾರ ಭೋಜನಮಾಡೋಣವು ಭಿಕ್ಷಾಸಿದ್ಧಿಯು॥ ಧಾರ್ಮಿಕರೊಡನೆ ವಿಸಂವಾದವನ್ನು ಮಾಡಿದರೆ ಅವರಿಗೆ ಮನಶ್ಚಾಂಚಲ್ಯವುಂಟಾಗಿ ಅವರ ಧರ್ಮಾಪಹಾರ ಮಾಡಿದಂತೆ ಆಗುತ್ತೆಯಾದಕಾರಣ ಅವರೊಡನೆ ವಾಕ್ಕಲಹ ಮಾಡದೆ ಇರೋಣವು ॥ ಈ ಐದು ಅಚೌರ್ಯವ್ರತದ ಭಾವನೆಗಳಾಗುತ್ತಿವೆ ॥ ೬ ॥

ವದರಲ್ಲಿಯು ತೆಗೆದುಕೊಳ್ಳುವಲ್ಲಿಯು ಅನೇಕ ಪ್ರಾಣಿಹಿಂಸೆಯಾಗದಂತೆ ತೆಗೆದುಕೊಳ್ಳೋಣವು ಮಡಗೋಣವು ಎಂಬ ಆದಾನ ನಿಕ್ಷೇಪಣಾಸಮಿತಿಯು ॥ ಜಲಪಾನಾದಿಗಳ ಮಾಡುವಲ್ಲಿಯು ಭೋಜನ ಮಾಡುವಲ್ಲಿಯು ಪ್ರಾಣಿಹಿಂಸೆ ಬರುತ್ತದೆ ಯಾದಕಾರಣ ಜಲವನ್ನು ಶೋಧಿಸಿ ಚಂದಾಗಿ ನೋಡಿ ನೀರು ಕುಡಿಯೋಣವು, ಸೂಕ್ಷ್ಮ ಕ್ರಿಮಿಗಳು ಇರತಕ್ಕ ಕಾಯಿಪಲ್ಯಗಳನ್ನು ಇಂಥಾ ಯಿತರ ವಸ್ತುಗಳನ್ನು ತನ್ನ ಶರೀರಕ್ಕೆ ಪಡಂಬಡದ ವಸ್ತುಗಳನ್ನು ಬಿಟ್ಟುಭೋಜನಮಾಡೋಣವು ಯೆಂಬ ಆಲೋಕಿತ ಪಾನಭೋಜನವು ॥ ಈ ಐದುಭಾವನೆಗಳು ಜೀವನನ್ನೇ ಕುರಿತು ವುಂಟಾಗುತ್ತಾಗಿ ಈ ಭಾವನೆಯಿಂದ ಅಹಿಂಸಾವ್ರತ ಸ್ಥಿರವಾಗುತ್ತೆ॥೪॥

## ಸತ್ಯವ್ರತಭಾವನಾಧಿಕರಣಂ.

ಅ ॥ ಸುಳ್ಳಾಡಬಾರದೆಂಬುವದು ದೃಢವಾಗಿರುವದಕ್ಕೆ ಭಾವನೆಗಳನ್ನು ಹೇಳುತ್ತಾರೆ.

ಸೂ ॥ ಕ್ರೋಧಲೋಭಭೀರುತ್ವ ಹಾಸ್ಯಪ್ರತ್ಯಾಖ್ಯಾನಾನ್ಯನುವೀಚಿಭಾಷಣಂ ಪಂಚ ॥ ೫ ॥

ಟೀ ॥ ಕ್ರೋಧಲೋಭಭೀರುತ್ವ ಹಾಸ್ಯಪ್ರತ್ಯಾಖ್ಯಾನಾನಿ - ಕ್ರೋಧ = ಕೋಪ, ಲೋಭ - ಆಶೆ - ಭೀರುತ್ವ - ಭಯ, ಹಾಸ್ಯ - ಹಾಸ್ಯ ಇವುಗಳನ್ನು, ಪ್ರತಾಖ್ಯಾನಾನಿ - ಬಿಡೋಣವು, ಅನುವೀಚಿಭಾಷಣಂಚ - ನಿರವದ್ಯ ಭಾಷಣವುಕೂಡ, ಪಂಚ - ಈ ಐದು ಸತ್ಯವ್ರತದ ಭಾವನೆಗಳು ॥

ತಾ ॥ ಕ್ರೋಧಬಿಡೋಣವು, ಲೋಭಬಿಡೋಣವು, ಭಯಬಿಡೋಣವು, ಹಾಸ್ಯಬಿಡೋಣವು, ಪಾಪಕರವಾದ ಮಾತುಬಿಡೋಣವು, ಈ ಐದುಗಳು ಸತ್ಯವ್ರತವನ್ನು ವೃದ್ಧಿಮಾಡುತ್ತಲಿವೆ, ಇವುಗಳು ಉಂಟಾದರೆ ಯಥಾರ್ಥವಾತು ಹೊರಡುವದಿಲ್ಲ. ವಂಚನಾದಿಗಳಿಂದ ಸುಳ್ಳು ಮಾತಾಗಲಿ ಪರಹಿಂಸಾ ಜನಕವಾದ ಮಾತುಗಳಾಗಲಿ ಉಂಟಾಗುತ್ತೆ ಯಾದಕಾರಣ ಸತ್ಯವ್ರತದ ಹಾನಿಯಾಗುತ್ತೆ. ಆದ್ದರಿಂದ ಸತ್ಯವ್ರತದ ಸ್ಥಿರೀಕರಣಾರ್ಥವಾಗಿ ಈ ಐದು ಭಾವನೆಗಳನ್ನು ಮಾಡಬೇಕು ॥ ೫ ॥

## ಅಸ್ತೇಯಭಾವನಾಧಿಕರಣಂ.

ಅ ॥ ಕಳ್ಳತನ ಮಾಡಬಾರದೆಂಬುವದು ದೃಢವಾಗಿರುವದಕ್ಕೆ ಭಾವನೆ ಗಳನ್ನು ಹೇಳುತ್ತಾರೆ.

ಸೂ ॥ ಶೂನ್ಯಾಗಾರವಿಮೋಚಿತಾವಾಸ ಪರೋಪರೋಧಾಕರಣ ಭೈಕ್ಷ್ಯಶುದ್ಧಿಸದ್ಧರ್ಮಾವಿಸಂವಾದಾಃ ಪಂಚ ॥

ಟೀ ॥ ಶೂನ್ಯಾಗಾರವಿಮೋಚಿತಾವಾಸ ಪರೋಪರೋಧಾಕರಣ ಭೈಕ್ಷ್ಯಶುದ್ಧಿಸದ್ಧರ್ಮಾವಿಸಂವಾದಾಃ - ಶೂನ್ಯಾಗಾರ- ಜನರಿಲ್ಲದಮನೆ, ವಿಮೋಚಿತಾವಾಸ-ಬಿಡಲ್ಪಟ್ಟವಾಸಸ್ಥಳ, ಪರೋಪರೋಧಾಕರಣ - ಅನ್ಯರಿಗೆ ಉಪದ್ರವವನ್ನು ಮಾಡದೇಯಿರುವದು, ಭೈಕ್ಷ್ಯಶುದ್ಧಿ- ಆಚಾರಶಾಸ್ತ್ರಾನುಸಾರ ಅನ್ನಾದಿಗಳತೆಗೆದುಕೊಳ್ಳುವದು, ಸದ್ಧರ್ಮಾವಿಸಂವಾದಾಃ- ಧರ್ಮದಲ್ಲಿವಿವಾದಮಾಡದೇ ಇರುವದು ಇವುಗಳು, ಪಂಚ- ಐದು ಅಚೌರ್ಯವ್ರತದ ಭಾವನೆಗಳು ॥ ೬ ॥

ತಾ ॥ ಜನಗಳುಯಾರೂ ಇಲ್ಲದಪ್ರದೇಶದಲ್ಲಿವಾಸವು, ಅಂದರೆ.-ಯತಿಗಳು ಗುಹಾತರುಕೋಟರಗಳಲ್ಲಿ ವಾಸಮಾಡೋಣವು. ಗೃಹಸ್ಥರಾದಾಗ್ಯೂ ಧರ್ಮವಿರುದ್ಧಜನಗಳಿಲ್ಲದ ಪ್ರದೇಶದಲ್ಲಿ ಇರೋಣವು ॥ ವಿಮೋಚಿತಾ ವಾಸವೆಂದರೆ ಯಾರಿಗೂ ಅಪೇಕ್ಷೆಇಲ್ಲದೆ ಬಿಡಲ್ಪಟ್ಟಪ್ರದೇಶವು. ಪರೋಪರೋಧಾಕರಣವೆಂದರೆ ಜನಗಳಿಗೆ ಅಪೇಕ್ಷವುಳ್ಳಪ್ರದೇಶದಲ್ಲಿವಾಸಮಾಡಬಾರದುಅದರಿಂದ ಕಲಹವುಂಟಾಗಿ ಪರಹಿಂಸೆ ಸಂಭವಿಸುತ್ತದೆ. ಆದಕಾರಣ ಪರದ್ರವ್ಯಾಪಹಾರ ಮಾಡಿದಂತೆ ಆಗುತ್ತೆ ॥ ಆಚಾರ ಸೂತ್ರೋಕ್ತವಾಗಿ ಯತಿಯಾದರೆ ಯತಿಮಾರ್ಗಪ್ರಕಾರ ಭಿಕ್ಷೆ ಮಾಡೋಣವು. ಗೃಹಸ್ಥನಾದಾಗ್ಯೂ ಸ್ನಾನಜಪಾದಿಗಳನ್ನುಮಾಡಿ ಧರ್ಮಶಾಸ್ತ್ರಾನುಸಾರ ಭೋಜನಮಾಡೋಣವು ಭಿಕ್ಷಾಸಿದ್ಧಿಯು॥ ಧಾರ್ಮಿಕರೊಡನೆ ವಿಸಂವಾದವನ್ನು ಮಾಡಿದರೆ ಅವರಿಗೆ ಮನಶ್ಚಾಂಚಲ್ಯವುಂಟಾಗಿ ಅವರ ಧರ್ಮಾಪಹಾರ ಮಾಡಿದಂತೆ ಆಗುತ್ತೆಯಾದಕಾರಣ ಅವರೊಡನೆ ವಾಕ್ಕಲಹ ಮಾಡದೆ ಇರೋಣವು ॥ ಈ ಐದು ಅಚೌರ್ಯವ್ರತದ ಭಾವನೆಗಳಾಗುತ್ತಿವೆ ॥ ೬ ॥

[೧೫]

## ಬ್ರಹ್ಮಚರ್ಯಭಾವನಾಧಿಕರಣಂ.

ಅ ‖ ಬ್ರಹ್ಮಚರ್ಯ್ಯ ವ್ರತವೃಢವಾಗಿರುವದಕ್ಕೆ ಭಾವನೆಗಳನ್ನು ಹೇಳುತ್ತಾರೆ.

ಸೂ ‖ ಸ್ತ್ರೀರಾಗಕಥಾಶ್ರವಣತನ್ಮನೋಹರಾಂಗನಿರೀಕ್ಷಣ ಪೂರ್ವರತಾನುಸ್ಮರಣವೃಷ್ಯೇಷ್ಟರಸಸ್ವಶರೀರಸಂಸ್ಕಾರತ್ಯಾಗಾಃ ಪಂಚ ‖ ೭ ‖

ಟೀ ‖ ಸ್ತ್ರೀರಾಗಕಥಾಶ್ರವಣ ತನ್ಮನೋಹರಾಂಗನಿರೀಕ್ಷಣ ಪೂರ್ವರತಾನು ಸ್ಮರಣವೃಷ್ಯೇಷ್ಟರಸಸ್ವಶರೀರಸಂಸ್ಕಾರತ್ಯಾಗಾಃ-ಸ್ತ್ರೀರಾಗಕಥಾಶ್ರವಣ-ಹೆಂಗಸರಲ್ಲಿಪ್ರೀತಿ ಉಂಟಾಗುವ ಕಥೆಗಳನ್ನು ಕೇಳುವದು,ತನ್ಮನೋಹರಾಂಗನಿರೀಕ್ಷಣ- ಅವಳಮನೋಹರವಾದಶರೀರವನ್ನು ನೋಡುವದು, ಪೂರ್ವರತಾನುಸ್ಮರಣ-ಹಿಂದೆಮಾಡಿದ್ದ ಕ್ರೀಡಾದಿಗಳನ್ನು ಸ್ಮರಿಸುವದು, ವೃಷ್ಯೇಷ್ಟರಸ- ಕಾಮವಿಕಾರವಾಗುವವಸ್ತುಗಳು, ಸ್ವಶರೀರಸಂಸ್ಕಾರ- ತನ್ನದೇಹಾಲಂಕರವು ಇವುಗಳನ್ನು, ತ್ಯಾಗಾಃ-ಬಿಡುವದು, ಪಂಚ-ಐದು ಈ ೫ ಬ್ರಹ್ಮಚರ್ಯವ್ರತದಭಾವನೆಗಳು ‖ ೭ ‖

ತಾ ‖ ಸ್ತ್ರೀಯರುಗಳ ಪ್ರೀತಿಸಂಬಂಧವಾದ ಕ್ರೀಡಾದಿ ಕಥೆಗಳನ್ನು ಕೇಳುತ್ತಾಇದ್ದರೆ ತನಗೆ ಕಾಮೋಲ್ಬಣೆಯು ‖ ತನ್ನ ಮನಸ್ಸನ್ನು ಅಪಹರಿಸುವಂಥ ಸ್ತ್ರೀಯರ ಮುಖ ಕುಚಾದ್ಯವಯವಗಳನ್ನು ನೋಡುತ್ತಿದ್ದರೆ ಕಾಮೋತ್ಪತ್ತಿಯಾಗುತ್ತದೆ ‖ ಪೂರ್ವದಲ್ಲಿತಾನುಮಾಡಿದ ರತಿಕ್ರೀಡೆಯನ್ನು ನೆನೆಸಿದರೆ ಕಾಮಾಸಕ್ತಿಯಾಗುತ್ತದೆ‖ ಕಾಮವೃದ್ಧಿಯನ್ನು ಮಾಡುವಂಥಾ ರಸದ್ರವ್ಯಸೇವನೆಯುನ್ನು ಮಾಡಿದರೆ ತಾನು ಮನೋನಿಗ್ರಹಮಾಡಿ ಇದ್ದಾಗ್ಯೂ ದೇಹಧರ್ಮದಿಂದ ಕಾಮಾಪೇಕ್ಷೆ ಉಂಟಾಗುತ್ತೆ ‖ ಸುಗಂಧ ಪುಷ್ಪಾದಿಗಳಿಂದ ದೇಹಾಲಂಕಾರ ಮುಂತಾದವುಗಳನ್ನು ಮಾಡುತ್ತಿದ್ದರೆ ಆ ವಸ್ತು ಸ್ಸಾನಿಧ್ಯ ವಿಶೇಷದಿಂದ ಕಾಮೋಲ್ಬಣೆಯಾಗುತ್ತೆ ‖ ಆದಕಾರಣ ಇವುಗಳನ್ನು ಬಿಡಬೇಕು ಎಂಬ ಈ ಐದು ಭಾವನೆಗಳನ್ನು ಬ್ರಹ್ಮವ್ರತದ ಶುದ್ಧಿಗೋಸ್ಕರ ಮಾಡಬೇಕು ‖ ೭ ‖

## ಅಪರಿಗ್ರಹಭಾವನಾಧಿಕರಣಂ.

ಅ ‖ ಪರಿಗ್ರಹ ಬಿಡುವದಕ್ಕೆ ಭಾವನೆಗಳನ್ನು ಹೇಳುತ್ತಾರೆ.

ಸೂ ॥ ಮನೋಜ್ಞಾಮನೋಜ್ಞೇಂದ್ರಿಯ ವಿಷಯರಾಗದ್ವೇಷವರ್ಜನಾನಿ ಪಂಚ ॥ ೮ ॥

ಟೀ॥ಮನೋಜ್ಞಾಮನೋಜ್ಞೇಂದ್ರಿಯವಿಷಯರಾಗದ್ವೇಷವರ್ಜನಾನಿ- ಮನೋಜ್ಞ-ಇಷ್ಟವಾದಂಥಾ,ಅಮನೋಜ್ಞ-ಕೇಡದಂಥಾ,ಇಂದ್ರಿಯವಿಷಯ-ಪಂಚೇಂದ್ರಿಯಗಳಲ್ಲಿ,ರಾಗ-ಪ್ರೀತಿಯು, ದ್ವೇಷ-ಕೋಪವುಇವುಗಳನ್ನು, ವರ್ಜನಾನಿ-ಬಿಡುವಂಥಾವುಗಳು,ಪಂಚ-ಐದು, ಈ ಐದು ಅಪರಿಗ್ರಹದ ಭಾವನೆಗಳು ॥ ೮ ॥

ತಾ ॥ ಐದು ಇಂದ್ರಿಯಗಳಿಂದಲು ಪ್ರತ್ಯೇಕ ಪ್ರತ್ಯೇಕವಾಗಿ ಮನೋಜ್ಞಾಮನೋಜ್ಞ ವಿಷಯ ರಾಗದ್ವೇಷಗಳನ್ನು ಬಿಡಬೇಕೆಂದರೆ ಮನೋಹರವಾದ ಭೋಗ್ಯಪದಾರ್ಥಗಳಲ್ಲಿ ಪ್ರೀತಿಯನ್ನು ಅನಿಷ್ಟಪದಾರ್ಥಗಳಲ್ಲಿ ದ್ವೇಷವನ್ನು ಬಿಡಬೇಕು ॥ ೮ ॥

ಪ್ರ ಕಾ ರಾ ೦ ತ ರೇ ಣ ವ್ರ ತ ಭಾ ವ ನಾ ಧಿ ಕ ರ ಣ ೦.

ಅ ॥ ಹಿಂಸಾದಿಗಳಿಂದ ಕೇಡುಬರುತ್ತೆಂದು ಹೇಳುತ್ತಾರೆ.

ಸೂ ॥ ಹಿಂಸಾದಿಷ್ವಿಹಾಮುತ್ರಚಾಪಾಯಾವದ್ಯದರ್ಶನಂ ॥ ೯ ॥

ಟೀ ॥ ಹಿಂಸಾದಿಷು-ಕೊಲೆಮೊದಲಾದ ಐದುಪಾಪಗಳಲ್ಲಿ, ಇಹ-ಈ ಲೋಕದಲ್ಲಿ, ಅಮುತ್ರಚ-ಜನ್ಮಾಂತರದಲ್ಲಿಯೂಕೂಡ, ಅಪಾಯಾವದ್ಯದರ್ಶನಂ-ಅಪಾಯ-ಕೇಡು. ಅವದ್ಯ-ನಿಂದೆಯು ಇವುಗಳ, ದರ್ಶನಂ ನೋಡೋಣವು ಆಗುತ್ತದೆ ॥ ೯ ॥

ತಾ ॥ ಹಿಂಸೆಮಾಡಿದರೆ ಈ ಜನ್ಮದಲ್ಲಿ ರಾಜದಂಡನೆಯು ಜನವಿರೋಧವು, ಪರ ಜನ್ಮದಲ್ಲಿ ನರಕ ಹಿಂಸೆಗಳಿಗೊಳಗಾಗೋಣವು. ಸುಳ್ಳಾಡಿದರೆ ಅಪನಂಬಿಕೆಯು, ಮುಂದೆ ಪಾಪವು, ಕಳವುಮಾಡಿದರೆಕಾರಾಗಾರ (ಬಂದೀಖಾನೆ)ಪ್ರವೇಶವು.ಮುಂದೆಪುಣ್ಯಹಾನಿಯು.ವ್ಯಭಿಚಾರ ಮಾಡಿದರೆ ಶರೀರಾಶುಚಿ ರೋಗ ಮೊದಲಾದ್ದು. ಮುಂದೆ ನಾನಾಯೋನಿಜನ್ಮವು. ಬಹುಪರಿಗ್ರಹಕಟ್ಟಿಕೊಂಡರೆ ಅದರ ಸಂರಕ್ಷಣಾಶ್ರಮವು, ಮುಂದೆ ಸಂಸಾರ ಸಮುದ್ರದಲ್ಲಿ ಬೀಳೋಣವು. ಮೊದಲಾದ ಐಹಿಕಾಮುತ್ರಿಕ ಕಷ್ಟಗಳನ್ನು ಆಲೋಚಿಸಿದರೆ ಈ ಐದು ವ್ರತಗಳಲ್ಲಿಯೂ ಪ್ರಯೋಜನ ತಿಳಿದು ದೃಢವ್ರತನಾಗುತ್ತಾನೆಂದು ಹೇಳುತ್ತಾರೆ ॥ ೯ ॥

ಅ || ಹಿಂಸಾದಿ ೫ ಪಾಪಗಳು ದುಃಖವೆಂದು ಭಾವಿಸಬೇಕೆಂದು ಹೇಳುತ್ತಾರೆ.

ಸೂ || ದುಃಖಮೇವ ವಾ. || ೧೦ ||

ಟೀ || ವಾ-ಹಾಗಲ್ಲದೇಹೋದರೆ, ದುಃಖಮೇವ-ದುಃಖವೇಯೇ ಎಂ. ದು ಭಾವಿಸುವದು || ೧೦ ||

ತಾ || ಕಾರಣದಲ್ಲಿ ಕಾರ್ಯೋಪಚಾರದಿಂದ ದುಃಖ ಕಾರಣವಾ. ದಂಥಾದ್ದರಲ್ಲಿ ದುಃಖವೆ ಎಂದು ಹೇಳಿದ್ದಾರೆ. ಹಿಂಸಾದಿಗಳಿಂದ ದುಃಖ ಪ್ರಾಪ್ತಿಯಲ್ಲದೆ ಸುಖಪ್ರಾಪ್ತಿ ಎಂದಿಗೂ ಇಲ್ಲವು. || ೧೦ ||

ಅ || ಇನ್ನೊಂದು ವಿಧವಾದ ಭಾವನೆಯನ್ನು ಹೇಳುತ್ತಾರೆ.

ಸೂ || ಮೈತ್ರೀಪ್ರಮೋದಕಾರುಣ್ಯ ಮಾಧ್ಯಸ್ಥಾನಿ ಚ ಸ ತ್ವಗುಣಾಧಿಕಕ್ಲಿಶ್ಯಮಾನಾವಿನಯೇಷು || ೧೧ ||

ಟೀ || ಸತ್ವಗುಣಾಧಿಕಕ್ಲಿಶ್ಯಮಾನಾವಿನಯೇಷು -ಸ್ವತ್ವೇ- ಪ್ರಾಣಿಗಳು, ಗುಣಾಧಿಕ-ಗುಣದಿಂದಹೆಚ್ಚಾದವರು, ಕ್ಲಿಶ್ಯಮಾನ- ದುಃಖಪಡುವರು, ಅವಿನಯೇಷು-ಮಿಥ್ಯಾದೃಷ್ಟಿಗಳು ಇವರುಗಳಲ್ಲಿ, ಮೈತ್ರೀಪ್ರಮೋದ ಕಾರುಣ್ಯಮಾಧ್ಯಸ್ಥಾನಿಚ - ಮೈತ್ರೀ-ಮಿತ್ರತ್ವವು, ಪ್ರಮೋದ - ಸಂತೋಷವು; ಕಾರುಣ್ಯ- ಕರುಣವು, ಮಾಧ್ಯಸ್ಥಾನಿಚ - ರಾಗದ್ವೇಷಪೂರ್ವಕವಾದ ಪಕ್ಷಪಾತವಿಲ್ಲದೇಯಿರುವದು ಕೂಡ ಭಾವನೆಯಾಗುತ್ತೆ ||

ತಾ || ಇತರಪ್ರಾಣಿಗಳಿಗೆ ದುಃಖಬಾರದಂತೆ ನೋಡಿ ನಡೆಯುವದೇ ಮಿತ್ರತ್ವವು ಸಮಸ್ತಪ್ರಾಣಿಗಳಲ್ಲೂ ಮಿತ್ರಭಾವ ಇಡಬೇಕು, ಗುಣಾಧಿಕರಲ್ಲಿನಗೆ ಮುಖಮುಂತಾದವುಗಳಿಂದ ಅಂತರ್ಭಕ್ತಿಯನ್ನೂ ಅನುರಾಗವನ್ನೂ ತೋರಿಸುವದೇ ಪ್ರಮೋದವು ಗುಣಾಧಿಕರಲ್ಲಿ ಈ ಪ್ರಮೋದಮಾಡಬೇಕು || ಕ್ಲೇಶಪಡುವಂಥವರಲ್ಲಿ ಅನುಗ್ರಹಮಾಡುವದು ಕಾರುಣ್ಯವು ಈ ಕಾರುಣ್ಯವನ್ನು ದುಃಖಪಡುವರಲ್ಲಿ ಮಾಡಬೇಕು || ಅವಿನೀತರಲ್ಲಿ ಮಧ್ಯಸ್ಥಭಾವವನ್ನು ಇಡಬೇಕು || ೧೧ ||

## ಸಂವೇಗವೈರಾಗ್ಯಭಾವನಾಧಿಕರಣಂ.

ಅ || ಸಂಸಾರ ಭೀತಿಯು ವೈರಾಗ್ಯವು ಹುಟ್ಟಲುಕಾರಣವನ್ನು ಹೇಳುತ್ತಾರೆ.

ಸೂ || ಜಗತ್ಕಾಯಸ್ವಭಾವೌವಾಸಂವೇಗವೈರಾಗ್ಯಾರ್ಥಂ ||೧೨||

ಟೀ || ಜಗತ್ಕಾಯಸ್ವಭಾವೌ- ಜಗತ್- ಲೋಕ, ಕಾಯ-ಶರೀರ,

ಇವುಗಳ, ಸ್ವಭಾವೌ- ಸ್ವಭಾವಗಳು, ಸಂವೇಗ ವೈರಾಗ್ಯಾರ್ಥಂ - ಸಂವೇಗ-ಸಂಸಾರಭೀತಿಯು, ವೈರಾಗ್ಯ - ವೈರಾಗ್ಯವು ಇವುಗಳೇ, ಅರ್ಥಂವಾ-ಕಾರಣವಾಗಿ ಉಳ್ಳಂಥಾವುಗಳು || ೧೨ ||

ತಾ || ಜಗತ್ಸ್ವಭಾವವನ್ನೂ ಶರೀರಸ್ವಭಾವವನ್ನೂ ಭಾವಿಸಿದ ಕೆ ಧರ್ಮದಲ್ಲಿಯೂ ಧರ್ಮಪರರಲ್ಲಿಯೂ ಆಸಕ್ತಿಯು ವೈರಾಗ್ಯವು ಉಂಟಾಗುತ್ತದೆ. ತದರ್ಥವಾಗಿ ಜಗತ್ಕಾಯಸ್ವಭಾವಗಳನ್ನೂ ಭಾವಿಸ ಬೇಕು. ಹ್ಯಾಗೆಂದರೆ,—ಜಗತ್ತಿನಲ್ಲಿ ದೊರೆ, ಚಕ್ರವರ್ತಿ ದೇವೇಂದ್ರಾದಿಗಳು ಶರೀರವು ಇವುಗಳು ಅಶಾಶ್ವತ. ಇವುಗಳನ್ನು ಆಲೋಚಿಸಿದರೆ ವೈರಾಗ್ಯವುಂಟಾಗುತ್ತೆ. ಶರೀರದ ಅಶುಚಿತ್ವಾದಿಗಳನ್ನು ಆಲೋಚಿಸಿದಾಗ್ಯೂ ವೈರಾಗ್ಯ ಉಂಟಾಗುತ್ತೆ. ಲೋಕದಲ್ಲಿ ದೊರೆಯು, ಹಿಂಸೆ ಸುಳ್ಳು ಕಳವು ಜಾರತ್ವಮುಂತಾದವುಗಳನ್ನು ಮಾಡುವವರಿಗೆ ಶಿಕ್ಷಿಸುವದ್ದರಿಂದಲೂ ಈ ಕೃತ್ಯಗಳಿಂದ ದೇಹ ತೇಜಸ್ಸುಮುಂತಾದ್ದು ಕೆಡುವದರಿಂದಲೂ ದುಷ್ಟರಿಂದ ಬಾಧೆಯು, ಸಜ್ಜನರಿಂದ ಕ್ಷೇಮವು ಉಂಟಾಗುವದರಿಂದಲೂ ಧರ್ಮದಲ್ಲಿಯೂ ಧರ್ಮ್ಮಪರರಲ್ಲಿಯೂ ಪ್ರೀತಿಉಂಟಾಗುತ್ತೆ. ಆದ್ದರಿಂದ ಜಗತ್ಕಾಯಸ್ವಭಾವಾಲೋಚನೆಯು ಸಂವೇಗ ವೈರಾಗ್ಯವನ್ನು ಮಾಡುತ್ತೆ. || ೧೨ ||

### ಹಿಂಸಾಲಕ್ಷಣಾಧಿಕರಣಂ.

ಅ || ಏನುಮಾಡಿದರೆ ಹಿಂಸೆಯಾಗುತ್ತೆ ಅದನ್ನು ಹೇಳುತ್ತಾರೆ:

ಸೂ || ಪ್ರಮತ್ತಯೋಗಾತ್ಪ್ರಾಣವ್ಯಪರೋಪಣಂಹಿಂಸಾ ||೧೩.

ಟೀ || ಪ್ರಮತ್ತಯೋಗಾತ್ - ಹದಿನೈದುಪ್ರಮಾದ ಪರಿಣಾಮರೂಪವಾದ ಮನವಚನ ಕಾಯಗಳ ವ್ಯಾಪಾರದ್ದೆಸೆಯಿಂದ, ಪ್ರಾಣವ್ಯಪರೋಪಣಂ-ಹತ್ತುಪ್ರಾಣಗಳನ್ನುಹೋಗಲಾಡಿಸುವದು,ಹಿಂಸಾ-ಹಿಂಸೆಯು||

ತಾ || ಭುಕ್ತಿಕಥೆ. ರಾಜಕಥೆ, ಚೋರಕಥೆ, ಸ್ತ್ರೀಕಥೆ, ಮತ್ತು ಕಷಾಯನಾಲ್ಕು ಜಿಹ್ವೇಂದ್ರಿಯ, ಘ್ರಾಣೇಂದ್ರಿಯ, ಶ್ರೋತ್ರೇಂದ್ರಿಯ, ನೇತ್ರೇಂದ್ರಿಯ, ಸ್ಪರ್ಶನೇಂದ್ರಿಯ, ನಿದ್ರೆ, ಸ್ನೇಹ ಇವುಗಳು ಪ್ರಮಾದವು|| ಈ ವಿಷಯವಾದ ಮನೋವಾಕ್ಕಾಯಗಳ ದೆಸೆಯಿಂದ ಐದು ಇಂದ್ರಿಯ ಮನ ವಚನ ಕಾಯ ಆಯುಷ್ಯ ಶ್ವಾಸೋಚ್ಛ್ವಾಸ

ಗಳೆಂಬ ೧೦ ದಶ ಪ್ರಾಣಗಳನ್ನು ಹೋಗಲಾಡಿಸುವುದು ಹಿಂಸೆಯಾಗುತ್ತೆ॥ ಆತ್ಮನ ರಾಗದ್ವೇಷರೂಪ ಪರಿಣಾಮಕ್ಕೇ ಪ್ರಮತ್ತವೆಂದು ಹೆಸರು॥ ಪ್ರಮತ್ತಯೋಗದ್ವೆಶೆಯಿಂದ ಪ್ರಾಣವಿಯೋಗ ಕಾರಣವು ಹಿಂಸೆಯಾಗುತ್ತೆಂದು ಸಾಮಾನ್ಯವಾಗಿ ಹೇಳಿದ್ದರಿಂದ ತನಗಾಗಲಿ ಅನ್ಯರಿಗಾಗಲಿ ಮಾಡಿದ ಪ್ರಾಣ ವ್ಯಪರೋಪಣೆಯು ಹಿಂಸೆಯಾಗುತ್ತೆ. ಮತ್ತು ಸಂಯಮವನ್ನು ಮಾಡುತ್ತಿರುವಂಥ ಯತಿಗಳಿಗೆ ಇಂದ್ರಿಯನಿಗ್ರಹ ಪ್ರಾಣಾಯಾಮ ಮೊದಲಾದವುಗಳಿಂದ ಸ್ವಪ್ರಾಣ ವ್ಯಪರೋಪಣೆಯು ತಪಸ್ಸನ್ನು ಮಾಡುವಪರಿಂದ ದೇಹಗತಪ್ರಾಣಿ ವ್ಯಪರೋಪಣೆಯು ಉಂಟಾದಾಗ್ಯೂ ಅಲ್ಲಿ ಪಂಚದಶ ಪ್ರಮಾದವಿಲ್ಲದೆ ಇರುವ ಕಾರಣ ಸಂಯಮವನ್ನು ಮಾಡುವಂಥಾ ಯತಿಗೆ ಹಿಂಸೆಯಾಗುವದಿಲ್ಲ॥೧೩॥

ಅ ನೃ ತಾ ಧಿ ಕ ರ ಣ ಂ.

ಅ ॥ ಸುಳ್ಳಿನ ಲಕ್ಷಣವನ್ನು ಹೇಳುತ್ತಾರೆ.

ಸೂ ॥ ಅಸದಭಿಧಾನಮನೃತಂ ॥ ೧೪ ॥

ಟೀ ॥ ಅಸತ್-ಅಪ್ರಶಸ್ತವಾದಂಥಾ, ಅಭಿಧಾನಂ-ವಚನವು ಅನೃತಂ-ಸುಳ್ಳು ॥ ತಾ ॥ ಪ್ರಾಣಿಪೀಡಾಕರವಾದಮಾತು ವಿದ್ಯಮಾನಾರ್ಥವಿಷಯವಾದರೂ ಅವಿದ್ಯಮಾನಾರ್ಥ ವಿಷಯವಾದರು ಅವುಗಳೆಲ್ಲಾ ಅಪ್ರಶಸ್ತವಚನವು ॥ ಆದ್ದರಿಂದ ಇಲ್ಲದಮಾತು ಹಿಂಸಾಜನಕವಾದ ಮಾತು ಇವು ಎರಡು ಸುಳ್ಳುಎಂದು ತಿಳಿಯುವದು ॥ ೧೪ ॥

ಚೌ ರ್ಯಾ ಧಿ ಕ ರ ಣ ಂ.

ಅ ॥ ಕಳ್ಳತನದ ಲಕ್ಷಣವನ್ನು ಹೇಳುತ್ತಾರೆ.

ಸೂ ॥ ಅದತ್ತಾದಾನಂ ಸ್ತೇಯಂ ॥ ೧೫ ॥

ಟೀ ॥ ಅದತ್ತಾದಾನಂ-ಅದತ್ತ- ಮತ್ತೊಬ್ಬರಿಂದ ಕೊಡದೆಯಿರುವ ಮಣಿಕನಕಾದಿ ವಸ್ತುಗಳನ್ನು, ಆದಾನಂ - ತೆಗೆದುಕೊಳ್ಳುವದು, ಸ್ತೇಯಂ- ಕಳ್ಳತನವು ॥ ೧೫ ॥

ತಾ ॥ ದತ್ತಶಬ್ದಯಿರುವದರಿಂದ ದಾನಯೋಗ್ಯವಸ್ತುವೆಂಸುತಿಳಿಯುವದು ॥ ಪ್ರಮತ್ತಯೋಗದ್ದೆಶೆಯಿಂದ ತನಗೆ ಕೊಡಲ್ಪಡದೆ ಇರುವ ದಾನಯೋಗ್ಯವಸ್ತುವು ಯಾವದೋ ಅದಂನು ತೆಗದುಕೊಳ್ಳೋ

ಣವು ಕಳವು, ಈಗ ಹೇಳಲ್ಪಟ್ಟವಾಕ್ಯವು ದಾನಕ್ಕೂ ಆದಾನಕ್ಕೂ ಯೋಗ್ಯವಾಗುವ ಪದಾರ್ಥ ವಿಷಯಕವಾದಂಥಾದ್ದು ॥ ಅದರಿಂದ ಸಾಮಾನ್ಯತಃ ಕೊಡಲ್ಪಡವೇ ಇರುವಂಥ ನದೀ ಮುಂತಾದವುಗಳ ನೀರನ್ನು ಒಣಗಿದ ಸಗಣಿಯನ್ನು ಭಸ್ಮವನ್ನಾದಾಗ್ಯೂ ತಾನೆ ತ್ಯಜಿಸಲ್ಪಟ್ಟ ಪ್ರಾಣರಹಿತವಾದಂಥ ಪಿಂಛಾ ಸೋರೇಕಾಯಿ ಮುಂತಾದ್ದನ್ನು ತೆಗದುಕೊಳ್ಳುವಂಥ ಯತಿಗೆ ಪ್ರಮತ್ತತ್ವದ ಹಾನಿವೆಶೆಯಿಂದ ಕಳವು ಆಗುವದಿಲ್ಲ॥

## ಅ ಬ್ರ ಹ್ಮಾ ಧಿ ಕ ರ ಣ ಂ.

ಅ ॥ ಸ್ತ್ರೀಪುರುಷರ ವ್ಯಭಿಚಾರ ಲಕ್ಷಣವನ್ನು ಹೇಳುತ್ತಾರೆ.

ಸೂ ॥ ಮೈಥುನಮಬ್ರಹ್ಮ ॥ ೧೬ ॥

ಟೀ ॥ ಮೈಥುನಂ-ಸ್ತ್ರೀಪುರುಷರ ರಾಗಾದಿಪ್ರಮಾದಯೋಗದಿಂದ ಪರಸ್ಪರ ಸ್ಪರ್ಶನಾದಿಕ್ರಿಯೆಯು, ಅಬ್ರಹ್ಮ-ಅಬ್ರಹ್ಮವೂ ಆಗುತ್ತದೆ॥

ತಾ ॥ ಪ್ರಮತ್ತನಿಗೇಯೇ ಈ ಸ್ತ್ರೀಪುರುಷ ದ್ವಂದ್ವಭಾವವು ಅಬ್ರಹ್ಮವಾಗುತ್ತೆ. ಪ್ರಮಾದ ರಹಿತರಾದಂಥವರಿಗೆ ಒಂದು ಕಾಲಕ್ಕೂ ಅದಾಗುವದಿಲ್ಲ. ಪುತ್ರನ ಮಾತಾಲಿಂಗನೆಗೆ ಮೈಥುನ ಸಂಜ್ಞೆಯಾಗುವದಿಲ್ಲ ಆದ್ದರಿಂದ ಪ್ರಮಾದವುಳ್ಳವನಿಗೆ ದೋಷವು ॥೧೬ ॥

## ಪ ರಿ ಗ್ರ ಹ ಭಾ ವ ನಾ ಧಿ ಕ ರ ಣ ಂ.

ಅ ॥ ಪರಿಗ್ರಹ ಲಕ್ಷಣವನ್ನು ಹೇಳುತ್ತಾರೆ.

ಸೂ ॥ ಮೂರ್ಛಾಪರಿಗ್ರಹಃ ॥ ೧೭ ॥

ಟೀ ॥ ಮೂರ್ಛಾ-ಮಮತ್ವಪರಿಣಾಮವು, ಪರಿಗ್ರಹಃ - ಪರಿಗ್ರಹವು ಆಗುತ್ತದೆ ॥ ೧೭ ॥

ತಾ ॥ ಪ್ರಮತ್ತನಿಗೆ ವ್ಯಾಮೋಹಕರವಾದಂಥಾ ಭೂಮಿ, ಹಣ, ಮನೆ, ಪರಿವಾರಮುಂತಾದದ್ದು ಮತ್ತು ಮಿಥ್ಯಾತ್ವವೇದಹಾಸ್ಯಕ್ರೋಧಾದಿಗಳುಸಹ ಬಾಹ್ಯಾಭ್ಯಂತರ ಪರಿಗ್ರಹವಾಗುತ್ತದೆ. ಬಹುವಸ್ತುಸಾನ್ನಿಧ್ಯವು ಬಹುಜನ ಸೇವೆಯು ವ್ಯಾಮೋಹ ಇಲ್ಲದೆ ಇದ್ದರೆ ಪರಿಗ್ರಹವಾಗುವದಿಲ್ಲ. ತೀರ್ಥಕರ ಪರಮ ದೇವರು ಸಮವಸರಣಾದಿ ವಿಭೂತಿ ಉಳ್ಳಂಥವರಾದಾಗ್ಯೂ ತ್ರಿಲೋಕ ದಿಂದಲು ಸೇವಿ

ಸಲ್ಪಡುವಂಥಾವರಾದಾಗ್ಯೂ ವೀತರಾಗರಾದಕಾರಣ ಪರಿಗ್ರಹ ಉಳ್ಳಂ ಥಾವರಾಗಿ ಆಗುವದಿಲ್ಲ ॥ ೧೭ ॥

ವ್ರ ತ್ಯ ಧಿ ಕ ರ ಣ ಂ.

ಅ ॥ ವ್ರತಮಾಡುವವಕ್ಕೆ ಯೋಗ್ಯನನ್ನು ಹೇಳುತ್ತಾರೆ.

ಸೂ ॥ ನಿಶ್ಶಲ್ಯೋ ವ್ರತೀ ॥ ೧೮ ॥

ಟೀ ॥ ನಿಶ್ಶಲ್ಯಃ-ಮೂರುಶಲ್ಯಗಳು ಇಲ್ಲದೇಯಿರುವವನು, ವ್ರತೀ-ವ್ರತವುಳ್ಳವನು ॥ ೧೮ ॥

ತಾ ॥ ಯಾವನಿಗೆ ಮಿಥ್ಯಾಶಲ್ಯ, ಮಾಯಾಶಲ್ಯ, ನಿದಾನಶಲ್ಯ, ಈ ಮೂರೂ ಇಲ್ಲದೇ ಇರುವದೋ ಆತನೇ ವ್ರತವುಳ್ಳಂಥಾವನು. ಶಲ್ಯವೆಂದರೆ ಸಂಕಟ, ಮಿಥ್ಯಾಶಲ್ಯವೆಂದರೆ ವಸ್ತುಸ್ವರೂಪವನ್ನು ತಿಳಿಯದೆ ಮಿಥ್ಯಾತ್ವದಿಂದ ಸಂಕಟಪಡುವುದು ॥ ಮಾಯಾಶಲ್ಯವೆಂದರೆ ವಂಚನೆಯಿಂದ ಕ್ಲೇಶಪಡುವುದು. ॥ ನಿದಾನಶಲ್ಯವೆಂದರೆ ಭೋಗಾಪೇಕ್ಷೆಯಿಂದ ತ್ವರೆ ಪಡುವುದು, ಅಂದರೆ ತಾನುಮಾಡುವ ತಪಸ್ಸುಮೊದಲಾದ್ದರಿಂದ ಇನ್ನೊಂದು ಜನ್ಮದಲ್ಲಿ ಯಾವದಾದರು ಸುಖವನ್ನು ಅಪೇಕ್ಷಿಸುವದು ಇದೇನಿದಾನ ಶಲ್ಯವು॥ ೧೮ ॥

ಅ ॥ ವ್ರತಗಳು ಎರಡು ಭೇದವೆಂದು ಹೇಳುತ್ತಾರೆ.

ಸೂ ॥ ಅಗಾರ್ಯನಗಾರಶ್ಚ ॥ ೧೯ ॥

ಟೀ ॥ ಅಗಾರ್ಯನಗಾರಶ್ಚ-ಅಗಾರಿ-ಮನೆಯುಳ್ಳವನು, ಅನಗಾರಶ್ಚ-ಮನೆಯಿಲ್ಲದವನು ( ಯತಿ ) ಕೂಡ, ಈ ಪ್ರಕಾರ ಆವ್ರತಿಗಳಲ್ಲಿ ಎರಡು ಭೇದವು ॥ ೧೯ ॥

ತಾ ॥ ಗೃಹಸ್ಥನು, ಯತಿಯು ಇಬ್ಬರು ವ್ರತಿಗಳಾಗುತ್ತಾರೆ॥೧೯॥

ಅ ॥ ಗೃಹಸ್ಥನು ಎಂಥಾವ್ರತಿ ಎಂದರೆ ಹೇಳುತ್ತಾರೆ.

ಸೂ ॥ ಅಣುವ್ರತೋಗಾರಿ ॥ ೨೦ ॥

ಟೀ ॥ ಅಣುವ್ರತಃ- ಅಣು-ಸ್ವಲ್ಪವಾದಂಥಾ, ವ್ರತಃ-ವ್ರತವುಳ್ಳವನು ಅಂದರೆ ಅಣುವ್ರತಿಯು, ಅಗಾರಿ- ಮನೆಯುಳ್ಳವನು ಆಗುತ್ತಾನೆ ॥

ತಾ ॥ ಮನೆಯುಳ್ಳವನು ಅಣು ವ್ರತಿಯು. ॥ ಅಣುವ್ರತಲಕ್ಷಣವು ಹಿಂದೆಯೇ ಹೇಳಿದೆ. ಆದರೂ ಸೂಕ್ಷ್ಮವಾಗಿಪುನಃ ಹೇಳಲ್ಪಡುತ್ತೇ.

ದ್ವೀಂದ್ರಿಯಾದಿ ತ್ರಸಜೀವಗಳಿಗೆ ಹಿಂಸೆಮಾಡದೇಯಿರುವದು ಅಹಿಂಸಾಣುವ್ರತವು ॥ ೧ ॥ ರಾಗದ್ವೇಷಗಳಿಂದ ಸುಳ್ಳು ಹೇಳುವದು ಬಿಡುವದೇಯೇ ಅಸತ್ಯಾಣುವ್ರತವು ॥ ಇನ್ನೊಬ್ಬನ ಸ್ವತ್ತನ್ನು ತೆಗೆದುಕೊಳ್ಳುವದರಿಂದ ಅವನಿಗೆ ತೊಂದರೆಯೂ ರಾಜಶಿಕ್ಷೆಯೂ ಆಗುವ ಪದಾರ್ಥಗ್ರಹಣವನ್ನು (ಚೋರಿ) ಬಿಡುವದು ಅಚೌರ್ಯಾಣುವ್ರತವಾಗುತ್ತದೆ ॥ ೩ ॥ ಸ್ತ್ರೀಯು ಮದುವೆಯಾಗಿರಲಿ ಮದುವೆಯಾಗದೇಯಿರಲಿ ಅಂಥಾವಳ ಸಂಬಂಧಬಿಡುವದು ಬ್ರಹ್ಮಚರ್ಯಾಣುವ್ರತವು ॥ ೪ ॥ ಧನಧಾನ್ಯಾದಿವಸ್ತುಗಳ ಪರಿಮಾಣವನ್ನು ಮಾಡಿ ಉಳಿದದ್ದನ್ನ ಬಿಡುವದು ಅಪರಿಗ್ರಹಾಣುವ್ರತವು ॥ ೫ ॥ ಇದೇ ೫ ಅಣುವ್ರತಗಳು ॥ ೨೦ ॥

ಗು ಣ ಶಿ ಕ್ಷಾ ವ್ರ ತಾ ಧಿ ಕ ರ ಣ ಂ.

ಅ ॥ ೩ ಗುಣವ್ರತ ೪ ಶಿಕ್ಷಾವ್ರತ ಇವುಗಳ ಲಕ್ಷಣವನ್ನು ಹೇಳುತ್ತಾರೆ.

ಸೂ ॥ ದಿಗ್ದೇಶಾನರ್ಥದಂಡವಿರತಿ ಸಾಮಾಯಿಕಪ್ರೋಷಧೋಪವಾಸೋಪಭೋಗಪರಿಭೋಗ ಪರಿಮಾಣಾತಿಥಿಸಂವಿಭಾಗವ್ರತಸಂಪನ್ನಶ್ಚ ॥ ೨೧ ॥

ಟೀ ॥ ದಿಗ್ದೇಶಾನರ್ಥದಂಡವಿರತಿ ಸಾಮಾಯಿಕ ಪ್ರೋಷಧೋಪವಾಸೋಪಭೋಗ ಪರಿಭೋಗಪರಿಮಾಣಾತಿಥಿಸಂವಿಭಾಗವ್ರತಸಂಪನ್ನಶ್ಚ-ದಿಕ್-ದಿಗ್ವಿರತಿಯು, ದೇಶ- ದೇಶವಿರತಿಯು, ಅನರ್ಥದಂಡವಿರತಿ - ಅನರ್ಥದಂಡವಿರತಿಯು, ( ಈ ೩ ಗುಣವ್ರತಗಳು ) ಸಾಮಾಯಿಕ-ಸಾಮಾಯಿಕವ್ರತವು, ಪ್ರೋಷಧೋಪವಾಸ-ಪ್ರೋಷಧೋಪವಾಸ ವ್ರತವು, ಉಪಭೋಗಪರಿಭೋಗಪರಿಮಾಣ- ಭೋಗೋಪಭೋಗ ಪರಿಮಾಣವ್ರತವು, ಅತಿಥಿಸಂವಿಭಾಗವ್ರತ- ಅತಿಥಿಸಂವಿಭಾಗ ವ್ರತವು, ( ಈ ೪ ಶಿಕ್ಷಾವ್ರತ) ಇವುಗಳಿಂದ, ಸಂಪನ್ನಶ್ಚ - ಕೂಡಿದಂಥಾವನೂಕೂಡ, ಅಂದರೆ ಇವುಗಳು ದಿಗ್ವ್ರತಿಗೆ ಇರಬೇಕು ॥

ತಾ ॥ ದಿಗ್ವಿರತಿ, ದೇಶವಿರತಿ, ಅರ್ಥದಂಡವಿರತಿ, ಈ ೩ ಗುಣವ್ರತವು ॥ ಸಾಮಾಯಿಕವ್ರತ, ಪ್ರೋಷಧೋಪವಾಸವ್ರತ, ಉಪಭೋಗ ಪರಿಭೋಗವ್ರತ, ಅತಿಥಿಸಂವಿಭಾಗವ್ರತ, ಈ ೪ ಶಿಕ್ಷಾವ್ರ

ತವು || ಈ ಗುಣವ್ರತ ಶಿಕ್ಷಾವ್ರತಕ್ಕೆ ಸಪ್ತ ಶೀಗಳೆಂದು ಹೆಸರು || ಹತ್ತುದಿಕ್ಕುಗಳಲ್ಲೂ, ಯೋಜನ ಪ್ರಮಾಣದಿಂದಲೂ, ನದಿ - ಪರ್ವತಾದಿ ಪ್ರಸಿದ್ಧವಾದ ಚಿಹ್ನೆಗಳಿಂದಲೂ ಹದ್ದುಮಾಡಿ ಯಾವಜ್ಜೀವವುಅಲ್ಲಿಂದಹೊರಗೆ ಹೋಗುವದಿಲ್ಲವೆಂಬುವದು ದಿಗ್ವಿರತಿಯು ||೧|| ಶಕ್ತಿಗೆತಕ್ಕಷ್ಟು ಮಾಸಪಕ್ಷದಿವಸಾದಿಗಳ ಕಾಲನಿಯಮದಿಂದ ಗ್ರಾಮಾದಿಪರಿಮಿತಿಕ್ಷೇತ್ರದಿಂದಹೊರಗೆ ಹೋಗುವದಿಲ್ಲವೆಂಬುವದು ದೇಶವಿರತಿಯು || ೨|| ಪ್ರಯೋಜನವಿಲ್ಲದೆ ಪಾಪಕ್ಕೆಕಾರಣಗಳಾದ ( ೧ ) ಅಪಧ್ಯಾನ, ( ೨ )ಪಾಪೋಪದೇಶ ( ೩ ) ಪ್ರಮಾದಚರಿತ ( ೪ ) ಹಿಂಸಾಪ್ರಧಾನ ( ೫ ) ಅಶುಭಶ್ರುತಿ, ಈ ೫ ಗಳನ್ನು ಬಿಡುವದು ಅನರ್ಥದಂಡವಿರತಿಯು ||೩|| ತ್ರಿಕಾಲದಲ್ಲಿ ಮೂರುಲೋಕಕ್ಕೆಸ್ವಾಮಿಯಾದಅರ್ಹಂತರನ್ನು ಆಗಮದಲ್ಲಿ ಹೇಳಿದಪ್ರಕಾರ ನಮಸ್ಕರಿಸುವದು ಸಾಮಾಯಿಕವ್ರತವು ||೪|| ಪರ್ವದಿನಗಳಲ್ಲಿ ಅನ್ನ, ಪಾನ, ಖಾದ್ಯ, ಲೇಹ್ಯ, ಗಳೆಂಬ ನಾಲ್ಕುವಿಧ ಆಹಾರವನ್ನು ಬಿಡುವದು ಪ್ರೋಷಧೋಪವಾಸ ವ್ರತವು || ೫ || ಅನ್ನ ಪಾನಾದಿಗಳನ್ನು ವಸ್ತ್ರಾಭರಣಾದಿಗಳನ್ನು ತಾಂಬೂಲ ಸುಗಂಧಾದಿಗಳನ್ನು ಪ್ರಮಾಣಮಾಡಿಕೊಂಡು ತೆಗೆದುಕೊಳ್ಳುವದು ಉಪಭೋಗ ಪರಿಭೋಗ ವ್ರತವು ಒಂದುದಪಾ ಅನುಭವಿಸಿದ್ದನ್ನು ಇನ್ನೊಂದುದಪಾ ಉಪಯೋಗಿಸುವದಕ್ಕೆ ಉಪಭೋಗವು- ಯಾವವೆಂದರೆ ವಸ್ತ್ರಾದಿಗಳು || ಒಂದೇದಪಾ ಭೋಗಿಸುವದಕ್ಕೆ ಪರಿಭೋಗ ( ಭೋಗ ) ವೆಂದು ಹೆಸರು ||೬|| ಅನ್ನಾದಿಗಳು || ೬ || ಮೋಕ್ಷಾರ್ಥ ಉದ್ಯುಕ್ತನಾದ ಪರಕೃತ ಪ್ರಾಸುಕಾಹಾರವನ್ನು ತೆಗದುಕೊಳ್ಳುವ ಜಿನಮುನಿಗಳಿಗೆ ಆಹಾರ, ಪುಸ್ತಕಾದಿ ಉಪಕರಣ, ಔಷಧಿ, ಆವಾಸ, ವೆಂಬನಾಲ್ಕು ವಿಧ ದಾನವನ್ನು ನವವಿಧ ಪುಣ್ಯದಿಂದಲೂ, ಸಪ್ತಗುಣದೊಡನೆ ಕೂಡಿಕೊಡುವದಕ್ಕೆ(ಉತ್ತಮ)ಅತಿಥಿಸಂವಿಭಾಗ ವ್ರತವೆಂದುಹೆಸರು ||೭||ಈ ೭ ಶೀಲಗಳನ್ನು ಹಿಂದೆಹೇಳಿದ ಅಣುವ್ರತಿಯು ( ಗೃಹಸ್ಥನು ) ನಡಸತಕ್ಕದ್ದು || ಆ ಮರಣಪರ್ಯಂತರವೂ ಬೇಡವೆಂದು ವ್ರತಮಾಡಿದರೆ ಅದಕ್ಕೆ ಯಮವ್ರತವೆಂದು ಹೆಸರು || ಕೆಲವುಕಾಲಪರ್ಯಂತರ ಬೇಡವೆಂದು ವ್ರತಮಾಡಿದರೆ ಅದಕ್ಕೆ ನಿಯಮವ್ರತವೆಂದು ಹೆಸರು || ೨೧ ||

## ಸಲ್ಲೇಖನವ್ರತಾಧಿಕರಣಂ.

ಅ || ಅಣುವ್ರತಿಗೆ ಅಗತ್ಯವಾದ ಸಲ್ಲೇಖನೆಯನ್ನು ಹೇಳುತ್ತಾರೆ.

ಸೂ || ಮಾರಣಾಂತಿಕೀಂಸಲ್ಲೇಖನಾಂ ಜೋಷಿತಾಂ || ೨೨ ||

ಟೀ || ಮಾರಣಾಂತಿಕೀಂ - ಮರಣದ ಕೊನೆಯಲ್ಲಿ ಆದ, ಸಲ್ಲೇಖನಾಂ-ಧರ್ಮಧ್ಯಾನದಿಂದ ಪ್ರಾಣ ಬಿಡುವದನ್ನು, ಜೋಷಿತಾಂ-ಪ್ರೀತಿಯಿಂದ ಸೇವಿಸುವನು ಅಗಾರಿಯು (ಗೃಹಸ್ಥನು) ಆಗುತ್ತಾನೆ||

ತಾ || ಮರಣಕಾಲದಲ್ಲಿ ಶರೀರದಲ್ಲಿ ಮಮಕಾರವನ್ನುಬಿಟ್ಟು ಕ್ರೋಧ ಮಾನ ಮಾಯಾ ಲೋಭಗಳನ್ನು ಕೃಶ ಮಾಡತಕ್ಕದ್ದಕ್ಕೆ ಸಲ್ಲೇಖನವೆಂತ ಹೆಸರು. ಇದು ಗೃಹಸ್ಥನಿಗೆ ಮೇಲ್ಗತಿಯನ್ನು ಪಡೆಯುವದಕ್ಕೆ ಕಾರಣವಾಗಿರುವದ್ದರಿಂದ ಪ್ರತಿಗೃಹಸ್ಥನು ಇದನ್ನು ನಡಸಬೇಕು || ೨೨ ||

## ಸಮ್ಯಗ್ದೃಷ್ಟ್ಯತೀಚಾರಾಧಿಕರಣಂ.

ಅ || ಸಮ್ಯಗ್ದೃಷ್ಟಿಗಳ ಅತೀಚಾರವನ್ನು ಹೇಳುತ್ತಾರೆ.

ಸೂ || ಶಂಕಾಕಾಂಕ್ಷಾವಿಚಿಕಿತ್ಸಾನ್ಯದೃಷ್ಟಿಪ್ರಶಂಸಾ
ಸಂಸ್ತವಾಃ ಸಮ್ಯಗ್ದೃಷ್ಟೇರತೀಚಾರಾಃ || ೨೩ ||

ಟೀ || ಶಂಕಾಕಾಂಕ್ಷಾವಿಚಿಕಿತ್ಸಾನ್ಯದೃಷ್ಟಿಪ್ರಶಂಸಾಸಂಸ್ತವಾಃ-ಶಂಕಾ- ಅರ್ಹತ್ಪರಮೇಶ್ವರನಿಂದ ಹೇಳಲ್ಪಟ್ಟ ಶಾಸ್ತ್ರದಲ್ಲಿಹೇಳಿದಂತೆ ಆಗುತ್ತದೆಯೊ ಇಲ್ಲವೊ ಎಂಬಸಂದೇಹವು, ಕಾಂಕ್ಷಾ-ಇಹಜನ್ಮ ಪರಜನ್ಮ ಗಳಲ್ಲಿ ವಿಷಯಭೋಗಾದಿಗಳಲ್ಲಿ ಅಭಿಲಾಷೆ ಮಾಡುವದು, ವಿಚಿಕಿತ್ಸಾ- ರತ್ನತ್ರಯದಿಂದ ಪವಿತ್ರವಾದ ಶರೀರದ ಅಶುಚಿತ್ವದಲ್ಲಿ ಅಸಹ್ಯ ಪಡುವದು, ಅನ್ಯದೃಷ್ಟಿಪ್ರಶಂಸಾ-ಅನ್ಯದೃಷ್ಟಿಗಳ ಜ್ಞಾನಚಾರಿತ್ರಗಳನ್ನು ತಂಸುಮನಸ್ಸಿನಿಂದ ಪ್ರಶಂಸೆಮಾಡುವದು. ಸಂಸ್ತವಾಃ- ಅನ್ಯದೃಷ್ಟಿಗಳಿಗೆ ಇರುವ ಇಲ್ಲದೇಯಿರುವ ಗುಣಗಳನ್ನು ಪ್ರಶಂಸೆಮಾಡುವದು ಇವುಗಳು, ಸಮ್ಯಗ್ದೃಷ್ಟೇಃ - ಸಮ್ಯಕ್ತ್ವಕ್ಕೆ ಮತ್ತು ಸಮ್ಯಗ್ದಷ್ಟಿಗೆ, ಅತೀಚಾರಾಃ- ಅತೀಚಾರಗಳು ||

ತಾ || ವ್ರತಕ್ಕೆ ದೋಷಬಂದರೆ ಅದೇಯೆ ಅತೀಚಾರವು || ಸಂಶಯವು, ಭೋಗಕಾಂಕ್ಷೆಯು, ಆಚಾರಜುಗುಪ್ಸೆಯು, ಮಿಥ್ಯಾದರ್ಶನ,

ಮಿಥ್ಯಾದರ್ಶನವುಳ್ಳಂಥಾವರು ಈ ಯೆರಡರಲ್ಲಿ ಪ್ರಶಂಸೆಯು, ಸ್ತೋತ್ರವು, ಈ ೫ ಸಮ್ಯಗ್ದೃಷ್ಟಿಗೆ ಅತೀಚಾರಗಳು. ಪ್ರಶಂಸೆಗೂ ಸಂಸ್ತವಕ್ಕೂ ಮನೋರಾಗಭೇದವಲ್ಲದೆ ವಾಗ್ಭೇದವಿಲ್ಲ ॥ ೨೩ ॥

ವ್ರ ತ ಶೀ ಲಾ ತೀ ಚಾ ರಾ ಧಿ ಕ ರ ಣಂ.

ಅ । ವ್ರತಾದಿಗಳಿಗೆ ಐದ್ಯೈದು ಅತೀಚಾರವೆಂದು ಹೇಳುತ್ತಾರೆ.

ಸೂ ॥ ವ್ರತಶೀಲೇಷು ಪಂಚಪಂಚಾತೀಚಾರಾಃ ॥ ೨೪ ॥

ಟೀ ॥ ವ್ರತಶೀಲೇಷು. ವ್ರತ- ಐದುವ್ರತಗಳು, ಶೀಲೇಷು-ಏಳು ಶೀಲಗಳು ಇವುಗಳಲ್ಲಿ, ಪಂಚಪಂಚ-ಐದ್ಯೈದು, ಅತೀಚಾರಾಃ-ಅತೀಚಾರಗಳು ॥ಪಾ॥ಯಥಾಕ್ರಮಂ ।ತಾ॥ ಹಿಂಸಾದಿ ಐದು ವ್ರತಗಳಲ್ಲಿಯು, ದಿಗ್ವಿರತ್ಯಾದಿಸಪ್ತಶೀಲಗಳಲ್ಲಿಯು, ಐದ್ಯೈದು ಅತೀಚಾರಗಳು ಬರುತ್ತಿವೆ ॥ ೨೪ ॥

ಅಹಿಂಸಾವ್ರತಾತೀಚಾರಗಳನ್ನು ಹೇಳುತ್ತಾರೆ.

ಸೂ ॥ ಬಂಧವಧಚ್ಛೇದಾತಿಭಾರಾರೋಪಣಾನ್ನಪಾನನಿರೋಧಾಃ ॥

ಟೀ ॥ ಬಂಧವಧಚ್ಛೇದಾತಿ ಭಾರಾರೋಪಣಾನ್ನಪಾನನಿರೋಧಾಃ- ಬಂಧ - ಪಶುಮೊದಲಾದವುಗಳನ್ನು ಹಗ್ಗಮೊದಲಾದ್ದರಿಂದ ನೋಣಹಾಕುವಂತೆ ಅಣಿಗಿಶಿ ಕಟ್ಟುವುದು, ವಧ- ಚಮಟಿಗೆ ಬೆತ್ತಮೊದಲಾದ್ದರಿಂದ ನೋಯುವಂತೆ ಹೊಡೆಯುವದು, ಚ್ಛೇದ-ಕಿವಿಮೊದಲಾದವುಗಳೆನ್ನು ಕತ್ತರಿಸುವದು, ಅತಿಭಾರಾರೋಪಣ - ಹೊರವಷ್ಟು ಭಾರಕ್ಕಿಂತಹೆಚ್ಚು ಭಾರಹೊರಿಸುವದು, ಅನ್ನಪಾನನಿರೋಧಾಃ-ಅನ್ನವನ್ನು ನೀರನ್ನು ಕಾಲಕ್ಕೆಸರಿಯಾಗಿ ಕೊಡದೇ ಸಂಕಟ ಪಡಿಸುವದು ॥ ೨೫ ॥

ತಾ ॥ ಬಂಧನಮಾಡುವುದು, ಹೊಡೆಯುವುದು, ಅವಯವ ಕತ್ತರಿಸುವುದು, ಅತ್ಯಂತಭಾರ ಹೊರಿಸುವುದು, ಅನ್ನನೀರನ್ನು ತಡೆಯುವುದು ಈ ೫ ಅಹಿಂಸಾವ್ರತದ ಅತೀಚಾರಗಳು ॥ ೨೫ ॥

ಅ ॥ ಸತ್ಯವ್ರತದ ಅತೀಚಾರಗಳನ್ನು ಹೇಳುತ್ತಾರೆ.

ಸೂ ॥ ಮಿಥ್ಯೋಪದೇಶರಹೋಭ್ಯಾಖ್ಯಾನ ಕೂಟಲೇಖಕ್ರಿಯಾನ್ಯಾಸಾಪಹಾರಸಾಕಾರ ಮಂತ್ರಭೇದಾಃ ॥ ೨೬ ॥

ಟೀ ॥ ಮಿಥ್ಯೋಪದೇಶರಹೋಭ್ಯಾಖ್ಯಾನಕೂಟಲೇಖಕ್ರಿಯಾನ್ಯಾಸಾಪಹಾರ ಸಾಕಾರಮಂತ್ರಭೇದಾಃ - ಮಿಥ್ಯೋಪದೇಶ-ಅಭ್ಯುದಯ ನಿಶ್ರೇಯಸಸುಖಕ್ಕೆ ಕಾರಣವಾದ ಕ್ರಿಯೆಗಳನ್ನು ಅನ್ಯಥಾ ಉಪದೇಶಮಾಡುವ

ದು, ರಹೋಭ್ಯಾಖ್ಯಾನ - ಸ್ತ್ರೀಪುರುಷರ ಏಕಾಂತವನ್ನು ಪ್ರಕಾಶ ಮಾಡುವದು, ಕೂಡಲೇಖಕ್ರಿಯೆ-ಅನ್ಯನುಹೇಳದೇಯಿರುವವಚನಗಳ ನ್ನು, ಮತ್ತು ಅನ್ಯರ ಪ್ರಯೋಗ ವಶದಿಂದ ಈ ಪ್ರಕಾರವಾಗಿ ಇವನು ಮಾಡಿದನು ಹೇಳದನು ಎಂದು ಬರೆದು ಕಳುಹಿಸುವದು ಅಂದರೆ ಸು ಳ್ಳುಕಾಗದಗಳ ಬರೆಯುವದು, ನ್ಯಾಸಾಪಹಾರ- ಸುವರ್ಣ ಮೊದಲಾದ ದ್ರವ್ಯಗಳನ್ನು ಇಟ್ಟು ಪುನಃತೆಗದುಕೊಳ್ಳುವಾಗ್ಯೆ ಅದರ ಸಂಖ್ಯೆಯನ್ನು ಮರೆದಂಥಾವರಿಗೆ ಸ್ವಲ್ಪ ಸಂಖ್ಯಾವಾಗಿ ಹೇಳುವದು ಅಂದರೆ ಇದ್ದದ್ದ ನ್ನು ಪ್ರಾಕಾರಾಂತರ ಹೇಳುವದು, ಸಾಕಾರಮಂತ್ರ ಭೇದಾಃ-ಆಕಾರಾದಿ ಶರೀರಚೇಷ್ಟೆಗಳಿಂದ ಇತರರ ಅಭಿಪ್ರಾಯುವನ್ನು ತಿಳದು ಅದನ್ನು ಪ್ರ ಕಟಮಾಡುವದು, ಈ ೫ ಸತ್ಯವ್ರತದ ಅತೀಚಾರಗಳು ॥

ತಾ ॥ ಮಿಥ್ಯಾಶಾಸ್ತ್ರೋಪದೇಶವು, ಸ್ತ್ರೀ ಪುರುಷರ ಗೋ ಪ್ಯವನ್ನು ಹೇಳುವದು ಅಂದರೆ ತನ್ನಿಂದ ತಿಳಿಯಲ್ಪಟ್ಟ [ಅಂಥಾ ಕೃತ್ಯವನ್ನಾದರು ಹೇಳಬಾರದು. ಅದು ಜನಗಳ ರಾಗದ್ವೇಷಕ್ಕೆ ಕಾ ರಣವಾಗುತ್ತೆ. ಪರರ ವಂಚಿಸುವದಕ್ಕೋಸ್ಕರ ಕಪಟ ಬರವಣಿಗೆ ಮಾ ಡುವದು ತನ್ನಲ್ಲಿಯಿಟ್ಟ ವಸ್ತುವನ್ನು ಅಪಹಾರ ಮಾಡುವದಕ್ಕೋಸ್ಕರ ಸಂಖ್ಯಾದಿಗಳನ್ನು ಸ್ವಲ್ಪವಾಗಿ ಹೇಳುವದು. ಮತ್ತೊಬ್ಬರ ಅಂತರಂ ಗವನ್ನು ಅವರ ಮುಖನಯುನಾದಿಗಳ ನೋಡಿ ತಿಳಿದು ಪ್ರಕಾಶ ಮಾಡು ವುದು ಈ ಐದು ಸತ್ಯವ್ರತದ ಅತೀಚಾರಗಳು ॥ ೨೬ ॥

ಅ ॥ ಅಸ್ತೇಯುವ್ರತದ ಅತೀಚಾರಗಳನ್ನು ಹೇಳುತ್ತಾರೆ.

ಸೂ ॥ ಸ್ತೇನಪ್ರಯೋಗ ತದಾಹೃತಾದಾನ ವಿರುದ್ಧರಾಜ್ಯಾತಿ ಕ್ರಮಹೀನಾಧಿಕ ಮಾನೋನ್ಮಾನ ಪ್ರತಿರೂಪಕ ವ್ಯವಹಾರಾಃ ॥ ೨೭ ॥

ಟೀ ॥ ಸ್ತೇನ ಪ್ರಯೋಗತದಾಹೃತಾದಾನ ವಿರುದ್ಧರಾಜ್ಯಾತಿ ಕ್ರಮ ಹೀನಾಧಿಕಮಾನೋನ್ಮಾನ ಪ್ರತಿರೂಪಕ ವ್ಯವಹಾರಾಃ - ಸ್ತೇ ನಪ್ರಯೋಗ-ಕಳ್ಳತನಮಾಡಿಸುವದು, ತಾದಾಹೃತಾದಾನ - ಕಳುವಿನ ವಸ್ತುವನ್ನು ತೆಗದುಕೊಳ್ಳುವದು, ವಿರುದ್ಧರಾಜ್ಯಾತಿಕ್ರಮ-ಮತಜಾತಿ ಧರ್ಮಗಳಿಗೆ ವಿರುದ್ಧವಿಲ್ಲದ ರಾಜ್ಯಪದ್ಧತಿಗೆ ವಿರುದ್ಧಾಚರಣೆ ಮಾಡುವ ದು, ಹೀನಾಧಿಕಮಾನೋನ್ಮಾನ - ಕಮ್ಮಿ ಸೇರಿನಿಂದ ಕೊಡುವದು

ಹೆಚ್ಚು ಸೇರಿನಿಂದ ತೆಗದುಕೊಳ್ಳುವದು, ಪ್ರತಿರೂಪಕ ವ್ಯವಹಾರಾಃ- ಕೃತ್ರಿಮಸುವರ್ಣಾದಿಗಳ ವಂಚನಾ ಪೂರ್ವಕ ವ್ಯವಹಾರವು, ಈ ೫ ಅಸ್ತೇಯ ವ್ರತದ ಅತೀಚಾರಗಳು || ವಿರುದ್ಧರಾಜ್ಯಾತಿಕ್ರಮವೆಂಬುವ ಪದಕ್ಕೆ ಕೆಲವು ವ್ಯಾಖ್ಯಾನಗಾರರು ರಾಜ್ಯಪಲ್ಲಟದಲ್ಲಿ ಹೆಚ್ಚು ಬೆಲೆ ಬಾಳುವ ವಸ್ತುಗಳನ್ನು ಕಮ್ಮಿ ಬೆಲೆಗೆ ತೆಗೆಯುವದು ಎಂದು ಅರ್ಥ ವನ್ನೂ ಬರೆದಿದ್ದಾರೆ ||

ತಾ || ಅನ್ಯರಿಂದ ಕಳವು ಮಾಡಿಸುವದು ಮುಂತಾದ ಚೋರಪ್ರ ಯೋಗವು, ಚೋರದ್ರವ್ಯ ಕ್ರಯ ವಿಕ್ರಯಾದಿಗಳು, ಷ್ಟಾಮ ಢಾಮರಾ ದಿಗಳಿಂದ ರಾಜ್ಯ ಕ್ಷೋಭೆಯಲ್ಲಿ ಹೀನಕ್ರಯದಿಂದ ಅಧಿಕ ವಸ್ತುವನ್ನು ತೆಗದುಕೊಳ್ಳುವದು ಮುಂತಾದ ಅತಿಕ್ರಮಣವು, ತಾನು ತೆಗದುಕೊ ಳ್ಳುವಾಗ ದೊಡ್ಡ ಸೇರನಿಂದಲೂ, ಕೊಡುವಾಗ ಚಿಕ್ಕ ಸೇರನಿಂದಲೂ, ಅಳೆಯುವದು. ಹೆಚ್ಚು ಕಮ್ಮಿಯಾಗಿ ತೂಗುವುದು, ಅಧಿಕ ಕ್ರಯ ವುಳ್ಳ ವಸ್ತುವಿಗೆ ಸುಲಭ ಕ್ರಯವುಳ್ಳ ವಸ್ತುವನ್ನು ಬೆರಸುವುದು ಮುಂತಾದ ನಡವಳಿಕೆಯು ಈ ೫ ಅಸ್ತೇಯವ್ರತದ ಅತೀಚಾರಗಳು ||

ಅ || ಬ್ರಹ್ಮಚರ್ಯವ್ರತದ ಅತೀಚಾರಗಳನ್ನು ಹೇಳುತ್ತಾರೆ.

ಸೂ || ಪರವಿವಾಹ ಕರಣೇತ್ವರಿಕಾ ಪರಿಗೃಹೀತಾ ಪರಿಗೃಹೀತಾ ಗಮನಾನಂಗ ಕ್ರೀಡ ಕಾಮ ತೀವ್ರಾಭಿನಿವೇಶಾಃ || ೨೮ ||

ಟೀ || ಪರವಿವಾಹ ಕರಣೇತ್ವರಿಕಾಪರಿಗೃಹೀತಾ ಪರಿಗೃಹೀತಾ ಗಮನಾನಂಗ ಕ್ರೀಡ ಕಾಮ ತೀವ್ರಾಭಿ ನಿವೇಶಾಃ - ಪರವಿವಾಹಕರಣ - ಅನ್ಯರಿಗೆ ವಿವಾಹ ಮಾಡುವದು, ಇತ್ವರಿಕಾ ಪರಿಗೃಹೀತಾ - ವ್ಯಭಿಚಾರಿ ಣೀಯಾದ ಪರಸ್ತ್ರೀಯು, ಅಪರಿಗೃಹೀತಾ - ವೇಶ್ಯಾಸ್ತ್ರೀಯು, ಇವರುಗಳಲ್ಲಿ, ಗಮನ - ತೆಗೆಯುವದು ಕೊಡುವದು ಮಾತಾಡುವದು ಮೊದಲಾದ ಸಂಬಂಧವು, ಅನಂಗಕ್ರೀಡಾ . ಕಾಮತೃಪ್ತಿಗೆ ನಿಯತವಾ ದ ಅಂಗವನ್ನುಬಿಟ್ಟು ಬೇರೇ ವಿಧವಾಗಿ ಕ್ರೀಡಿಸುವದು, ಕಾಮತೀವ್ರಾ ಭಿನಿವೇಶಾಃ - ಅನವರತ ಕಾಮಾಸಕ ಚಿತ್ತನಾಗಿರುವದು, ಈ ೫ ಬ್ರಹ್ಮ ಚರ್ಯವ್ರತದ ಅತೀಚಾರಗಳು ||

ತಾ || ಅನ್ಯರಿಗೆ ಮದುವೆ ಮಾಡುವದು ವ್ಯಭಿಚಾರಸ್ತ್ರೀಯರಲ್ಲಿ

ಸೇರಿ ಇರುವ ಗರತೀಸಂಬಂಧವು, ವ್ಯಭಿಚಾರ ಸ್ತ್ರೀಯರಲ್ಲಿ ಸೇರಿದ ವೇಶ್ಯಾದಿಗಮನವು, ಕ್ರೀಡೆಗೆ ನಿಬಂಧನೆಯಾಗಿ ಯಿರುವ ಅವಯವಲ್ಲವೆ ಬೇರೆ ಅವಯವದಲ್ಲಿ ಕ್ರೀಡಿಸುವುದು ಕಾಮದಲ್ಲಿ ಅತ್ಯಂತ ಆಗ್ರಹವು ಈ ಐದು ಬ್ರಹ್ಮಚರ್ಯವ್ರತದ ಅತೀಚಾರಗಳು ॥ ೨೮ ॥

ಅ ॥ ಅಪರಿಗ್ರಹದ ವ್ರತದ ಅತೀಚಾರವನ್ನು ಹೇಳುತ್ತಾರೆ.

ಸೂ ॥ ಕ್ಷೇತ್ರವಾಸ್ತು ಹಿರಣ್ಯ ಧನ ಧಾನ್ಯದಾಸೀದಾಸಕುಪ್ಯ ಭಾಂಡಪ್ರಮಾಣಾತಿಕ್ರಮಾಃ ॥ ೨೯ ॥

ಟೀ ॥ ಕ್ಷೇತ್ರವಾಸ್ತು ಹಿರಣ್ಯ ಧನಧಾನ್ಯ ದಾಸೀದಾಸಕುಪ್ಯ ಭಾಂಡಪ್ರಮಾಣಾತಿಕ್ರಮಾಃ-ಕ್ಷೇತ್ರವಾಸ್ತು-ಭೂಮಿ ಮನೆ ಇವುಗಳು, ಹಿರಣ್ಯ - ಚಿನ್ನ ಬೆಳ್ಳಿ ಮೊದಲಾದದ್ದು, ಧನಧಾನ್ಯ-ಪಶು ಮೊದಲಾದದ್ದು ಮತ್ತು ಭತ್ತಮೊದಲಾದ ಧಾನ್ಯಗಳು, ದಾಸೀದಾಸ - ಗೌಡಿ ಭೃತ್ಯರು, ಕುಪ್ಯಭಾಂಡ - ವಸ್ತ್ರ ಚಂದನಾದಿಗಳು ಪಾತ್ರ, ಇವುಗಳ, ಪ್ರಮಾಣ - ಪರಿಮಿತಿಯನ್ನು ಅತಿಕ್ರಮಾಃ - ಎಲ್ಲೆ ಮೀರುವದು, ಈ ೫ ಅಪರಿಗ್ರಹವ್ರತದ ಅತೀಚಾರಗಳು ॥

ತಾ ॥ ವ್ರತದಲ್ಲಿ ಪರಿಮಿತಿ ಮಾಡಿರುವದಕ್ಕಿಂತ ಗದ್ದೆ, ಮನೆ, ಹೆಚ್ಚಿಸುವುದು, ಬೆಳ್ಳಿ, ಚಿನ್ನ, ಇವುಗಳ ಪ್ರಮಾಣವನ್ನು, ಹೆಚ್ಚಿಸುವುದು, ದನ, ದವಸಗಳ ಪ್ರಮಾಣವನ್ನು ಹೆಚ್ಚಿಸುವುದು ಸೇವೆಮಾಡುವ ಸ್ತ್ರೀ ಪುರುಷರನ್ನು ಹೆಚ್ಚಿಸುವುದು. ಬಟ್ಟೆ ಪಾತ್ರ ಚಂದನಾದಿ ದ್ರವ್ಯ ಇವುಗಳನ್ನು ಹೆಚ್ಚಿಸುವುದು. ಈ ಐದು ಅಪರಿಗ್ರಹ ವ್ರತದ ಅತೀಚಾರಗಳು ॥ ೨೯ ॥

ಅ ॥ ದಿಗ್ವ್ರತದ ಅತೀಚಾರಗಳನ್ನು ಹೇಳುತ್ತಾರೆ.

ಸೂ ॥ ಊರ್ಧ್ವಾಧಸ್ತಿರ್ಯಗ್ವ್ಯತಿ ಕ್ರಮಕ್ಷೇತ್ರವೃದ್ಧಿಸ್ಮೃತ್ಯಂತರಾದಾನಾನಿ ॥ ೩೦ ॥

ಟೀ ॥ ಊರ್ಧ್ವಾದಸ್ತಿರ್ಯಗ್ವ್ಯತಿಕ್ರಮಕ್ಷೇತ್ರ ವೃದ್ಧಿಸ್ಮೃತ್ಯಂತರಾದಾನಾನಿ - ಊರ್ಧ್ವ - ಮೇಲೆ, ಅಧಃ - ಕೆಳಗೆ, ತಿರ್ಯಕ್ - ಅಡ್ಡಲಾಗಿ, ವ್ಯತಿಕ್ರಮ - ಅತಿಕ್ರಮಿಸುವದು, ಕ್ಷೇತ್ರವೃದ್ಧಿ - ಪರಿಮಿತಮಾಡಿರುವ ಪ್ರದೇಶಕ್ಕಿಂತ ಹೆಚ್ಚಿಸುವದು, ಸ್ಮೃತ್ಯಂತರಾದಾನಾನಿ-

ತಾನು ಮಾಡಿದ ಎಲ್ಲೆಯನ್ನು ಮರತುಬಿಡುವದು ಇವು ೫ ದಿಗ್ವ್ರತದ ಅತೀಚಾರಗಳು ||

ತಾ || ತಾನು ನಿಬಂಧನೆಮಾಡಿ ಯಿರುವ ದಿಕ್ಕುಗಳೊಳಗೆ ೧ ಬೆಟ್ಟವನ್ನು ಹತ್ತುವದು. ೨ ಭಾವಿ ತೋಡುವದು. ೩ ಗುಹಾದಿ ಪ್ರವೇಶ ಮಾಡುವದು. ೪ ಮೊದಲು ಯಿದ್ದದ್ದಕಿಂತ ಕೃಷಿ ಭೂಮಿಗಳನ್ನು ಹೆಚ್ಚಿಸುವದು. ೫ ತಾನು ಮೊದಲು ವ್ರತ ಮಾಡಿದ್ದನ್ನು ಮರತು ಮತ್ತೊಂದು ಜ್ಞಾಪಕವನ್ನು ತೆಗೆದುಕೊಳ್ಳುವದು, ಈ ಐದು ದಿಗ್ವ್ರತದ ಅತೀಚಾರಗಳು || ೩೦ ||

ಅ || ದೇಶವ್ರತದ ಅತೀಚಾರನನ್ನು ಹೇಳುತ್ತಾರೆ.

ಸೂ || ಆನಯನಪ್ರೇಷ್ಯ ಪ್ರಯೋಗಶಬ್ದರೂಪಾನುಪಾತ ಪುದ್ಗಲಕ್ಷೇಪಾಃ || ೩೧ ||

ಟೀ || ಆನಯನಪ್ರೇಷ್ಯ ಪ್ರಯೋಗ ಶಬ್ದ ರೂಪಾನುಪಾತ ಪುದ್ಗಲಕ್ಷೇಪಾಃ - ಆನಯನ - ತಾನು ಪ್ರಮಾಣಮಾಡಿರುವ ಸ್ಥಳದಿಂದ ಹೊರಗೆ ಯಿರುವ ಸಾಮಾನು ತರಿಸುವದು, ಪ್ರೇಷ್ಯಪ್ರಯೋಗ - ತಾನು ಪ್ರಮಾಣೀಕರಿಸಿದ ಕ್ಷೇತ್ರದಲ್ಲಿದ್ದು ಅದರಿಂದ ಆಚೆ ಈ ರೀತಿ ಮಾಡೆಂದು ಹೇಳುವದು, ಶಬ್ದಾನುಪಾತ - ಪ್ರಮಾಣಮಾಡಿರುವ ಕ್ಷೇತ್ರದಲ್ಲಿದ್ದು ಹೊರಗೆ ಯಿರುವನ ಕುರಿತು ಧ್ವನಿಮಾಡುವದು, ರೂಪಾನುಪಾತ - ಕೆಲಸಗಳನ್ನು ಶೀಘ್ರವಾಗಿಮಾಡಲಿ ಎಂದು ತಂನ ರೂಪನ್ನು ತೋರಿಸುವದು, ಪುದ್ಗಲಕ್ಷೇಪಾಃ - ಕೆಲಸ ಮಾಡುವದನ್ನು ಕುರಿತು ಹಂಟೆ ಕಲ್ಲು ಮೊದಲಾದವುಗಳಿಂದ ಹಾಕುವದು ಈ ೫ ದೇಶವ್ರತದ ಅತೀಚಾರಗಳು ||

ತಾ || ೧ ತಾನು ಬಿಟ್ಟ ದೇಶದಿಂದ ಪಧಾರ್ಥ ತರಿಸುವದು, ೨ ಅಲ್ಲಿಗೆ ಆಳುಗಳನ್ನು ಕಳುಹಿಸುವದು, ೩ ಅಲ್ಲೀ ಶಬ್ದವನ್ನು ಕೇಳುವದು ಅಥವಾ ಅವರಿಗೆ ಕೇಳುವಂತೆ ಹೇಳುವದು, ೪ ತನ್ನ ರೂಪನ್ನು ಅಲ್ಲಿಗೆ ತೋರಿಸುವದು, ಅಥವಾ ತಾನು ಆ ದೇಶವನ್ನು ನೋಡುವದು, ೫ ಮಣ್ಣು ಹೆಂಟೆ ಕಲ್ಲು ಮೊದಲಾದವುಗಳನ್ನು ಯಿಡುವದು ಈ ಐದು ದೇಶವ್ರತದ ಅತೀಚಾರಗಳು || ೩೧ ||

ಅ || ಅನರ್ಥದಂಡ ವ್ರತದ ಅತೀಚಾರಂಗಳನ್ನು ಹೇಳುತ್ತಾರೆ.

ಸೂ || ಕಂದರ್ಪಕೌತ್ಕುಚ್ಯಮೌಖರ್ಯಾಸಮೀಕ್ಷ್ಯಾಧಿಕರಣೋಪಭೋಗಪರಿಭೋಗಾನರ್ಥಕ್ಯಾನಿ || ೩೨ ||

ಟೀ|| ಕಂದರ್ಪ ಕೌತ್ಕುಚ್ಯ ಮೌಖರ್ಯಾ ಸಮೀಕ್ಷ್ಯಾಧಿಕರಣೋಪ ಭೋಗಪರಿಭೋಗಾನರ್ಥಕ್ಯಾನಿ - ಕಂದರ್ಪ - ರಾಗೋದ್ರೇಕದಿಂದ ನಗೆಯೊಡನೆ ಕೂಡಿದ ಪುಂಡುಮಾತು, ಕೌತ್ಕುಚ್ಯ - ಕೆಟ್ಟದೇಹವ್ಯಾಪಾರವೊಡನೆ ಕೂಡಿದ ಹಾಸ್ಯ ವಚನವು, ಮೌಖರ್ಯ - ಅಶ್ಲೀಲಗಳಾದ ಪ್ರಯೋಜನವಿಲ್ಲದ ಬಹಳ ಮಾತುಗಳು, ಅಸಮೀಕ್ಷ್ಯಾಧಿಕರಣ - ಪ್ರಯೋಜನವಿಲ್ಲದೇ ಮನವಚನಕಾಯಗಳನ್ನು ಕೆಟ್ಟದ್ದಾಗಿ ಇಡುವದು, ಉಪಭೋಗಪರಿಭೋಗಾನರ್ಥಕ್ಯಾನಿ - ತನಗೆ ಉಪಯೋಗವಿಲ್ಲದೆ ಭೋಗೋಪಭೋಗ ವಸ್ತುಗಳನ್ನು ಹೆಚ್ಚಿಸುವದು ಈ ಐದು ಅನರ್ಥದಂಡ ವ್ರತದ ಅತೀಚಾರಗಳು ||

ತಾ || ೧ ರಾಗೋದ್ರೇಕ ದ್ದೆಶೆಯಿಂದ ನಗುತ್ತಾ ದ್ವಂದ್ವಾರ್ಥದ ಬಂಡ ಮಾತುಗಳನ್ನು ಆಡುವದು. ೨ ಮತ್ತೊಬ್ಬರಲ್ಲಿ ದುಷ್ಟವಾದ ಶರೀರದ ಕಾರ್ಯ್ಯವು. ೩ ಕೆಟ್ಟ ಧೈರ್ಯ್ಯದಿಂದ ಬಹಳವಾಗಿ ಪ್ರಲಾಪಿಸುವದು. ೪ ಮನೋವಾಕ್ಕಾಯಗಳನ್ನು ವಿಚಾರ ವಿಲ್ಲದೆ ಯಿಡುವದು. ೫ ತನಗೆ ಪ್ರಯೋಜನವಿಲ್ಲದೆ ಉಪಭೋಗ ಪರಿಭೋಗಗಳನ್ನು ಯಿಟ್ಟುಕೊಂಡು ಯಿರುವದು ಈ ಐದು ೩ನೇ ಶೀಲದ ಅತೀಚಾರಗಳು ||

ಅ || ಸಾಮಾಯಿಕವ ಅತೀಚಾರಂಗಳನ್ನು ಹೇಳುತ್ತಾರೆ.

ಸೂ || ಯೋಗದುಃಪ್ರಣಿಧಾನಾನಾದರಸ್ಮೃತ್ಯನುಪಸ್ಥಾನಾನಿ ||

ಟೀ || ಯೋಗದುಃಪ್ರಣಿಧಾನಾನಾದರಸ್ಮೃತ್ಯನುಪಸ್ಥಾನಾನಿ - ಯೋಗದುಃಪ್ರಣಿಧಾನ - ಮನೋದುಃಪ್ರಣಿಧಾನ ಕಾಯದುಃಪ್ರಣಿಧಾನ ವಚನದುಃಪ್ರಣಿಧಾನವೆಂಬ ಮೂರು, ಅನಾದರ- ಆವಶ್ಯಕವಾದದ್ದರಲ್ಲಿ ಅಪೇಕ್ಷೆ ಯಿಲ್ಲದೇ ಇರುವದು, ಸ್ಮೃತ್ಯನುಪಸ್ಥಾನಾನಿ - ಏಕಾಗ್ರಚಿತ್ತವಿಲ್ಲದೇ ಯಿರುವದು, ಈ ೫ ಸಾಮಾಯಿಕ ವ್ರತದ ಅತೀಚಾರಗಳು||

ತಾ || ೧ ಶರೀರವನ್ನು ದುಷ್ಟವಾಗಿ ಯಿರಿಸುವದನ್ನು ಮಾಡುವದು. ೨ ಧ್ಯಾನವನ್ನು ಬಿಟ್ಟು ಬೇರೆ ಮಾತನಾಡುವದು ಮಾಡುವದು

ವಾಕ್‌ದುಃಪ್ರಣಿಧಾನವು. ೩ ಬೇರೆ ಆಲೋಚನೆ ಮಾಡುವದು, ಮನೋದುಃಪ್ರಣಿಧಾನವು. ೪ ಉತ್ಸಾಹವಿಲ್ಲದೆ ಯಿರುವದು. ೫ ಆತ್ಮನೊಂದರಲ್ಲೇ ಮನಸ್ಸು ಯಿಡದೆ ಇರುವದು. ಈ ೫ ಸಾಮಾಯಿಕ ವ್ರತದ ಅತೀಚಾರಗಳು ‖ ೩೩ ‖

ಅ ‖ ಪ್ರೋಷದೋಪವಾಸದ ಅತೀಚಾರಗಳನ್ನು ಹೇಳುತ್ತಾರೆ.

ಸೂ ‖ ಅಪ್ರತ್ಯವೇಕ್ಷಿತಾ ಪ್ರಮಾರ್ಜಿತೋತ್ಸರ್ಗಾದಾನ ಸಂಸ್ತರೋಪ ಕ್ರಮಣಾ ನಾದರಸ್ಮೃತ್ಯೆ ನುಪಸ್ಥಾನಾನಿ ‖ ೩೪ ‖

ಟೀ ‖ ಅಪ್ರತ್ಯವೇಕ್ಷಿತಾ ಪ್ರಮಾರ್ಜಿತೋತ್ಸರ್ಗಾದಾನ ಸಂಸ್ತರೋಪಕ್ರಮಣಾನಾದರ ಸ್ಮೃತ್ಯನುಪಸ್ಥಾನಾನಿ - ಅಪ್ರತ್ಯ ವೇಕ್ಷಿತಾ ಪ್ರಮಾರ್ಜಿತೋತ್ಸರ್ಗ - ನೋಡದೆ ಗುಡಿಸದೆ ಯಿರುವಂಥಾ ಭೂಮಿಯಲ್ಲಿ ಮಲಮೂತ್ರಾದಿಗಳನ್ನು ಬಿಡುವದು, ಆದಾನ - ನೋಡದೇ ಗುಡಿಸದೆ ಅರ್ಹದಾಚಾರ್ಯಾದಿಗಳಪೂಜೋಪಕರಣಗಳನ್ನು ತೆಗದುಕೊಳ್ಳುವದು, ಸಂಸ್ತರೋಪ ಕ್ರಮಣ - ನೋಡದೆ ಗುಡಿಸದೆ ಹಾಸಿಗೆ ಮೊದಲಾದವುಗಳನ್ನು ಹಾಸುವುದು, ಅನಾದರ - ಹೊಟ್ಟೆ ಹಸಿವಿನಿಂದ ಅವಶ್ಯವಾಗಿ ಮಾಡಬೇಕಾದ್ದರಲ್ಲಿ ಉತ್ಸಾಹವಿಲ್ಲದೇ ಯಿರುವದು, ಸ್ಮೃತ್ಯನುಪಸ್ಥಾನಾನಿ - ಅವಶ್ಯಕ ಕ್ರಿಯೆಯಲ್ಲಿ ಜಾಗರೂಕತೆ ಯಿಲ್ಲದಿರುವದು, ಈ ೫ ಪ್ರೋಷದೋಪವಾಸವ್ರತದ ಅತೀಚಾರಗಳು ‖

ತಾ ‖ ೧ ನೋಡದೆ ಮತ್ತು ಕಸಗಳನ್ನು ಹೋಗಲಾಡಿಸದೆ ಯಿರುವ ಸ್ಥಳದಲ್ಲಿ ಮಲಮೂತ್ರವನ್ನು ಬಿಡುವದಕ್ಕೆ ವುಪಕ್ರಮಿಸುವದು. ೨ ನೋಡದೆಪದಾರ್ಥವನ್ನು ತೆಗದುಕೊಳ್ಳುವದಕ್ಕೆ ಉಪಕ್ರಮಿಸುವದು. ೩ ನೋಡದೆ ಹಾಸಿಗೆಹಾಸುವದಕ್ಕೆ ಉಪಕ್ರಮಿಸುವದು. ೪ ಉಪವಾಸದಲ್ಲಿ ಪ್ರೀತಿಯಿಲ್ಲದೆ ಯಿರುವದು. ೫ ಆತ್ಮಧ್ಯಾನಾದಿ ಒಳ್ಳೆ ಸ್ಮರಣೆಯನ್ನು ಯಿಡದೆ ಯಿರೋಣವು. ಈ ೫ ಪ್ರೋಷದೋಪವಾಸ ವ್ರತದ ಅತೀಚಾರಗಳು ‖

ಅ ‖ ಉಪಭೋಗ ಪರಿಭೋಗವ್ರತದ ಅತೀಚಾರಗಳನ್ನು ಹೇಳುತ್ತಾರೆ.

ಸೂ ‖ ಸಚಿತ್ತ ಸಂಬಂಧ ಸಂಮಿಶ್ರಾಭಿಷವದುಃಪಕ್ವಾಹಾರಾಃ‖

ಟೀ ‖ ಸಚಿತ್ತ ಸಂಬಂಧ ಸಂಮಿಶ್ರಾಭಿಷವದುಃ ಪಕ್ವಾಹಾರಾಃ- ಸಚಿತ್ತ - ಪ್ರಾಸುಕವಿಲ್ಲದ ಫಲಾದಿಗಳನ್ನು ಸೇವನೆ ಮಾಡುವದು, ಸ

ಬಂಧ - ಸಚಿತ್ತದಲ್ಲಿ ಬೆರಸಿದ ಆಹಾರವನ್ನು ತೆಗದುಕೊಳ್ಳುವದು, ಸಂಮಿಶ್ರ - ಸೂಕ್ಷ್ಮ ಜಂತುಗಳಿಂದ ಸಂಭಿಂನವಾಗಿ ಬೆರಸಿ ಬೇರೆ ಮಾಡುವದಕ್ಕೆ ಆಗದ ಆಹಾರವನ್ನು ತೆಗದುಕೊಳ್ಳುವದು, ಅಭಿಷವ - ಗಂಜಿ ನೀರು ಮೊದಲಾದ ದ್ರವ ದ್ರವ್ಯವಾದ ಕಾಮ ವಿಕಾರ ವಸ್ತುಗಳನ್ನು ಆಹಾರ ಮಾಡುವದು, ದುಃಪಕ್ವಾಹಾರಾಃ - ಬೇಯದೇ ಯಿರುವದು ಸಂಪೂರ್ಣ ಬೆಂದದ್ದು ಇವುಗಳನ್ನು ಆಹಾರ ಮಾಡುವದು, ಈ ೫ ಉಪಭೋಗ ಪರಿಭೋಗವ್ರತದ ಅತೀಚಾರಗಳು ||

ತಾ || ೧ ಸಚಿತ್ತಾಹಾರವು. ೨ ಸಚಿತ್ತ ಜನನಾದಿ ಸಂಬಂಧಾಹಾರವು. ೩ ಸಚಿತ್ತ ಆಗಮನಾದಿ ಮಿಶ್ರಾಹಾರಗಳು. ೪ ವೃಷ್ಯ-ಕಾಮೋದ್ರೇಕಗಳಾದ ಆಹಾರಗಳು. ೫ ಕೆಟ್ಟದ್ದಾಗಿ ಪಕ್ವಮಾಡಿಯಿರುವ ಆಹಾರಗಳು. ಈ ಐದುಗಳು ಭೋಗೋಪಭೋಗ ಪರಿಮಾಣ ವ್ರತದ ಅತೀಚಾರಗಳು || ೩೫ ||

ಅ || ಅತಿಥಿಸಂವಿಭಾಗ ವ್ರತದ ಅತೀಚಾರಗಳನ್ನು ಹೇಳುತ್ತಾರೆ.

ಸೂ || ಸಚಿತ್ತನಿಕ್ಷೇಪಾಪಿಧಾನ ಪರವ್ಯಪದೇಶಮಾತ್ಸರ್ಯ ಕಾಲಾತಿಕ್ರಮಾಃ || ೩೬ ||

ಟೀ || ಸಚಿತ್ತ ನಿಕ್ಷೇಪಾಪಿಧಾನ ಪರವ್ಯಪದೇಶಮಾತ್ಸರ್ಯ ಕಾಲಾತಿಕ್ರಮಾಃ - ಸಚಿತ್ತ ನಿಕ್ಷೇಪ - ಸಚಿತ್ತವಾದ ತಾವರೇಯಲೆ ಮೊದಲಾದವುಗಳಲ್ಲಿದ್ದ ಆಹಾರವನ್ನು ಕೊಡುವದು, ಪಿಧಾನ - ಸಚಿತ್ತ ವಸ್ತುವಿನಿಂದ ಮುಚ್ಚಿದ್ದ ಆಹಾರವನ್ನು ಕೊಡುವದು, ಪರವ್ಯಪದೇಶ - ತಾನು ಕೊಡುವಂಥಾವನಾದಾಗ್ಯು ಅನ್ಯತ್ರ ಕೊಡುವರು ಯಿಧಾರೆ ಇದು ಮತ್ತೊಬ್ಬನಿಗೆ ಎಂದಿಡುವದು, ಮಾತ್ಸರ್ಯ - ಇನ್ನೊಬ್ಬ ದಾನ ಕೊಟ್ಟದ್ದಕ್ಕೆ ಸೈರಿಸದೇ ಯಿರುವದು ಮತ್ತು ಪ್ರೀತಿಯಿಲ್ಲದೇ ಕೊಡುವದು, ಕಾಲಾತಿಕ್ರಮಾಃ - ಋಷಿಗಳು ಬರಪೇಯಿರುವ ಕಾಲದಲ್ಲಿ ನೋಡಿ ತಾನು ಆಹಾರ ಮಾಡುವದು. ಈ ೫ ಅತಿಥಿಸಂವಿಭಾಗ ವ್ರತದ ಅತೀಚಾರಗಳು ||

ತಾ || ೧ ಪ್ರಾಣಿಗಳುಳ್ಳ ಹಸಿಯೆಲೆ ಮೊದಲಾದ ಪದಾರ್ಥದಲ್ಲಿ ಹಾಕುವದು. ೨ ಪ್ರಾಣಿಗಳುಳ್ಳ ಪದಾರ್ಥಗಳಿಂದ ಮುಚ್ಚುವದು.

೩ ಒಬ್ಬನ ಆಹಾರಾರ್ತ್ಥವಾಗಿ ಮಾಡಿಯಿದ್ದ ಪದಾರ್ತ್ಥವನ್ನು ಆತನಲ್ಲಿ ದಿದ್ದರೆ ಈತನಿಗಾಯಿತೆಂದು ಕೊಡುವದು. ೪ ಅನ್ಯ ದಾತೃಗಳನ್ನು ನೋಡಿ ಮಾತ್ಸರ್ಯದಿಂದ ದಾನ ಕೊಡುವದು. ೫ ಆಹಾರ ಕಾಲವ ನ್ನು ಅತಿಕ್ರಮಿಸುವದು. ಈ ೫ ಅತಿಥಿ ಸಂವಿಭಾಗವ್ರತದ ಅತೀಚಾರ ಗಳಾಗುತ್ತಿವೆ ॥ ೩೬ ॥

ಅ ॥ ಸಲ್ಲೇಖನಾ ವ್ರತದ ಅತೀಚಾರಗಳನ್ನು ಹೇಳುತ್ತಾರೆ.

ಸೂ ॥ ಜೀವಿತಮರಣಾಶಂಸಾ ಮಿತ್ರಾನುರಾಗ ಸುಖಾನು ಬಂಧ ನಿದಾನಾನಿ ॥ ೩೭ ॥

ಟೀ ॥ ಜೀವಿತಮರಣಾಶಂಸಾ ಮಿತ್ರಾನುರಾಗ ಸುಖಾನುಬಂಧನಿದಾನಾನಿ - ಜೀವಿತಮರಣಾಶಂಸಾ - ಬದಕಬೇಕೆಂದಾಗಲಿ ಸಾಯಬೇಕೆಂದಾಗಲಿ ಅಪೇಕ್ಷಿಸುವುದು, ಮಿತ್ರಾನುರಾಗ - ಸ್ನೇಹಿತರಲ್ಲಿ ಅನುರಾಗವು, ಸುಖಾನುಬಂಧ - ತಾನು ಸುಖಪಟ್ಟದ್ದನ್ನ ಪುನಹ ಸ್ಮರಿಸುವದು, ನಿದಾನಾನಿ - ಮುಂದಲ ಜನ್ಮದ ಸುಖವನ್ನು ಅಪೇಕ್ಷಿಸುವದು ಈ ೫ ಸಲ್ಲೇಖನಾ ವ್ರತದ ಅತೀಚಾರಗಳು ॥

ತಾ ॥ ೧ ಜೀವಿತಾಶಂಸೆ, ೨ ಮರಣಕಾಂಕ್ಷೆ, ೩ ಸ್ನೇಹಿತರ ಪ್ರೀತಿ, ೪ ಸುಖಸ್ಮರಣಾನುಬಂಧ, ಮೋಹ, ೫ ಪರಜನ್ಮದ ಭೋಗಕಾಂಕ್ಷೆ ಈ ಐದು ಸಲ್ಲೇಖನಾವ್ರತದ ಅತೀಚಾರಗಳು ॥ ೩೭ ॥

ಅ ॥ ದಾನ ಲಕ್ಷಣವನ್ನು ಹೇಳುತ್ತಾರೆ.

ಸೂ ॥ ಅನುಗ್ರಹಾರ್ಥಂ ಸ್ವಸ್ಯಾತಿಸರ್ಗ್ಗೋ ದಾನಂ ॥ ೩೮ ॥

ಟೀ ॥ ಅನುಗ್ರಹಾರ್ಥಂ - ತನಗೂ ಇತರನಿಗೂ ಉಪಕಾರ ಕಾರಣವಾಗಿ, ಸ್ವಸ್ಯ - ತನ್ನದ್ರವ್ಯದ, ಅತಿಸರ್ಗಃ - ಕೊಡುವದು. ದಾನಂ- ದಾನವೆಂಬುವದು ಆಗುತ್ತದೆ ॥

ತಾ ॥ ಸ್ವಪರೋಪಕಾರಾರ್ತ್ಥವಾಗಿ ದ್ರವ್ಯದ ತ್ಯಾಗವು ದಾನ ವೆಂದು ಹೇಳಲ್ಪಟ್ಟಿದೆ ॥ ೩೮ ॥

ಅ ॥ ದಾನದ ವಿಶೇಷವನ್ನು ಹೇಳುತ್ತಾರೆ.

ಸೂ ॥ ವಿಧಿದ್ರವ್ಯದಾತೃಪಾತ್ರವಿಶೇಷಾ ತ್ತದ್ವಿಶೇಷಃ ॥ ೩೯ ॥

ಟೀ ॥ ವಿಧಿದ್ರವ್ಯದಾತೃಪಾತ್ರವಿಶೇಷಾತ್ - ವಿಧಿ-ಇದಿಗೊಳ್ಳುವದು ಮೊದಲಾದಕ್ರಮಗಳನ್ನು ಪ್ರೀತಿಯಿಂದ ಮಾಡುವವಿಧಿಯು, ದ್ರವ್ಯ-ತೆಗದುಕೊಳ್ಳುವ ಪಾತ್ರದ ತಪಃಪರಿಣಾಮವೃದ್ಧಿಕಾರಣವಾದ ದ್ರವ್ಯ ವಿಶೇಷವು, ದಾತೃ-ಶ್ರದ್ಧಾದಿಗುಣಯುಕ್ತದಾತೃವು, ಪಾತ್ರ-ಮೋಕ್ಷ ಕಾರಣವಾಗಿರುವ ಗುಣಗಳೇ ಸ್ವರೂಪವಾಗಿರುವ ಪಾತ್ರವು, ಇವುಗಳ, ವಿಶೇಷಾತ್-ವಿಶೇಷದ್ವೆಶೆಯಿಂದ, ತದ್ವಿಶೇಷಃ - ಆ ದಾನದ ವಿಶೇಷವು ಆ ಗುತ್ತದೆ ॥ ೩೯ ॥

ತಾ ॥ ಈ ವಿಧಿದ್ರವ್ಯ ದಾತೃಪಾತ್ರಗಳಗೆ ಅಂದರೆ ದಾನಕೊಡುವಕ್ರಮವೇ ವಿಧಿಯು. ದಾನಕೊಡುವಪದಾರ್ಥಗಳೇ ದ್ರವ್ಯವು. ದಾನಕೊಡುವನೇದಾತೃವು. ದಾನತೆಗದುಕೊಳ್ಳುವನೇ ಪಾತ್ರವು ಇವುಗಳಿಗೆ ತಂಮ ತಮ್ಮ ಕಾರಣ ವಿಶೇಷಗಳಿಂದ ಆ ದಾನಕ್ಕೆ ವಿಶೇಷವಾದ ಫಲಗಳಾಗುತ್ತವೆ ॥ ೩೯ ॥

ಇತಿ ತತ್ವಾರ್ಥಾಧಿಗಮೇ ಮೋಕ್ಷಶಾಸ್ತ್ರೇ ಸಪ್ತಮೋಧ್ಯಾಯಃ.



## ಅಷ್ಟಮೋಧ್ಯಾಯ ಪ್ರಾರಂಭಃ.

### ಬಂಧಹೇತ್ವಧಿಕರಣಂ.

ಆ ॥ ಬಂಧಸ್ವರೂಪವನ್ನು ಹೇಳುತ್ತಾರೆ.

ಸೂ ॥ ಮಿಥ್ಯಾದರ್ಶನಾವಿರತಿಪ್ರಮಾದಕಷಾಯಯೋಗಾ ಬಂಧಹೇತವಃ ॥ ೧ ॥

ಟೀ ॥ ಮಿಥ್ಯಾದರ್ಶನಾವಿರತಿ ಪ್ರಮಾದಕಷಾಯಯೋಗಾಃ-ಮಿಥ್ಯಾದರ್ಶನ-ಐದು ಪ್ರಕಾರಮಿಥ್ಯಾತ್ವವು, ಅವಿರತಿ-ಹನ್ನೆರಡುಪ್ರಕಾರ ಅವ್ರತವು. ಪ್ರಮಾದ- ಹದಿನೈದು ಪ್ರಮಾದಗಳು, ಕಷಾಯ-ಇಪ್ಪತ್ತೈದು ಕಷಾಯಗಳು, ಯೋಗಾಃ-ಹದಿನೈದುಯೋಗಗಳು ಇವುಗಳು, ಬಂಧಹೇತವಃ-ಬಂಧ-ಕರ್ಮಬಂಧಗಳಿಗೆ, ಹೇತವಃ-ಕಾರಣಗಳು ಆಗುತ್ತವೆ ॥

ತಾ॥ ತತ್ವವಲ್ಲದನ್ನ ತತ್ವವೆಂದು ನಂಬುವದಕ್ಕೆ ಮಿಥ್ಯಾತ್ವವೆಂದುಹೆಸರು. ಅಥವಾ ಮಿಥ್ಯಾದರ್ಶನವೆಂತಲೂ ಹೇಳಬಹುದು, ೧ ಏಕಾಂತ, ೨ ವಿಪರೀತ, ೩ ಸಂಶಯ, ೪ ವಿನಯ, ೫ ಅಜ್ಞಾನವೆಂದು ಮಿಥ್ಯಾತ್ವವು ೫ ಪ್ರಕಾರವು ಆಗುತ್ತಿದೆ ॥ (೧) ವಸ್ತುಗಳಲ್ಲಿ ಅಥವಾ ಪದಾರ್ಥಗಳಲ್ಲಿ ಅನೇಕಧರ್ಮವಿರುತ್ತದೆ. ಅಂಥಾವುಗಳನ್ನ ಗೌಣವಾಗಿ ಒಂದೇ ಧರ್ಮವೆಂದು ಒಡಂಬಟ್ಟು ಕೇವಲ ಅದರಲ್ಲೇ ಶ್ರದ್ಧಾಮಾಡುವದು ಏಕಾಂತ ಮಿಥ್ಯಾತ್ವವು ಅಥವಾ ನಿತ್ಯವೇಸರಿ ಅನಿತ್ಯವೇಸರಿ ಇಂತೆಂದು ಧರ್ಮಾಧರ್ಮಗಳಿಗೆ ಆಗ್ರಹವು ಏಕಾಂತಮಿಥ್ಯಾತ್ವವು ಆಗುತ್ತದೆ ॥ (೨) ಪರಿಗ್ರಹವುಳ್ಳವರನ್ನು ನಿರ್ಗ್ರಂಥರೆಂದು ಭಾವಿಸುವದು, ಕೇವಲಿಗಳು ಆಹಾರ ತೆಗೆದುಕೊಳ್ಳುವರೆಂಬುವದು ಸ್ತ್ರೀಯರು ತಿರ್ಯಂಚರು ಇವರಿಗೆ ತದ್ಭವಮೋಕ್ಷ ಹೇಳುವದು ಮಿದೇವೊಪಲಾದದ್ದು ವಿಪರೀತ ಮಿಥ್ಯಾತ್ವವು ॥ (೩) ಸಮ್ಯಗ್ದರ್ಶನ ಜ್ಞಾನಚಾರಿತ್ರಗಳು ಮೋಕ್ಷಮಾರ್ಗಗಳು ಹೌದೋ ಅಲ್ಲವೋ ಎಂದು ಸಂದೇಹಪಡುವದು ಸಂಶಯಮಿಥ್ಯಾತ್ವವು ॥ (೪) ಎಲ್ಲಾ ಮತಧರ್ಮಗಳು, ದೇವರುಗಳುಸಹ ಸಮಾನರೆಂಬುವದು ಅದರಂತೆ ನಂಬುವದು ಸಹ ವಿನಯಮಿಥ್ಯಾತ್ವವು ॥ (೫) ಹಿತಾಹಿತವನ್ನು ಪರೀಕ್ಷೆಮಾಡದೆ ನಂಬುವದು ಅಜ್ಞಾನ ಮಿಥ್ಯಾತ್ವವು ॥ ಷಡ್ಜೀವನಿಕಾಯ ಷಡಿಂದ್ರಿಯ ಇವುಗಳಸಂಯಮವಿಲ್ಲದೇಯಿರುವದೇಯೇ ಹನ್ನೆರಡುಪ್ರಕಾರ ,, ಅವಿರತಿ ,, ಯೆಂಬುವದು ಆಗುತ್ತದೆ ॥ ೧ ಪೃಥುವೀಕಾಯಕ, ೨ ಅಪ್ಪುಕಾಯಕ, ೩ ತೇಜಸ್ಕಾಯಕ, ೪ ವಾತಕಾಯಕ, ೫ ವನಸ್ಪತಿಕಾಯಕ, ೬ ತ್ರಸಕಾಯಕ, ೭ ಸ್ಪರ್ಶನೇಂದ್ರಿಯ, ೮ ರಸನೇಂದ್ರಿಯ, ೯ ಘ್ರಾಣೇಂದ್ರಿಯ, ೧೦ ಚಕ್ಷುರಿಂದ್ರಿಯ. ೧೧ ಶ್ರೋತ್ರೇಂದ್ರಿಯ, ೧೨ ಮನೋಇಂದ್ರಿಯ ಈ ೧೨ ಅವಿರತಿಗಳು ॥ ಆರುವಿಧಜೀವನಿಕಾಯಗಳಲ್ಲಿ ಹಿಂಸಾನಿವೃತ್ತಿಮಾಡದೇಇರುವದು ಷಡ್ಜೀವನಿಕಾಯಾವಿರತಿಯು ॥ ಆರು ಇಂದ್ರಿಯಗಳು ತಮ್ಮತಮ್ಮ ವಸ್ತುಗಳಿಂದ ನಿವೃತ್ತಿಸಿ ಧ್ಯಾನಾಧ್ಯಯನಗಳಲ್ಲಿ ನಿಲ್ಲಿಸದೇಯಿರುವದು ಷಡಿಂದ್ರಿಯಾವಿರತಿಯು ॥ ಅಂತುಅವಿರತಿ ೧೨ ಪ್ರಕಾರಆಗುತ್ತಿದೆ ॥ ೧ ರಾಜಕಥೆ, ೨ ಸ್ತ್ರೀಕಥೆ, ೩ ಚೋರಕಥೆ,

೪ ಭುಕ್ತಿ ಕಥೆ. (ಇವು ೪ ವಿಕಥೆಗಳು) ೫ ಕ್ರೋಧ. ೬ ಮಾನ. ೭ ಮಾಯಾ. ೮ ಲೋಭ. (ಇವು ನಾಲ್ಕು ಕಷಾಯಗಳು) ೯ ಸ್ಪರ್ಶನ. ೧೦ ರಸನ. ೧೧ ಘ್ರಾಣ. ೧೨ ಚಕ್ಷು. ೧೩ ಶ್ರೋತ್ರ (ಇವು ೫ ಇಂದ್ರಿಯಗಳು) ೧೪ ಸ್ನೇಹ. ೧೫ ನಿದ್ರೆ ಈ ೧೫ ಪ್ರಮಾದಗಳು ‖ ಅನಂತಾನುಬಂಧಿ, ಅಪ್ರತ್ಯಾಖ್ಯಾನ - ಪ್ರತ್ಯಾಖ್ಯಾನ-ಸಂಜ್ವಲನಗಳು ಪ್ರತ್ಯೇಕವಾಗಿಕ್ರೋಧಮಾನಮಾಯಾಲೋಭಗಳೆಂತೆಂದುನಾಲ್ಕು ನಾಲ್ಕುಗಳಾಗಿ ವಿಭಾಗಿಸಿದರೆ ಹದಿನಾರುವಿಧ ಕಷಾಯಗಳು ಆಗುತ್ತವೆ. ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸಾ, ಸ್ತ್ರೀವೇದ, ಪುಂವೇದ, ನಪುಂಸಕವೇದಗಳೆಂಬ ನೋಕಷಾಯಗಳು ಒಂಭತ್ತು ಪ್ರಕಾರವು. ಒಟ್ಟು ೨೫ ಕಷಾಯಗಳು ‖ ೧ ಸತ್ಯಮನ. ೨ ಅಸತ್ಯಮನ. ೩ ಉಭಯಮನ. ೪ ಅನುಭಯಮನ (ಇಂತೆಂದು ಮನಸ್ಸು ನಾಲ್ಕು) ೫ ಸತ್ಯವಚನ. ೬ ಅಸತ್ಯ ವಚನ. ೭ ಉಭಯ ವಚನ. ೮ ಅನುಭಯ ವಚನ (ಇಂತೆಂದು ವಚನ ೪ ಪ್ರಕಾರ) ೯ ಔದಾರಿಕ. ೧೦ ಔದಾರಿಕಮಿಶ್ರ ೧೧ ವೈಕ್ರಿಯಕ. ೧೨ ವೈಕ್ರಿಯಕ ಮಿಶ್ರ. ೧೩ ಆಹಾರಕ. ೧೪ ಆಹಾರಕ ಮಿಶ್ರ. ೧೫ ಕಾರ್ಮಣ ಕಾಯಯೋಗ ವಿಂತೆಂದು ಯೋಗ ಹದಿನೈದು ಪ್ರಕಾರವು ‖ ಮಿಥ್ಯಾತ್ವ, ಅವಿರತ, ಪ್ರಮಾದ, ಕಷಾಯ, ಯೋಗ, ಈ ೫ ಮಿಥ್ಯಾದೃಷ್ಟಿಯಾದ ೧ನೇ ಗುಣಸ್ಥಾನದವನಿಗೆ ಬಂಧಹೇತುಗಳಾಗುತ್ತವೆ ‖ ಸಾಸಾದನ ಸಮ್ಯಗ್ದೃಷ್ಟಿ, ಸಮ್ಯಗ್ಮಿಥ್ಯಾದೃಷ್ಟಿ, ಅವಿರತ ಸಮ್ಯಗ್ದೃಷ್ಟಿ, ಈ ೩ ಗುಣಸ್ಥಾನದವರಿಗೂ ಮಿಥ್ಯಾತ್ವ ವೊಂದನ್ನುಬಿಟ್ಟು ಉಳಿದ ನಾಲ್ಕೂ ಬಂಧಹೇತುಗಳಾಗುತ್ತವೆ ‖ ದೇಶಸಂಯತನಿಗೆ ವಿರತಿ, ಅವಿರತಿ, ಮಿಶ್ರ, ಪ್ರಮಾದ, ಕಷಾಯ, ಯೋಗ ಇವುಗಳು ಬಂಧ ಹೇತುಗಳಾಗುತ್ತವೆ ‖ ಪ್ರಮತ್ತ ಸಂಯತನಿಗೆ ಪ್ರಮಾದ, ಕಷಾಯ, ಯೋಗ, ಇವುಗಳು ಬಂಧ ಹೇತುಗಳಾಗುತ್ತವೆ ‖ ಅಪ್ರಮತ್ತಾದಿ ನಾಲ್ಕು ಗುಣಸ್ಥಾನದವರಿಗೆ ಕಷಾಯ, ಯೋಗ, ಈ ೨ ಬಂಧ ಹೇತುಗಳಾಗುತ್ತವೆ ‖ ಉಪಶಾಂತ ಕಷಾಯ, ಕ್ಷೀಣ ಕಷಾಯ, ಸಯೋಗಿ ಕೇವಲಿ, ಈ ೩ ಗುಣಸ್ಥಾನದವರಿಗೂ ಯೋಗ ಮಾತ್ರವೇ ಬಂಧಹೇತುವು ‖ ಅಯೋಗಿ ಗುಣಸ್ಥಾನದವರಿಗೆ ಬಂಧವಿಲ್ಲವು.

ಅ || ಬಂಧಸ್ವರೂಪವನ್ನು ಹೇಳುತ್ತಾರೆ.

ಸೂ || ಸಕಷಾಯತ್ವಾಜ್ಜೀವಃ ಕರ್ಮಣೋಯೋಗ್ಯಾನ್ಪುದ್ಗ
ಲಾನಾದತ್ತೇ ಸ ಬಂಧಃ || ೨ ||

ಟೀ || ಕರ್ಮಣಃ - ಕರ್ಮನಿಮಿತ್ತದಿಂದ, ಜೀವಃ - ಸಂಸಾರಿ ಜೀವವು, ಸಕಷಾಯತ್ವಾತ್ - ಕಷಾಯದಲ್ಲಿ ಕೂಡಿದಂಥಾವನಾದ್ದರ ದೆಶೆಯಿಂದ, ಕರ್ಮಣಃ - ಜ್ಞಾನಾವರಣಾದಿ ಕರ್ಮಕ್ಕೆ, ಯೋಗ್ಯಾನ್ - ಉಚಿತಗಳಾದಂಥಾ, ಪುದ್ಗಲಾನ್ - ಕಾರ್ಮಣ ವರ್ಗಣೆಯ ಪುದ್ಗಲಗಳೆನ್ನು, ಆದತ್ತೆ - ಸ್ವೀಕರಿಸುತ್ತಿಥಾನೆ ( ಎಂಬುವದು ಯಾವದುಂಟೋ ) ಸಃ - ಅದೇಯೇ, ಬಂಧಃ - ಬಂಧ ವೆಂಬುವದಾಗುತ್ತಿಥೆ ||

ತಾ || ಶರೀರ ಕರ್ಮೋದಯದಿಂದ ಕೂಡಿದ ಜೀವನು ಕರ್ಮ ನೋಕರ್ಮ ವರ್ಗಣೆಯನ್ನು ಸಮಯಂ ಪ್ರತಿ ಎಲ್ಲಾ ಅವಯವಗಳಿಂದ ಲೂ ಕಾದ ಕಬ್ಬಿಣ ನೀರನ್ನು ಕುಡಿಯುವಂತೆ ತೆಗದುಕೊಳ್ಳುತ್ತದೆ. ಇದಕ್ಕೆ ಬಂಧವೆಂದು ಹೆಸರು || ೨ ||

ಅ || ಬಂಧ ಭೇದಗಳನ್ನು ಹೇಳುತ್ತಾರೆ.

ಸೂ || ಪ್ರಕೃತಿಸ್ಥಿತ್ಯನುಭಾಗ ಪ್ರದೇಶಾಸ್ತ ದ್ವಿಧಯಃ || ೩ ||

ಟೀ || ಪ್ರಕೃತಿಸ್ಥಿತ್ಯನುಭಾಗ ಪ್ರದೇಶಾಃ - ಪ್ರಕೃತಿ - ಜ್ಞಾನಪ್ರಚ್ಛಾದನಾದಿ ಸ್ವಭಾವದಿಂದ ಕಾರ್ಮಣ ವರ್ಗಣಾ ಪುದ್ಗಲಗಳ ಪರಿಣಮನ ರೂಪವಾದಂಥಾ ಪ್ರಕೃತಿಯು, ಸ್ಥಿತಿ - ಸ್ವಭಾವವನ್ನು ಬಿಡದೇಯಿರುವ ಸ್ಥಿತಿಯು, ಅನುಭಾಗ - ಅಜ್ಞಾನಾದಿ ಜನನ ಶಕ್ತಿ ವಿಶೇಷ ರೂಪವಾದ ಅನುಭಾಗವು, ಪ್ರದೇಶಾಃ - ಜೀವಪ್ರದೇಶಗಳ ಪರಸ್ಪರಾಧೀನವಾದ ಪ್ರದೇಶವು, ಇವುಗಳು, ತದ್ವಿಧಯಃ ಆಬಂಧದ ಭೇದಗಳು ||

ತಾ || ಪ್ರಕೃತಿ ಎಂಬುವದು ಸ್ವಭಾವವು || ಹ್ಯಾಗೆಂದರೆ ಬೇವಿನಕಾಯಿಗೆ ಕಹಿ ಸ್ವಭಾವವು, ಬೆಲ್ಲಕ್ಕೆ ಮಧುರ ಸ್ವಭಾವವು, ಹ್ಯಾಗೋ ಹಾಗೆ - ಜ್ಞಾನಾವರಣಾದಿಗಳ ೮ ಪ್ರಕಾರವಾದ ಸ್ವಭಾವವನ್ನು ಪಡೆಯುವದೇ ಪ್ರಕೃತಿ ಬಂಧವು || ಜ್ಞಾನಾವರಣಾದಿಗಳು ಆತ್ಮ ಪ್ರದೇಶದಲ್ಲಿ ಬಂಧವಾಗಿ ಎಷ್ಟುಕಾಲ ಪರ್ಯಂತರ ತನ್ನ ಸ್ವಭಾವವನ್ನು ಬಿಡದೇ ಇರುದು ಯಾವದೊ ಅದೇಯೇ ಸ್ಥಿತಿಬಂಧವು || ಹಸು, ಎಮ್ಮೆ, ಆಡು, ಇವುಗಳ

ಹಾಲಿನಲ್ಲಿ ಹ್ಯಾಗೆರಸದ ವ್ಯತ್ಯಾಸ ವಿಶೇಷವೋ ಹಾಗೆ ಕರ್ಮದಲ್ಲಿ ತೀವ್ರ, ಮಂದ, ಮಧ್ಯಮರೂಪ ಫಲ ಕೊಡುವಶಕ್ತಿ ಯಾಗುವದಕ್ಕೆ ಅನುಭಾಗ ಬಂಧ ಅಥವಾ ಅನುಭವಬಂಧ ಎಂದು ಹೆಸರು॥ ಜ್ಞಾನಾವರಣಾದಿ ಕರ್ಮ ಸ್ವಭಾವವಾಗಿ ಪರಿಣತವಾದಂಥಾ ಪುದ್ಗಲ ಸ್ಕಂಧಗಳ ಪರಮಾಣು ಪರಿಚ್ಛೇದದಿಂದ ಆತ್ಮಪ್ರದೇಶದಲ್ಲಿ ಹೊಂದಿ ಯಿರುವದು ಅಂದರೆ ವಂದು ಕ್ಷೇತ್ರಾವಗಾಹರೂಪ ಸಂಬಂಧವಾಗುವದು ಪ್ರದೇಶ ಬಂಧವು॥ ಈ ೪ ಬಂಧಭೇದಗಳು॥

ಪ್ರ ಕೃ ತ್ಯ ಧಿ ಕ ರ ಣಂ.

ಅ॥ ಪ್ರಕೃತಿ ಬಂಧದ ಎಂಟು ಭೇದಗಳನ್ನು ಹೇಳುತ್ತಾರೆ.

ಸೂ॥ ಆದ್ಯೋಜ್ಞಾನ ದರ್ಶನಾವರಣ ವೇದನೀಯ ಮೋಹನೀಯಾಯು ರ್ನಾಮಗೋತ್ರಾಂತರಾಯಾಃ॥ ೪॥

ಟೀ॥ ಜ್ಞಾನದರ್ಶನಾವರಣ ವೇದನೀಯ ಮೋಹನೀಯಾಯು ರ್ನಾಮಗೋತ್ರಾಂತರಾಯಾಃ - ಜ್ಞಾನ - ಪಟದಂತೆ ಬಾಹ್ಯಾರ್ಥಗಳೆನ್ನು ತಿಳಿಯುವದಕ್ಕೆ ಬಿಡದ ಜ್ಞಾನಾವರಣೀಯವು, ದರ್ಶನಾವರಣ- ಪ್ರತಿಹಾರಿಯಂತೆ ಯಾರನ್ನು ಕಾಣುವದಕ್ಕೆ ಬಿಡದ ದರ್ಶನಾವರಣೀಯವು, ವೇದನೀಯ - ಜೇನುತುಪ್ಪ ಸವರಿದ ಕತ್ತಿಯಧಾರೆ ಎಂತೆ ಸುಖದುಃಖಗಳೆನ್ನು ಮಾಡುವ ವೇದನೀಯವು, ಮೋಹನೀಯ - ಹೆಂಡದಂತೆ ಮೋಹವನ್ನು ಉಂಟುಮಾಡುವ ಮೋಹನೀಯವು, ಆಯುಃ - ಅಂಗೀಕರಿಸಿದ ಭವವನ್ನು ಕೊಳದಂತೆ ಹಿಡಿದಿರುವ ಆಯುಷ್ಯವು, ನಾಮ - ಚಿತ್ರಕಾರನಂತೆ ವರ್ಣಸ್ಥಾನ ಮೊದಲಾದ ಭೇದವನ್ನು ನಾನಾ ಪ್ರಕಾರವಾಗಿ ಮಾಡುವ ನಾಮವು, ಗೋತ್ರ - ಕುಂಬಾರನಂತೆ ಉತ್ತಮಕುಲ ನೀಚಕುಲವನ್ನು ಪಡೆಯಿಸುವ ಗೋತ್ರವು, ಅಂತರಾಯ- ಭಂಡಾರಿಕನಹಾಗೆ ದಾನಾದಿಗಳಿಗೆ ವಿಘ್ನವನ್ನು ಮಾಡುವ ಅಂತರಾಯವು ಇವುಗಳು, ಆದ್ಯಃ - ಮೊದಲನೇದಾದ ಪ್ರಕೃತಿ ಬಂಧವು ಆಗುತ್ತದೆ॥

ತಾ॥ ಆವರಣ ವೆಂದರೆ ಮರಸುವದು ಎಂದು ಅರ್ಥವು॥ ೧ ಮತಿ ಜ್ಞಾನಾದಿಗಳನ್ನು ಮರೆಸುವದು ಜ್ಞಾನಾವರಣೀಯ ಕರ್ಮವೆಂಬುವದು. ೨ ಕಣ್ಣಿನಿಂದ ನೋಡುವದು ಮೊದಲಾದ ದರ್ಶನಗಳನ್ನು

ಮರೆಸುವದು ದರ್ಶನಾವರಣೀಯ ಕರ್ಮವೆಂಬುವದು. ೩ ಸುಖದುಃ ಖಗಳನ್ನು ಅನುಭವಮಾಡಿಸುವದು ವೇದನೀಯ ಕರ್ಮವೆಂಬುವದು ೪ ದರ್ಶನ ಚಾರಿತ್ರಗಳನ್ನು ವಿಪರೀತವಾಗಿ ಮಾಡುವದು ಮೋಹನೀಯಕರ್ಮವೆಂಬುವದು ॥ ೫ ನರನಾರಕಾದಿ ಭವಗಳನ್ನು ಹೊಂದಿರುವದು ಆಯುಃಕರ್ಮವೆಂಬುವದು ॥ ೬ ನಾನಾಯೋನಿಗಳಲ್ಲಿ ನಾರಕಾದಿ ಪರ್ಯಾಯಗಳಿಂದ ಆತ್ಮನನ್ನು ಹೇಳಿಸುವಂಥಾದ್ದು ನಾಮಕರ್ಮವೆಂಬುವದು॥ ೭ ಉಚ್ಚಸ್ಥಾನ(ಉತ್ತಮಕುಲ)ನೀಚಸ್ಥಾನ(ನೀಚಕುಲ) ವೆಂದು ಹೇಳಿಸುವದು ಗೋತ್ರಕರ್ಮವೆಂಬುವದು ॥ ೮ ಕೊಡುವಂಥಾವರು, ಕೊಡತಕ್ಕಪಥಾರ್ಥಗಳು, ತೆಗದುಕೊಳ್ಳುವಂಥಾಪಾತ್ರವು ಇವುಗಳಿಗೆ ವಿಘ್ನವನ್ನು ಪಡೆಯಿಸುವದು ಅಂತರಾಯಕರ್ಮವೆಂಬುವದು ॥ ಯೇಕಕಾಲದಲ್ಲಿ ಭೋಜನಮಾಡಿದಂಥಾ ಅಂನಾದಿಗಳಿಗೆ ಅನೇಕವಿಕಾರಸಾಮರ್ಥ್ಯವಾದಂಥಾ - ವಾತ - ಪಿತ್ತ - ಶ್ಲೇಷ್ಮ - ರಸ- ರುಧಿರ-ಮಾಂಸ ಮೊದಲಾದ ಸ್ವರೂಪದಿಂದ ಪರಿಣಾಮವಿಭಾಗವು ಹ್ಯಾಗೆ ಉಂಟಾಗುತ್ತಾ ಇಧೆಯೋ ಹಾಗೆ ಬಂದುಆತ್ಮಪರಿಣಾಮದಿಂದ ಗ್ರಹಿಸಲ್ಪಟ್ಟಂಥಾ ಪುದ್ಗಲಗಳು ಜ್ಞಾನಾವರಣಮೊದಲಾದ ಅನೇಕ ಭೇದಗಳನ್ನು ಪಡೆಯುತ್ತವೆ ॥ ಈ ೮ ಕರ್ಮಗಳಿಗೂ ಮೂಲಪ್ರಕೃತಿಗಳೆಂದು ಹೆಸರುಂಟು ॥ ಜ್ಞಾನಾವರಣ, ದರ್ಶನಾವರಣ, ಮೋಹನೀಯ, ಅಂತರಾಯ, ಈ ೪ ಕರ್ಮಗಳಿಗೆ ಘಾತಿಕರ್ಮಗಳೆಂತಲೂ, ಉಳಿದ ೪ ಕರ್ಮಗಳಿಗೆ ಅಘಾತಿಕರ್ಮಗಳೆಂತಲೂ ಹೆಸರು ॥ ೪ ॥

ಅ ॥ ಉತ್ತರಪ್ರಕೃತಿಬಂಧ ಭೇದಗಳನ್ನು ಹೇಳುತ್ತಾರೆ.

ಸೂ ॥ ಪಂಚನವದ್ವ್ಯಷ್ಟಾವಿಂಶತಿ ಚತುರ್ದ್ವಿಚತ್ವಾರಿಂ ಶದ್ದ್ವಿಪಂಚಭೇದಾ ಯಥಾಕ್ರಮಂ ॥ ೫ ॥

ಟೀ ॥ ಪಂಚನವದ್ವ್ಯಷ್ಟಾವಿಂಶತಿ ಚತುರ್ದ್ವಿಚತ್ವಾರಿಂಶದ್ದ್ವಿಪಂಚಭೇದಾಃ - ಪಂಚ-ಐದು, ನವ-ಒಂಭತ್ತು, ದ್ವಿ-ಎರಡು, ಅಷ್ಟಾವಿಂಶತಿ-ಇಪ್ಪತ್ತೆಂಟು, ಚತುಃ-ನಾಲ್ಕು, ದ್ವಿಚತ್ವಾರಿಂಶತ್ - ನಾಲ್ವತ್ತೆರಡು, ದ್ವಿ-ಎರಡು, ಪಂಚ-ಐದು, ಭೇದಾಃ-ಭೇದಗಳು, ಯಥಾಕ್ರಮಂ ಕ್ರಮವನ್ನು ಅತಿಕ್ರಮಿಸದೆ ( ಜ್ಞಾನಾವರಣಾದಿಕರ್ಮಗಳ ಭೇದ ಸಂಖ್ಯೆಗಳು ) ಆಗುತ್ತವೆ ॥

ತಾ ॥ ಜ್ಞಾನಾವರಣೀಯಕರ್ಮವು ೫ ಭೇದವು॥ ದರ್ಶನಾವರಣೀಯಕರ್ಮವು ಒಂಭತ್ತು ಭೇದವು ॥ ವೇದನೀಯಕರ್ಮವು ಎರಡು ಭೇದವು ॥ ಮೋಹನೀಯಕರ್ಮವು ಇಪ್ಪತ್ತೆಂಟುಭೇದವು || ಆಯುಃ ಕರ್ಮವು ೪ ಭೇದವು || ನಾಮಕರ್ಮವು ನಾಲ್ವತ್ತೆರಡು ಭೇದವು || ಗೋತ್ರಕರ್ಮವು ಎರಡುಭೇದವು || ಅಂತರಾಯಕರ್ಮವು ಐದುಭೇದವು || ಈ ಪ್ರಕಾರವಾಗಿ ಉತ್ತರಪ್ರಕೃತಿಯ ಭೇದಗಳುಹೇಳಲ್ಪಟ್ಟವೆ||

ಅ || ಜ್ಞಾನಾವರಣೀಯ ಕರ್ಮದ ಐದು ಭೇದಗಳನ್ನು ಹೇಳುತ್ತಾರೆ,

ಸೂ || ಮತಿಶ್ರುತಾವಧಿಮನಃಪರ್ಯಯಕೇವಲಾನಾಂ || ೬ ||

ಟೀ || ಮತಿಶ್ರುತಾವಧಿಮನಃಪರ್ಯಯಕೇವಲಾನಾಂ - ಮತಿ-ಮತಿಜ್ಞಾನವು, ಶ್ರುತ-ಶ್ರುತಜ್ಞಾನವು, ಅವಧಿ-ಅವಧಿಜ್ಞಾನವು, ಮನಃಪರ್ಯಯ-ಮನಃಪರ್ಯಯಜ್ಞಾನವು, ಕೇವಲಾನಾಂ- ಕೇವಲಜ್ಞಾನವು ಇವುಗಳಿಗೆ ಇರುವ ಆವರಣದಿಂದ ಜ್ಞಾನಾವರಣೀಯವು ಐದುವಿಧವು||

ತಾ || ಜ್ಞಾನಾವರಣೀಯಕರ್ಮವು ಐದು ಪ್ರಕಾರವಾಗಿಧೆ || ಆವರಣವೆಂದರೆ ಪರದಾವಗೈರೆಯಿಂದ ಮರೆಮಾಡುವದು ಅಥವಾ ಮುಚ್ಚುವದು ಎಂದು ಅರ್ಥವು || ಇಲ್ಲಿ ಆತ್ಮನ ಜ್ಞಾನಶಕ್ತಿಯನ್ನು ಜ್ಞಾನಾವರಣೀಯಕರ್ಮವೆಂಬ ಪರದೆಯಿಂದ ಮುಚ್ಚಿರುವದ್ದರಿಂದ ಜ್ಞಾನ ಸಾಮರ್ಥ್ಯಪ್ರಕಟವಾಗದೇಯಿದೆ. ಆದರೆ ಜ್ಞಾನಾವರಣೀಯಕರ್ಮದ ಸ್ವಲ್ಪವಾದ ಕ್ಷಯಉಪಶಮದಿಂದ ಅಲ್ಪಸ್ವಲ್ಪಜ್ಞಾನವು ಎಲ್ಲಾಜೀವಗಳಲ್ಲೂ ಇರುತ್ತದೆ || ೧ ಮತಿಜ್ಞಾನಾವರಣಕರ್ಮವು ಮತಿಜ್ಞಾನವನ್ನು ಮರೆಮಾಡುತ್ತದೆ || ೨ ಶ್ರುತಜ್ಞಾನಾವರಣ ಕರ್ಮವು ಶ್ರುತಜ್ಞಾನವನ್ನು ಮರೆಮಾಡುತ್ತದೆ || ೩ ಅವಧಿಜ್ಞಾನಾವರಣ ಕರ್ಮವು ಅವಧಿಜ್ಞಾನವನ್ನು ಮರೆಮಾಡುತ್ತದೆ || ೪ ಮನಃಪರ್ಯಯ ಜ್ಞಾನಾವರಣ ಕರ್ಮವು ಮನಃಪರ್ಯಯ ಜ್ಞಾನವನ್ನು ಮರೆಮಾಡುತ್ತದೆ || ೫ ಕೇವಲಜ್ಞಾನಾವರಣ ಕರ್ಮವು ಕೇವಲಜ್ಞಾನವನ್ನು ಮರೆಮಾಡುತ್ತದೆ || ೬ ||

ಅ || ದರ್ಶನಾವರಣ ಕರ್ಮದ ಒಂಭತ್ತು ಭೇದಗಳನ್ನು ಹೇಳುತ್ತಾರೆ.

ಸೂ ॥ ಚಕ್ಷುರಚಕ್ಷುರವಧಿಕೇವಲಾನಾಂ ನಿದ್ರಾನಿದ್ರಾ
ನಿದ್ರಾ ಪ್ರಚಲಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಯಶ್ಚ ॥

ಟೀ ॥ ಚಕ್ಷುರಚಕ್ಷುರವಧಿಕೇವಲಾನಾಂ – ಚಕ್ಷುಃ-ಚಕ್ಷುರ್ದರ್ಶನವು, ಅಚಕ್ಷುಃ-ಅಚಕ್ಷುರ್ದರ್ಶನವು, ಅವಧಿ-ಅವಧಿದರ್ಶನವು, ಕೇವಲಾನಾಂ-ಕೇವಲದರ್ಶನವು ಇವುಗಳಿಗೆ (ಆವರಣವು), ನಿದ್ರಾನಿದ್ರಾ ನಿದ್ರಾ ಪ್ರಚಲಾಪ್ರಚಲಾಪ್ರಚಲಾ ಸ್ತ್ಯಾನಗೃದ್ಧಯಶ್ಚ – ನಿದ್ರಾ- ನಿದ್ರೆಯು, ನಿದ್ರಾನಿದ್ರಾ -ನಿದ್ರಾನಿದ್ರೆಯು, ಪ್ರಚಲಾ - ಪ್ರಚಲೆಯು, ಪ್ರಚಲಾಪ್ರಚಲಾ-ಪ್ರಚಲಾಪ್ರಚಲೆಯು,ಸ್ತ್ಯಾನಗೃದ್ಧಯಶ್ಚ-ಸ್ತ್ಯಾನಗೃದ್ಧೀಯೂಕೂಡ, ಈ ೯ ದರ್ಶನಾವರಣ ಕರ್ಮಭೇದಗಳು ॥

ತಾ ॥ ಆತ್ಮನು ಯಾವಕರ್ಮೋದಯದಿಂದ ಏಕೇಂದ್ರಿಯ, ವಿಕಲೇಂದ್ರಿಯ, ನೇತ್ರೇಂದ್ರಿಯ ರಹಿತನೂ ವಂದುವೇಳೆ ನೇತ್ರವಿದ್ದರೂ ಕುರುಡನಾಗುವದು ಆಗುತ್ತಾನೋ ಅಂಥಾ ಕರ್ಮಕ್ಕೆ ೧ ಚಕ್ಷುರ್ದರ್ಶನಾವರಣೀಯವೆಂದು ಹೆಸರು ॥ ಯಾವಕರ್ಮದಿಂದ ನೇತ್ರೇಂದ್ರಿಯವಲ್ಲದ ಇತರ ಇಂದ್ರಿಯದಿಂದ ತಿಳುವಳಿಕೆ ಉಂಟಾಗುವದಿಲ್ಲವೋ ಅದಕ್ಕೆ ೨ ಅಚಕ್ಷುರ್ದರ್ಶನಾವರಣೀಯವೆಂದುಹೆಸರು ॥ ಅವಧಿದರ್ಶನ ಯಾವಕರ್ಮದಿಂದ ಉಂಟಾಗುವದಿಲ್ಲವೋ ಅದಕ್ಕೆ ೩ ಅವಧಿದರ್ಶನಾವರಣೀಯವೆಂದು ಹೆಸರು ॥ ಯಾವಕರ್ಮದಿಂದ ಕೇವಲದರ್ಶನ ಉಂಟಾಗುವದಿಲ್ಲವೋ ಆ ಕರ್ಮಕ್ಕೆ ೪ ಕೇವಲದರ್ಶನಾವರಣೀಯಕರ್ಮವೆಂದುಹೆಸರು ॥ ಬಳಲಿಕೆ ಮೊದಲಾದ್ದನ್ನು ಹೋಗಲಾಡಿಸುವದಕ್ಕೆ ಬರುವ ಅಜ್ಞಾನತವೋಅವಸ್ಥೆಗೆ ೫ ನಿದ್ರಾದರ್ಶನಾವರಣೀಯವೆಂದುಹೆಸರು ॥ ನಿದ್ರೆಮೇಲೆನಿದ್ರೆ ಅಂದರೆ ಮಹಾತವೋಅವಸ್ಥೆಗೆ ೬ ನಿದ್ರಾನಿದ್ರಾದರ್ಶನಾವರಣೀಯವೆಂದು ಹೆಸರು ॥ ವ್ಯಸನಾದಿಗಳುಯಿದ್ದರು ಶರೀರವಿಕಾರದಿಂದ ಪಂಚೇಂದ್ರಿಯದಿಂದ ತಿಳಿಯದಿದ್ದರೆ ಅದು ೭ ಪ್ರಚಲಾದರ್ಶನಾವರಣೀಯವು ॥ ಲೋಳೆಸುರಿಸುತ್ತಾ ತೂಗಡಿಸಿಬೀಳುತ್ತಾ ಮಲಗಿಕ್ಕೊಳುವದು ಹೊಡೆದರೂ ಗೊತ್ತಿಲ್ಲದೇಯಿರುವದು ಇದಕ್ಕೆ ೮ ಪ್ರಚಲಾಪ್ರಚಲಾ ಎಂದು ಹೆಸರು ॥ ನಿದ್ರೆಯಲ್ಲಿ ಅನೇಕಭಯಂಕರ ವ್ಯಾಪಾರವಮಾಡುವದು ಕನಸುಕಾಣು

ವದು ಇದಕ್ಕೆ ಸ್ತ್ಯಾನಗೃದ್ಧಿದರ್ಶನಾವರಣೀಯವೆಂದು ಹೆಸರು ಈ ಪ್ರಕಾರ ದರ್ಶನಾವರಣೀಯವು ೯ ಭೇದವು ॥ ೭ ॥

ಅ ॥ ವೇದನೀಯವು ಎರಡು ಭೇದವೆಂದು ಹೇಳುತ್ತಾರೆ.

ಸೂ ॥ ಸದಸದ್ವೇದ್ಯೇ ॥ ೮ ॥

ಟೀ ॥ ಸದಸದ್ವೇದ್ಯೇ—ಸತ್-ಸಾತಾವೇದನೀಯವು, ಅಸದ್ವೇದ್ಯೇ-ಅಸಾತಾವೇದನೀಯವು ॥

ತಾ ॥ ವೇದನೀಯಕರ್ಮವು ಸಾತಾವೇದನೀಯವೆಂತಲೂ, ಅಸಾತಾವೇದನೀಯವೆಂತಲೂ ಎರಡು ಭೇದವು ॥ ಇಂದ್ರಿಯಸುಖಕ್ಕೆ ಕಾರಣವಾದ ವಸ್ತುಗಳನ್ನು ಪಡೆಯಿಸುವದು ಸಾತಾವೇದನೀಯವು ॥ ದುಃಖಕ್ಕೆ ಕಾರಣವಾದ ವಸ್ತುಗಳನ್ನು ಪಡೆಯಿಸುವದು ಅಸಾತಾವೇದನೀಯವು ॥ ೮ ॥

ಅ ॥ ಮೋಹನೀಯಕರ್ಮವು ಇಪ್ಪತ್ತೆಂಟುಭೇದವೆಂದು ಹೇಳುತ್ತಾರೆ.

ಸೂ ॥ ದರ್ಶನ ಚಾರಿತ್ರಮೋಹನೀಯಾಕಷಾಯಕಷಾಯವೇದನೀಯಾಖ್ಯಾಸ್ತ್ರಿದ್ವಿನವಷೋಡಶ ಭೇದಾಃ ಸಮ್ಯಕ್ತ್ವಮಿಥ್ಯಾತ್ವತದುಭಯಾನ್ಯಕಷಾಯ ಕಷಾಯೌ ಹಾಸ್ಯರತ್ಯರತಿ ಶೋಕಭಯಜುಗುಪ್ಸಾಸ್ತ್ರೀಪುಂನಪುಂಸಕವೇದಾಃ ಅನಂತಾನುಬಂಧ್ಯಪ್ರತ್ಯಾಖ್ಯಾನಪ್ರತ್ಯಾಖ್ಯಾನಸಂಜ್ವಲನ ವಿಕಲ್ಪಾಶ್ಚೈಕಶಃ ಕ್ರೋಧಮಾನ ಮಾಯಾಲೋಭಾಃ ॥

ಟೀ ॥ ದರ್ಶನಚಾರಿತ್ರಮೋಹನೀಯ ಕಷಾಯಾಕಷಾಯವೇದನೀಯಾಖ್ಯಾಃ - ದರ್ಶನ-ದರ್ಶನಮೋಹನೀಯವು, ಚಾರಿತ್ರಮೋಹನೀಯ- ಚಾರಿತ್ರಮೋಹನೀಯವು, ಅಕಷಾಯ- ನೋಕಷಾಯವೇದನೀಯವು, ಕಷಾಯವೇದನೀಯಾಖ್ಯಾಃ- ಕಷಾಯವೇದನೀಯವು ಇವುಗಳು, (ಕ್ರಮವಾಗಿ) ತ್ರಿದ್ವಿನವಷೋಡಶಭೇದಾಃ- ತ್ರಿ-ಮೂರು, ನವ-ಒಂಭತ್ತು, ಷೋಡಶ-ಹದಿನಾರು, ಭೇದಾಃ-ಭೇದವುಳ್ಳಂಥಾವುಗಳು. ಸಮ್ಯಕ್ತ್ವಮಿಥ್ಯಾತ್ವತದುಭಯಾನಿ- ಸಮ್ಯಕ್ತ್ವ-ಸಮ್ಯಕ್ತ್ವಪ್ರಕೃತಿಯು, ಮಿಥ್ಯಾತ್ವ-ಮಿಥ್ಯಾತ್ವಪ್ರಕೃತಿಯು, ತದುಭಯಾನಿ - ಸಮ್ಯಗ್ಮಿಥ್ಯಾತ್ವಪ್ರಕೃತಿಯು; ಇವುಗಳು ( ದರ್ಶನಮೋಹನೀಯ ಕರ್ಮದ ಭೇ

ದಗಳು ) ಅಕಷಾಯಕಷಾಯೌ - ಅಕಷಾಯ- ನೋಕಷಾಯವು, ಕಷಾಯೌ-ಕಷಾಯವು ಇವುಗಳು ( ಈ ಎರಡು ಚಾರಿತ್ರ ಮೋಹನೀಯಕರ್ಮದ ಭೇದಗಳು ) ಹಾಸ್ಯ ರತ್ಯ ರತಿ ಶೋಕ ಭಯ ಜುಗುಪ್ಸಾ ಸ್ತ್ರೀಪುಂನಪುಂಸಕವೇದಾಃ - ೧ ಹಾಸ್ಯ-ಹಾಸ್ಯವು, ೨ ರತಿ-ರತಿನೋಕಷಾಯವು, ೩ ಅರತಿ-ಅರತಿಯು, ೪ ಶೋಕ-ಶೋಕವು, ೫ ಭಯ-ಭಯವು, ೬ ಜುಗುಪ್ಸಾ-ಜುಗುಪ್ಸೆಯು, ೭ ಸ್ತ್ರೀ-ಸ್ತ್ರೀವೇದವು, ೮ ಪುಂ-ಪುಂವೇದವು, ೯ ನಪುಂಸಕವೇದಾಃ - ನಪುಂಸಕವೇದವು ಇವುಗಳು, ( ಈ ೯ ನೋಕಷಾಯ ಭೇದಗಳು ) ಅನಂತಾನು ಬಂಧ್ಯಪ್ರತ್ಯಾಖ್ಯಾನಪ್ರತ್ಯಾಖ್ಯಾನ ಸಂಜ್ವಲನವಿಕಲ್ಪಾಶ್ಚೈ - ಅನಂತಾನುಬಂಧಿ- ಅನಂತಾನುಬಂಧಿಕಷಾಯವು, ಅಪ್ರತ್ಯಾಖ್ಯಾನ - ಅಪ್ರತ್ಯಾಖ್ಯಾನ ಕಷಾಯವು, ಪ್ರತ್ಯಾಖ್ಯಾನ-ಪ್ರತ್ಯಾಖ್ಯಾನ ಕಷಾಯವು, ಸಂಜ್ವಲನ ವಿಕಲ್ಪಾಶ್ಚೈ- ಸಂಜ್ವಲನ ಕಷಾಯವೂಕೂಡ, ( ಈ ನಾಲ್ಕು ಕಷಾಯಗಳು ) ಏಕಶಃ-ಒಂದೊಂದು, ಕ್ರೋಧಮಾನ ಮಾಯಾಲೋಭಾಃ- ಕ್ರೋಧ-ಕ್ರೋಧವು, ಮಾನ-ಮಾನವು, ಮಾಯಾ-ಮಾಯವು, ಲೋಭಾಃ-ಲೋಭವು ಇವುಗಳು ಆಗುತ್ತವೆ||

ತಾ || ಮೋಹನೀಯಕರ್ಮವು ಎರಡು ಪ್ರಕಾರವು. ೧ ನೇದು ದರ್ಶನ ಮೋಹನೀಯಕರ್ಮ- ೨ ನೇದು ಚಾರಿತ್ರಮೋಹನೀಯಕರ್ಮ|| ಈ ೧ ನೇದರ್ಶನಮೋಹನೀಯವು. ೧ ಸಮ್ಯಕ್ತ್ವ, ೨ ಮಿಥ್ಯಾತ್ವ ೩ ಸಮ್ಯಗ್ಮಿಥ್ಯಾತ್ವವೆಂದು ೩ ಪ್ರಕಾರವಾಗಿದೆ || ೨ ನೇ ಚಾರಿತ್ರಮೋಹನೀಯಕರ್ಮವು. ಅಕಷಾಯ ಕಷಾಯಗಳೆಂಬ ಎರಡು ಭೇದಗಳುಳ್ಳದ್ದು || ಅಕಷಾಯವು= ೧ ಹಾಸ್ಯ ೨ ರತಿ ೩ ಅರತಿ ೪ ಶೋಕ ೫ ಭಯ ೬ ಜುಗುಪ್ಸಾ ೭ ಸ್ತ್ರೀವೇದ ೮ ಪುಂವೇದ ೯ ನಪುಂಸಕವೇದ ಎಂಬ ೯ ಭೇದಗಳುಳ್ಳದ್ದು || ಕಷಾಯವು. ೧ ಅನಂತಾನುಬಂಧಿ ಕ್ರೋಧ ೨ ಅನಂತಾನು ಬಂಧಿಮಾನ ೩ ಅನಂತಾನುಬಂಧಿಮಾಯಾ ೪ ಅನಂತಾನುಬಂಧಿಲೋಭ ೫ ಅಪ್ರತ್ಯಾಖ್ಯಾನಕ್ರೋಧ ೬ ಅಪ್ರತ್ಯಾಖ್ಯಾನಮಾನ ೭ ಅಪ್ರತ್ಯಾಖ್ಯಾನ ಮಾಯಾ ೮ ಅಪ್ರತ್ಯಾಖ್ಯಾನಲೋಭ ೯ ಪ್ರತ್ಯಾಖ್ಯಾನ ಕ್ರೋಧ ೧೦ ಪ್ರತ್ಯಾಖ್ಯಾನಮಾನ ೧೧ ಪ್ರತ್ಯಾ

ಖ್ಯಾನಮಾಯಾ. ೧೨ ಪ್ರತ್ಯಾಖ್ಯಾನ ಲೋಭ. ೧೩ ಸಂಜ್ವಲನ ಕ್ರೋಧ. ೧೪ ಸಂಜ್ವಲನ ಮಾನ. ೧೫ ಸಂಜ್ವಲನ ಮಾಯಾ. ೧೬ ಸಂಜ್ವಲನ ಲೋಭ ಎಂದು ೧೬ ಭೇದಗಳುಳ್ಳದ್ದು || ಯಾವದರ ಉದಯದಿಂದ ಸಮ್ಯಗ್ದರ್ಶನವನ್ನು ಚಲನವಾಗಿಯೂ, ಮಲಿನವಾಗಿಯೂ, ಅವಗಾಢವಾಗಿಯೂ, ಉಂಟುಮಾಡುವದೋ ಅದೇ ಸಮ್ಯಕ್ತ್ವ ಪ್ರಕೃತಿಯು, ಅಥವಾ ಶುಭ ಪರಿಣಾಮ ಸಾಮರ್ಥ್ಯದಿಂದ ಮಿಥ್ಯಾತ್ವಕ್ಕೆ ಶಕ್ತಿ ಇರುವದಿಲ್ಲವಾದ್ದರಿಂದ ಆತ್ಮನ ಶ್ರದ್ಧಾನವನ್ನು ತಡೆಯಲಾರದು ಅಂದರೆ ಸಮ್ಯಕ್ತ್ವವನ್ನು ಹಾಳುಮಾಡಲಾರದು ಎಂಬುವದು ಯಾವದೋ ಅದೇ ೧ ಸಮ್ಯಕ್ತ್ವ ಪ್ರಕೃತಿಯು || ಯಾವದರ ಉದಯದಿಂದ ತತ್ವಾರ್ಥದಲ್ಲಿ ವಿಪರೀತ ಪರಿಣಾಮ ಉಂಟಾಗುತ್ತೋ ಅದೇ ೨ ಮಿಥ್ಯಾತ್ವ ಪ್ರಕೃತಿಯು || ಯಾವದರ ಉದಯದಿಂದ ತತ್ವಾರ್ಥದಲ್ಲಿ ಮಿಶ್ರ ಪರಿಣಾಮ ಉಂಟಾಗುತ್ತದೆಯೋ ಅದೇ ೩ ಸಮ್ಯಗ್ಮಿಥ್ಯಾತ್ವ ಪ್ರಕೃತಿಯು|| ಈ ೩ ದರ್ಶನಮೋಹನೀಯಕರ್ಮ ಭೇದಗಳು. ಇವುಗಳು ಆತ್ಮನ ಸಮ್ಯಕ್ತ್ವ ಭಾವವನ್ನು ಹಾಳುಮಾಡುತ್ತವೆ || ಯಾವದರ ಉದಯದಿಂದ ಹಾಸ್ಯ ಉಂಟಾಗುತ್ತದೊ ಅದೇ ೪ ಹಾಸ್ಯನೋಕಷಾಯವು || ಯಾವದರ ಉದಯದಿಂದ ವಿಷಯದಲ್ಲಿ ಆಸಕ್ತಿ ಉಂಟಾಗುತ್ತದೋ ಅದೇ ೫ ರತಿನೋಕಷಾಯವು || ರತಿ ನೋಕಷಾಯಕ್ಕೆ ವಿರುದ್ಧವಾಗಿರುವದು ೬ ಅರತಿನೋಕಷಾಯವು || ಯಾವದರ ಉದಯದಿಂದ ದುಃಖವಾದಂಥ ಶೋಕ ಪರಿಣಾಮ ಉಂಟಾಗುತ್ತದೋ ಅದೇ ೭ ಶೋಕನೋಕಷಾಯವು || ಏಳುಪ್ರಕಾರವಾದ ಭಯ ಪರಿಣಾಮವೇ ೮ ಭಯ ನೋಕಷಾಯವು || ತಂನ ಸಂಬಂಧವಾದ ದೋಷಗಳನ್ನು ಮರಸುವದು, ಅನ್ಯರ ಸಂಬಂಧವಾದ ಕುಲಶೀಲಮೊದಲಾದವುಗಳಲ್ಲಿ ಆದಂಥಾ ದೋಷಗಳನ್ನು ಪ್ರಕಾಶಮಾಡುವದು ನಿಂದಿಸುವದು ಮೊದಲಾದ ಪರಿಣಾಮವನ್ನು ಉಂಟುಮಾಡುವದು ೯ ಜುಗುಪ್ಸಾ ನೋಕಷಾಯವು || ಪುರುಷ ಸಂಗಮದಲ್ಲಿ ಅಭಿಲಾಷೆಯನ್ನು ಉಂಟುಮಾಡುವದು ೧೦ ಸ್ತ್ರೀವೇದ ನೋಕಷಾಯವು || ಸ್ತ್ರೀ ಸಂಗಮದಲ್ಲಿ ಅಭಿಲಾಷೆಯನ್ನು ಉಂಟುಮಾಡುವದು ೧೧ ಪುಂವೇದ ನೋಕ

ಧಗಳು ) ಅಕಷಾಯಕಷಾಯೌ - ಅಕಷಾಯ- ನೋಕಷಾಯವು, ಕಷಾಯೌ-ಕಷಾಯವು ಇವುಗಳು ( ಈ ಎರಡು ಚಾರಿತ್ರ ಮೋಹನೀಯಕರ್ಮದ ಭೇದಗಳು ) ಹಾಸ್ಯ ರತ್ಯ ರತಿ ಶೋಕ ಭಯ ಜುಗುಪ್ಸಾ ಸ್ತ್ರೀಪುಂನಪುಂಸಕವೇದಾಃ - ೧ ಹಾಸ್ಯ-ಹಾಸ್ಯವು, ೨ ರತಿ-ರತಿನೋಕಷಾಯವು, ೩ ಅರತಿ-ಅರತಿಯು, ೪ ಶೋಕ-ಶೋಕವು, ೫ ಭಯ-ಭಯವು, ೬ ಜುಗುಪ್ಸಾ-ಜುಗುಪ್ಸೆಯು, ಸ್ತ್ರೀ-ಸ್ತ್ರೀವೇದವು, ೮ ಪುಂ-ಪುಂವೇದವು, ೯ ನಪುಂಸಕವೇದಾಃ - ನಪುಂಸಕವೇದವು ಇವುಗಳು, ( ಈ ೯ ನೋಕಷಾಯ ಭೇದಗಳು ) ಅನಂತಾನು ಬಂಧ್ಯಪ್ರತ್ಯಾಖ್ಯಾನಪ್ರತ್ಯಾಖ್ಯಾನ ಸಂಜ್ವಲನವಿಕಲ್ಪಾಶ್ಚ - ಅನಂತಾನುಬಂಧಿ- ಅನಂತಾನುಬಂಧಿಕಷಾಯವು, ಅಪ್ರತ್ಯಾಖ್ಯಾನ - ಅಪ್ರತ್ಯಾಖ್ಯಾನ ಕಷಾಯವು, ಪ್ರತ್ಯಾಖ್ಯಾನ-ಪ್ರತ್ಯಾಖ್ಯಾನ ಕಷಾಯವು, ಸಂಜ್ವಲನ ವಿಕಲ್ಪಾಶ್ಚ - ಸಂಜ್ವಲನ ಕಷಾಯವು ಕೂಡ, ( ಈ ನಾಲ್ಕು ಕಷಾಯಗಳು ) ಏಕಶಃ-ಒಂದೊಂದು, ಕ್ರೋಧಮಾನ ಮಾಯಾಲೋಭಾಃ-ಕ್ರೋಧ-ಕ್ರೋಧವು, ಮಾನ-ಮಾನವು, ಮಾಯಾ-ಮಾಯೆಯು, ಲೋಭಾಃ-ಲೋಭವು ಇವುಗಳು ಆಗುತ್ತವೆ ||

ತಾ || ಮೋಹನೀಯಕರ್ಮವು ಎರಡು ಪ್ರಕಾರವು. ೧ ನೇದು ದರ್ಶನ ಮೋಹನೀಯಕರ್ಮ- ೨ ನೇದು ಚಾರಿತ್ರಮೋಹನೀಯಕರ್ಮ|| ಈ ೧ ನೇದರ್ಶನಮೋಹನೀಯವು. ೧ ಸಮ್ಯಕ್ತ್ವ, ೨ ಮಿಥ್ಯಾತ್ವ ೩ ಸಮ್ಯಗ್ಮಿಥ್ಯಾತ್ವವೆಂದು ೩ ಪ್ರಕಾರವಾಗಿದೆ || ೨ ನೇ ಚಾರಿತ್ರಮೋಹನೀಯಕರ್ಮವು. ಅಕಷಾಯ ಕಷಾಯಗಳೆಂಬ ಎರಡು ಭೇದಗಳುಳ್ಳದ್ದು || ಅಕಷಾಯವು= ೧ ಹಾಸ್ಯ ೨ ರತಿ ೩ ಅರತಿ ೪ ಶೋಕ ೫ ಭಯ ೬ ಜುಗುಪ್ಸಾ ೭ ಸ್ತ್ರೀವೇದ ೮ ಪುಂವೇದ ೯ ನಪುಂಸಕವೇದ ಎಂಬ ೯ ಭೇದಗಳುಳ್ಳದ್ದು || ಕಷಾಯವು. ೧ ಅನಂತಾನುಬಂಧಿ ಕ್ರೋಧ ೨ ಅನಂತಾನು ಬಂಧಿಮಾನ ೩ ಅನಂತಾನುಬಂಧಿಮಾಯಾ ೪ ಅನಂತಾನುಬಂಧಿಲೋಭ ೫ ಅಪ್ರತ್ಯಾಖ್ಯಾನಕ್ರೋಧ ೬ ಅಪ್ರತ್ಯಾಖ್ಯಾನಮಾನ ೭ ಅಪ್ರತ್ಯಾಖ್ಯಾನ ಮಾಯಾ ೮ ಅಪ್ರತ್ಯಾಖ್ಯಾನಲೋಭ ೯ ಪ್ರತ್ಯಾಖ್ಯಾನ ಕ್ರೋಧ ೧೦ ಪ್ರತ್ಯಾಖ್ಯಾನಮಾನ ೧೧ ಪ್ರತ್ಯಾ

ಖ್ಯಾನಮಾಯಾ. ೧೨ ಪ್ರತ್ಯಾಖ್ಯಾನ ಲೋಭ. ೧೩ ಸಂಜ್ವಲನ ಕ್ರೋಧ. ೧೪ ಸಂಜ್ವಲನ ಮಾನ. ೧೫ ಸಂಜ್ವಲನ ಮಾಯಾ. ೧೬ ಸಂಜ್ವಲನ ಲೋಭ ಎಂದು ೧೬ ಭೇದಗಳುಳ್ಳದ್ದು || ಯಾವದರ ಉದಯದಿಂದ ಸಮ್ಯಗ್ದರ್ಶನವನ್ನು ಚಲನವಾಗಿಯೂ, ಮಲಿನವಾಗಿಯೂ, ಅವಗಾಢವಾಗಿಯೂ, ಉಂಟುಮಾಡುವದೋ ಅದೇ ಸಮ್ಯಕ್ತ್ವ ಪ್ರಕೃತಿಯು, ಅಥವಾ ಶುಭ ಪರಿಣಾಮ ಸಾಮರ್ಥ್ಯದಿಂದ ಮಿಥ್ಯಾತ್ವಕ್ಕೆ ಶಕ್ತಿ ಇರುವದಿಲ್ಲವಾದ್ದರಿಂದ ಆತ್ಮನ ಶ್ರದ್ಧಾನವನ್ನು ತಡೆಯಲಾರದು ಅಂದರೆ ಸಮ್ಯಕ್ತ್ವವನ್ನು ಹಾಳುಮಾಡಲಾರದು ಎಂಬುವದು ಯಾವದೋ ಅದೇ ೧ ಸಮ್ಯಕ್ತ್ವ ಪ್ರಕೃತಿಯು || ಯಾವದರ ಉದಯದಿಂದ ತತ್ವಾರ್ಥದಲ್ಲಿ ವಿಪರೀತ ಪರಿಣಾಮ ಉಂಟಾಗುತ್ತೋ ಅದೇ ೨ ಮಿಥ್ಯಾತ್ವ ಪ್ರಕೃತಿಯು || ಯಾವದರ ಉದಯದಿಂದ ತತ್ವಾರ್ಥದಲ್ಲಿ ಮಿಶ್ರ ಪರಿಣಾಮ ಉಂಟಾಗುತ್ತದೆಯೋ ಅದೇ ೩ ಸಮ್ಯಗ್ಮಿಥ್ಯಾತ್ವ ಪ್ರಕೃತಿಯು|| ಈ ೩ ದರ್ಶನಮೋಹನೀಯಕರ್ಮ ಭೇದಗಳು. ಇವುಗಳು ಆತ್ಮನ ಸಮ್ಯಕ್ತ್ವ ಭಾವವನ್ನು ಹಾಳುಮಾಡುತ್ತವೆ|| ಯಾವದರ ಉದಯದಿಂದ ಹಾಸ್ಯ ಉಂಟಾಗುತ್ತದೊ ಅದೇ ೪ ಹಾಸ್ಯನೋಕಷಾಯವು| ಯಾವದರ ಉದಯದಿಂದ ವಿಷಯದಲ್ಲಿ ಆಸಕ್ತಿ ಉಂಟಾಗುತ್ತದೋ ಅದೇ ೫ ರತಿನೋಕಷಾಯವು|| ರತಿ ನೋಕಷಾಯಕ್ಕೆ ವಿರುದ್ಧವಾಗಿರುವದು ೬ ಅರತಿನೋಕಷಾಯವು || ಯಾವದರ ಉದಯದಿಂದ ದುಃಖವಾದಂಥ ಶೋಕ ಪರಿಣಾಮ ಉಂಟಾಗುತ್ತದೋ ಅದೇ ೭ ಶೋಕನೋಕಷಾಯವು || ಏಳುಪ್ರಕಾರವಾದ ಭಯ ಪರಿಣಾಮವೇ ೮ ಭಯ ನೋಕಷಾಯವು || ತಂನ ಸಂಬಂಧವಾದ ದೋಷಗಳನ್ನು ಮರಸುವದು, ಅನ್ಯರ ಸಂಬಂಧವಾದ ಕುಲಶೀಲಮೊದಲಾದವುಗಳಲ್ಲಿ ಅದಂಥಾ ದೋಷಗಳನ್ನು ಪ್ರಕಾಶಮಾಡುವದು ನಿಂದಿಸುವದು ಮೊದಲಾದ ಪರಿಣಾಮವನ್ನು ಉಂಟುಮಾಡುವದು ೯ ಜುಗುಪ್ಸಾ ನೋಕಷಾಯವು || ಪುರುಷ ಸಂಗಮದಲ್ಲಿ ಅಭಿಲಾಷೆಯನ್ನು ಉಂಟುಮಾಡುವದು ೧೦ ಸ್ತ್ರೀವೇದ ನೋಕಷಾಯವು || ಸ್ತ್ರೀ ಸಂಗಮದಲ್ಲಿ ಅಭಿಲಾಷೆಯನ್ನು ಉಂಟುಮಾಡುವದು ೧೧ ಪುಂವೇದ ನೋಕ

ಷಾಯವು || ಸ್ತ್ರೀ ಪುರುಷರಿಬ್ಬರ ಸಂಗಮಾಭಿಲಾಷೆಯನ್ನು ಉಂಡುಮಾಡುವದು ೧೦ ನಪುಂಸಕ ನೋಕಷಾಯವು || ನೋಕಷಾಯ ಅಥವಾ ಅಕಷಾಯ ವೇದನೀಯ ಎಂದೂ ಹೇಳುಪದುಂಟು ಅಂದರೆಸ್ವಲ್ಪ ಕಷಾಯವೆಂದು ಅರ್ಥವು || ( ಕಷಂತಿಹಿಂಸತೀತಿ ಕಷಾಯಾಃ ) ಆತ್ಮನ ಗುಣಗಳನ್ನು ಘಾತಮಾಡುವಂಥಾ ಪರಿಣಾಮವು ಕಷಾಯ ವೆಂಬುವದು - ಅಥವಾ ಕ್ಲೇಶವುಳ್ಳದ್ದಾಗಿ ಮಾಡುವದು || ಕಷಾಯ ಕರ್ಮೋದಯದಿಂದ ವೇದನೀಯ ಕರ್ಮವು || ತನಗೂ ಅನ್ಯನಿಗೂ ಘಾತರೂಪವಾಗಿಯೂ, ನಿರ್ದಯಾಶ್ರಿತವಾಗಿಯೂ, ಕ್ರೂರವಾಗಿಯೂ ಇರುವ ಪರಿಣಾಮವೇ ಕ್ರೋಧವೆಂಬುವದು || ಜ್ಞಾನ, ಐಶ್ವರ್ಯ, ಜಾತಿ, ಕುಲ, ರೂಪು,ವೀರ್ಯ್ಯತಪಸ್ಸು ಮೊದಲಾದಮದ(ಗರ್ವ)ದಿಂದ ಇತರನಿಗೆ ಬಗ್ಗುವದಿಲ್ಲವೆಂಬ ಪರಿಣಾಮವೇ ಮಾನವೆಂಬುವದು || ಅನ್ಯರನ್ನು ವಂಚಿಸಬೇಕೆಂಬ ಪ್ರಯತ್ನದಿಂದ ಜಾಜ್ವಲ್ಯ ಪ್ರಾಯವಾದ ಪರಿಣಾಮವೇ ಮಾಯಾ ಎಂಬುವದು || ಧನಧಾನ್ಯ ಮೊದಲಾದ ದ್ರವ್ಯ ಲಾಭಗಳನ್ನು ಪಡೆಯಬೇಕೆಂಬ ತ್ರೀವ್ರವಾದ ಅಭಿಲಾಷಾರೂಪ ಪರಿಣಾಮವೇ ಲೋಭವು || ಈ ಕ್ರೋಧಾದಿಗಳು ಪ್ರತಿವೊಂದೂ ತೀವ್ರತರ, ತೀವ್ರ, ಮಂದ, ಮಂದತರ, ಎಂಬ ನಾಲ್ಕು ಭೇದಗಳಾಗಿರುತ್ತವೆ. ಅನಂತಾನುಬಂಧಿ ಕ್ರೋಧಮಾನ ಮಾಯಾಲೋಭಗಳು ತೀವ್ರತರಗಳು || ಈ ತೀವ್ರತರಕಷಾಯಗಳ ಉದಯದಿಂದ ಅನಂತಸಂಸಾರಕ್ಕೆ ಕಾರಣವಾದಮಿಥ್ಯಾತ್ವಪರಿಣಾಮ ಉಂಟಾಗುತ್ತದೆ. ಆದ್ದರಿಂದ ಈ ೪ ಕಷಾಯಗಳು ಹಿಂದೆ ಹೇಳಿದ ದರ್ಶನ ಮೋಹನೀಯಗಳ ಮೂರು ಭೇದಗಳುಸೇರಿವಟ್ಟು ೩ಕ್ಕು ಸಪ್ತ ಪ್ರಕೃತಿಗಳೆಂದು ಹೆಸರು || ಈ ಸಪ್ತ ಪ್ರಕೃತಿಗಳಉದಯದಿಂದ ಸಮ್ಯಕ್ತ್ವ ಹುಟ್ಟುವದಿಲ್ಲ || (ತೀವ್ರ) ಏಕದೇಶತ್ಯಾಗವನ್ನು ಮಾಡುವಪರಿಣಾಮಕ್ಕೆಯಾವ ಕರ್ಮೋದಯಗಳಿಂದ ಸಮರ್ಥ ವಿಲ್ಲವೋ ಅವೇ ಅಪ್ರತ್ಯಾಖ್ಯಾನ ಕ್ರೋಧಮಾನ ಮಾಯಾ ಲೋಭಗಳು || ಇವುಗಳಉದಯದಿಂದ ಶ್ರಾವಕ ಧರ್ಮವನ್ನು ನಡೆಸುವದಕ್ಕೆ ಪ್ರತಿಬಂಧಕವು || ( ಮಂದ ) ಯಾವ ಕರ್ಮೋದಯದಿಂದ ಸರ್ವಸಂಗ ಪರಿತ್ಯಾಗವನ್ನು ಮಾಡುವದಕ್ಕೆ ಸಮರ್ಥ ವಾಗುವದಿಲ್ಲವೋ ಅವೇ ಪ್ರತ್ಯಾಖ್ಯಾನ

ಕ್ರೋಧ ಮಾನ ಮಾಯಾ ಲೋಭಗಳು || ಇವುಗಳ ಉದಯದಿಂದ ಮಹಾ ವ್ರತಿಯಾಗುವದಕ್ಕೆ ಪ್ರತಿಬಂಧಕವು || (ಮಂದತರ) ಯಾವ ಕರ್ಮೋದಯಗಳಿಂದ ಎಲ್ಲಾ ಸಂಯಮವು ಪ್ರಕಾಶಿಸುತ್ತೊ ಅವೇಯೇ ಸಂಜ್ವಲನ ಕ್ರೋಧಮಾನ ಮಾಯಾ ಲೋಭಗಳು || ಇವುಗಳುದಯದಿಂದ ಯಥಾಖ್ಯಾತಚಾರಿತ್ರ ನಾಗುವದಕ್ಕೆ ಪ್ರತಿಬಂಧಕವು || ೯ ||

ಅ || ಆಯುಃ ಕರ್ಮವು ನಾಲ್ಕು ಭೇದಗಳೆಂದು ಹೇಳುತ್ತಾರೆ.

ಸೂ || ನಾರಕ ತೈರ್ಯಗ್ಯೋನ ಮಾನುಷ ದೈವಾನಿ || ೧೦ ||

ಟೀ || ನಾರಕ ತೈರ್ಯಗ್ಯೋನ ಮಾನುಷ ದೈವಾನಿ - ನಾರಕ- ನರಕಾಯುಷ್ಯವು, ತಿರ್ಯಗ್ಯೋನಿ - ತಿರ್ಯಗಾಯುಷ್ಯವು, ಮಾನುಷ - ಮನುಷ್ಯಾಯುಷ್ಯವು, ದೈವಾನಿ-ದೇವಾಯುಷ್ಯವು ಇವುಗಳು ಆಯುಃ ಪ್ರಕೃತಿಯ ೪ ಉತ್ತರ ಪ್ರಕೃತಿಗಳಾಗುತ್ತವೆ ||

ತಾ || ಯಾವ ಕರ್ಮ ಯಿರುವದ್ದರಿಂದ ಆತ್ಮನು ಜೀವಿಸಿಕೊಂಡು ಇಧಾನೆಯೋ ಯಾವ ಕರ್ಮ ಇಲ್ಲದ್ದರಿಂದ ಆತ್ಮನು ಮೃತನಾದಂಥಾವನು ಎಂದು ಹೇಳಲ್ಪಡುತ್ತಾನೆಯೋ ಆ ಕರ್ಮವೇ ಭವವನ್ನುಧರಿಸುವಂಥಾ ಆಯುಃ ಪ್ರಕೃತಿಯು ಎಂದು ಹೇಳಲ್ಪಡುತ್ತದೆ | ೧ ತೀವ್ರವಾದ ಶೀತೋಷ್ಣ ವೇದನೆಗಳಿಗೆ ಸ್ಥಾನವಾದ ನರಕದಲ್ಲಿ ಬಹುಕಾಲ ಜೀವಿಸುವದಕ್ಕೆ ನರಕಾಯುಷ್ಯವೆಂದು ಹೆಸರು || ೨ ಕ್ಷುತ್ಪಿಪಾಸಾದಿ ನಾನಾಪ್ರಕಾರ ವ್ಯಸನಗಳಿಂದ ಜೀವಿಸುವದಕ್ಕೆ ತಿರ್ಯಂಚಾಯುಷ್ಯವು || ೩ ಶರೀರಾದಿ ಸುಖದುಃಖಗಳಿಂದ ವ್ಯಾಪ್ತನಾಗಿ ಜೀವಿಸುವದು ಮನುಷ್ಯಾಯುಷ್ಯವು || ೪ ಶಾರೀರಾದಿ ಸುಖಗಳಿಂದ ಸಂಪೂರ್ಣವಾಗಿ ಜೀವಿಸುವದು ದೇವಾಯುಷ್ಯವು. ಆದರೆ ಈ ದೇವಾಯುಷ್ಯಾವಸಾನದಲ್ಲಿ ಮಾನಸಿಕವಾದ ದುಃಖ ಉಂಟು || ೧೦ ||

ಅ || ನಾಮಕರ್ಮ ಭೇದಗಳನ್ನು ಹೇಳುತ್ತಾರೆ.

ಸೂ || ಗತಿಜಾತಿ ಶರೀರಾಂಗೋಪಾಂಗನಿರ್ಮಾಣಬಂಧನ ಸಂಘಾತ ಸಂಸ್ಥಾನ ಸಂಹನನ ಸ್ಪರ್ಶ ರಸ ಗಂಧವರ್ಣಾನುಪೂರ್ವ್ಯ ಗುರುಲಘೂಪಘಾತಪರಘಾತಾತಪೋ ದ್ಯೋತೋಚ್ಛ್ವಾಸ ವಿಹಾಯೋಗತಯಃ ಪ್ರತ್ಯೇಕಶರೀರತ್ರಸ

ಸುಭಗ ಸುಸ್ವರ ಶುಭಸೂಕ್ಷ್ಮ ಪರ್ಯಾಪ್ತಿಸ್ಥಿರಾದೇಯ
ಯಶಃ ಕೀರ್ತಿ ಸೇತರಾಣಿ ತೀರ್ಥಕರತ್ವಂ ಚ ॥ ೧೧ ॥

ಟೀ ॥ ಗತಿ ಜಾತಿ ಶರೀರಾಂಗೋಪಾಂಗ ನಿರ್ಮಾಣಬಂಧನ ಸಂಘಾತಸಂಸ್ಥಾನ ಸಂಹನನ ಸ್ಪರ್ಶ ರಸಗಂಧ ವರ್ಣಾನುಪೂರ್ವ್ಯಾಗುರುಲಘೂಪಘಾತ ಪರಘಾತಾತಪೋ ದ್ಯೋತೋಚ್ಛ್ವಾಸ ವಿಹಾಯೋಗತಯಃ - ಗತಿ - ನಾರಕಾದಿ ಪರ್ಯಾಯವನ್ನು ಪಡೆಯಿಸುವ ಗತಿನಾಮವು ೧, ಜಾತಿ - ಏಕೇಂದ್ರಿಯತ್ವ ಮೊದಲಾದ ಸಾದೃಶ್ಯವನ್ನು ಮಾಡುವ ಜಾತಿನಾಮವು ೨, ಶರೀರ - ಔದಾರಿಕಾದಿ ಶರೀರಗಳನ್ನು ಹುಟ್ಟಿಸುವ ಶರೀರನಾಮವು ೩, ಅಂಗೋಪಾಂಗ-ಔದಾರಿಕಾಂಗೋಪಾಂಗ ಮೊದಲಾದ ಅಂಗೋಪಾಂಗನಾಮವು ೪, ನಿರ್ಮಾಣ-ಅಂಗೋಪಾಂಗೋತ್ಪತ್ತಿಯು ನಿರ್ಮಾಣನಾಮವು ೫, ಬಂಧನ - ಔದಾರಿಕಾದಿ ಶರೀರ ಪರಮಾಣುಗಳ ಪರಸ್ಪರ ಬಂಧನವನ್ನು ಮಾಡುವ ಬಂಧನನಾಮವು ೬, ಸಂಘಾತ - ಔದಾರಿಕಾದಿ ಪಂಚಪ್ರಕಾರ ಸಂಘಾತನಾಮವು ೭. ಸಂಸ್ಥಾನ - ಸಮಚತುರಸ್ರ ಮೊದಲಾದ ಸಂಸ್ಥಾನ ನಾಮವು ೮, ಸಂಹನನ - ವಜ್ರವೃಷಭ ನಾರಾಚಸಂಹನನ ಮೊದಲಾದ ಸಂಹನನ ನಾಮವು ೯, ಸ್ಪರ್ಶ-ಕರ್ಕಶ ಮೊದಲಾದ ಸ್ಪರ್ಶ ನಾಮವು ೧೦, ರಸ - ತಿಕ್ತ ಮೊದಲಾದ ರಸನಾಮವು ೧೧, ಗಂಧ - ಗಂಧನಾಮವು ೧೨, ವರ್ಣ - ಕೃಷ್ಣಾದಿವರ್ಣಗಳನ್ನು ಮಾಡುವ ವರ್ಣನಾಮವು ೧೩, ಆನುಪೂರ್ವ್ಯ - ನರಕ ಗತಿ ಪ್ರಾಯೋಗ್ಯಾನುಪೂರ್ವ್ಯ ಮೊದಲಾದದ್ದು ಆನುಪೂರ್ವ್ಯ ನಾಮವು ೧೪ ಅಗುರುಲಘು - ಅಗುರುಲಘುನಾಮವು ೧೫, ಉಪಘಾತ - ತನಗೆ ಭಾದೆಯನ್ನು ಮಾಡುವದೊಳ್ಳು ಮೊದಲಾದ್ದನ್ನು ಮಾಡುವ ಉಪಘಾತನಾಮವು ೧೬, ಪರಘಾತ - ಇತರರಿಗೆ ಬಾಧೆಯನ್ನು ಮಾಡುವ ಸರ್ಪದಂಷ್ಟ್ರಾದಿಗಳನ್ನು ಮಾಡುವ ಪರಘಾತನಾಮವು ೧೭. ಆತಪ - ಆತಪನಾಮವು. ೧೮. ಉದ್ಯೋತ - ಉದ್ಯೋತನಾಮವು ೧೯, ಉಚ್ಛ್ವಾಸ -ಉಚ್ಛ್ವಾಸನಾಮವು ೨೦, ವಿಹಾಯೋಗತಯಃ - ವಿಹಾಯೋಗತಿ ನಾಮವು ೨೧, ಪ್ರತ್ಯೇಕಶರೀರ ತ್ರಸಸುಭಗ ಸುಸ್ವರಶುಭ ಸೂಕ್ಷ್ಮಪರ್ಯಾಪ್ತಿ ಸ್ಥಿರಾದೇಯ ಯಶಃ ಕೀರ್ತಿಸೇತರಾಣಿ - ಪ್ರತ್ಯೇಕ ಶರೀರ - ಪ್ರತ್ಯೇಕ

ಶರೀರನಾಮವು ೨೨, ತ್ರಸ - ತ್ರಸನಾಮವು ೨೩, ಸುಭಗ - ಸುಭಗನಾಮವು ೨೪, ಸುಸ್ವರ - ಸುಸ್ವರನಾಮವು ೨೫, ಶುಭ - ಶುಭನಾಮವು ೨೬, ಸೂಕ್ಷ್ಮ - ಸೂಕ್ಷ್ಮನಾಮವು ೨೭, ಪರ್ಯಾಪ್ತಿ - ಪರ್ಯಾಪ್ತಿನಾಮವು ೨೮, ಸ್ಥಿರ - ಸ್ಥಿರನಾಮವು ೨೯, ಆದೇಯ - ಆದೇಯನಾಮವು ೩೦, ಯಶಃಕೀರ್ತಿ - ಯಶಃ ಕೀರ್ತಿನಾಮವು ೩೧, ಸೇತರಾಣಿ - ಇತರವಾದಂಥಾ ನಾಮಕರ್ಮಗಳು. ಅಂದರೆ (ಸಾಧಾರಣ ನಾಮಕರ್ಮವು. ೩೨. ಸ್ಥಾವರನಾಮಕರ್ಮವು ೩೩, ದುರ್ಭಗನಾಮವು ೩೪- ದುಸ್ವರನಾಮವು ೩೫, ಅಶುಭನಾಮವು ೩೬, ಸ್ಥೂಲನಾಮವು ೩೭, ಅಪರ್ಯಾಪ್ತಿನಾಮವು ೩೮, ಅಸ್ಥಿರ ನಾಮವು ೩೯. ಅನಾದೇಯ ನಾಮವು ೪೦, ಅಯಶಃ ಕೀರ್ತಿ ನಾಮವು ೪೧, ಇವುಗಳು, ತೀರ್ಥಕರತ್ವಂಚ- ತೀರ್ಥಕರನಾಮಕರ್ಮವೂ ಕೂಡ. ೪೨, ಅಂದರೆ ನಾಮಕರ್ಮದ ಉತ್ತರ ಪ್ರಕೃತಿಗಳು ೪೨ ಭೇದಗಳಾಗುತ್ತವೆ ||

ತಾ || ೧ ಯಾವ ಕರ್ಮೋದಯದಿಂದ ಆತ್ಮನು ಭವಾಂತರವನ್ನು ಕುರಿತು ಅಭಿಮುಖನಾದಂಥಾವನಾಗಿ ಗಮನವನ್ನು ಹೊಂದುತ್ತಿಥಾನೆಯೋ ಆಕರ್ಮಕ್ಕೆ ಗತಿನಾಮಕರ್ಮವೆಂದು ಹೆಸರು || ಆಗತಿನಾಮಕರ್ಮವು ನರಕತಿ ತಿರ್ಯಂಚ ಗತಿ, ಮನುಷ್ಯಗತಿ, ದೇವಗತಿ, ಎಂದು ೪ ಪ್ರಕಾರವು. ಆತ್ಮನು ನರಕಗತಿ ನಾಮಕರ್ಮೋದಯದಿಂದ ನಾರಕನಾಗಿಯೂ, ತಿರ್ಯಗ್ಗತಿ ನಾಮಕರ್ಮೋದಯದಿಂದ ತಿರ್ಯಂಚನಾಗಿಯೂ, ಮನುಷ್ಯಗತಿ ನಾಮಕರ್ಮೋದಯದಿಂದ ಮನುಷ್ಯನಾಗಿಯೂ, ದೇವಗತಿ ನಾಮಕರ್ಮೋದಯದಿಂದ ದೇವನಾಗಿಯೂ ಹುಟ್ಟುತ್ತಾನೆ || ೨ ನರಕಾದಿಗತಿಗಳಲ್ಲಿ ವ್ಯಭಿಚಾರವಿಲ್ಲದೆ ಸಾದೃಶ್ಯದಿಂದ ವಂದಾಗಿ ಮಾಡಲ್ಪಟ್ಟ ಅರ್ಥಸ್ವರೂಪವು ಜಾತಿ ಎಂಬುವದು || ಇದು ಏಕೇಂದ್ರಿಯ ದ್ವೀಂದ್ರಿಯ ತ್ರೀಂದ್ರಿಯ ಚತುರಿಂದ್ರಿಯ ಪಂಚೇಂದ್ರಿಯ ಭೇದದಿಂದ ೫ ಪ್ರಕಾರವು. ಆತ್ಮನು ಏಕೇಂದ್ರಿಯಜಾತಿನಾಮಕರ್ಮೋದಯದಿಂದ ಏಕೇಂದ್ರಿಯ ಇಂತೆಂದು ದ್ವೀಂದ್ರಿಯಜಾತಿ ನಾಮಕರ್ಮೋದಯದಿಂದ ದ್ವೀಂದ್ರಿಯ ಇಂತೆಂದು, ತ್ರೀಂದ್ರಿಯ ಜಾತಿ ನಾಮಕರ್ಮೋದಯದಿಂದ ತ್ರೀಂದ್ರಿಯ ಇಂತೆಂದು, ಚತುರಿಂದ್ರಿಯ

ನಾಮಕರ್ಮೋದಯದಿಂದ ಚತುರಿಂದ್ರಿಯ ಇಂತೆಂದು, ಪಂಚೇಂದ್ರಿಯ ನಾಮಕರ್ಮೋದಯದಿಂದ ಪಂಚೇಂದ್ರಿಯ ಇಂತೆಂದು ಹೇಳಲ್ಪಡುತ್ತಾನೆ ॥ ೩ ಶರೀರ ನಾಮಕರ್ಮೋದಯದಿಂದ ಶರೀರ ಉಂಟಾಗುತ್ತದೆ. ಆ ಶರೀರವು ೧ ಔದಾರಿಕ ಶರೀರ. ೨ ವೈಕ್ರಿಯಕ ಶರೀರ ೩ ಆಹಾರಕ ಶರೀರ. ೪ ತೈಜಸ ಶರೀರ. ೫ ಕಾರ್ಮಣ ಶರೀರವೆಂದು ೫ ಪ್ರಕಾರವು. ಈ ಪ್ರತಿ ಒಂದು ಶರೀರವು ಆಯಾಯ ನಾಮಕರ್ಮೋದಯದಿಂದ ಬರುತ್ತದೆ ಅಂದರೆ ಔದಾರಿಕ ಶರೀರ ನಾಮಕರ್ಮೋದಯದಿಂದ ಔದಾರಿಕ ಶರೀರ ಬರುತ್ತದೆ ಉಳಿದ ಶರೀರಗಳನ್ನು ಇದರಂತೆಯೆ ತಿಳಿಯುವದು ॥ ೪ ಅಂಗೋಪಾಂಗ ನಾಮಕರ್ಮೋದಯದಿಂದ ಮಸ್ತಕ, ಬೆನ್ನು, ಹೊಟ್ಟೆ, ಭುಜ, ಕೈಯಿ, ಕಾಲುಗಳೆಂಬ ಅಂಗಭೇದಗಳು, ಮತ್ತು ಹಣೆ, ಕಣ್ಣು, ಮೂಗು ಮೊದಲಾದವು ಉಪಾಂಗ ಭೇದಗಳು ಈ ಅಂಗೋಪಾಂಗಗಳ ಭೇದ ಉಂಟಾಗುವದು ಅಂಗೋಪಾಂಗನಾಮಕರ್ಮವು. ಇದು ೧ ಔದಾರಿಕ ಶರೀರಾಂಗೋಪಾಂಗ. ೨ ವೈಕ್ರಿಯಕ ಶರೀರಾಂಗೋಪಾಂಗ. ೩ ಆಹಾರಕ ಶರೀರಾಂಗೋಪಾಂಗ ಎಂದು ೩ ಪ್ರಕಾರವು ॥ ೫ ನಿರ್ಮಾಣನಾಮ ಕರ್ಮೋದಯದಿಂದ ಅಂಗೋಪಾಂಗಗಳು ಉಂಟಾಗುತ್ತದೆ. ಈ ನಿರ್ಮಾಣನಾಮಕರ್ಮವು ಸ್ಥಾನ ನಿರ್ಮಾಣ. ಪ್ರಮಾಣನಿರ್ಮಾಣ ಎಂದು ೨ ಪ್ರಕಾರವು ॥ ಕಣ್ಣು ಮೊದಲಾದ ಇಂದ್ರಿಯಗಳನ್ನು ಯಾವ ಯಾವ ಸ್ಥಾನದಲ್ಲಿ ಮಾಡಬೇಕೋ ಅಲ್ಲಲ್ಲಿ ಮಾಡುವದು ಸ್ಥಾನ ನಿರ್ಮಾಣ ನಾಮಕರ್ಮವು ॥ ಕಣ್ಣು ಮೊದಲಾದ ಇಂದ್ರಿಯಗಳಿಗೆ ಯೋಗ್ಯವಾದ ಪರಿಮಾಣವನ್ನು ಮಾಡುವದು ಪ್ರಮಾಣ ನಿರ್ಮಾಣ ನಾಮಕರ್ಮವು ॥ ಶರೀರ ನಾಮಕರ್ಮೋದಯದಿಂದ ಸ್ವೀಕರಿಸಲ್ಪಟ್ಟ ಪುದ್ಗಲಗಳ ಅನ್ಯೋನ್ಯ ಪ್ರದೇಶಗಳಲ್ಲಿ ಹೊಂದುನಿಕೆಯು ಬಂಧನ ನಾಮಕರ್ಮವು ॥ ಈ ಬಂಧನ ನಾಮಕರ್ಮವು ೧ ಔದಾರಿಕ ಬಂಧನನಾಮಕರ್ಮ. ೨ ವೈಕ್ರಿಯಕ ಬಂಧನ ನಾಮಕರ್ಮ. ೩ ಆಹಾರಕ ಬಂಧನ ನಾಮಕರ್ಮ. ೪ ತೈಜಸಬಂಧನ ನಾಮಕರ್ಮ. ೫ ಕಾರ್ಮಣ ಬಂಧನ ನಾಮಕರ್ಮ ಎಂದು ೫ ಪ್ರಕಾರವು ॥ ಔದಾರಿಕಬಂಧನ ನಾಮ ಕರ್ಮಾದಿಗಳು ತಂಮ ತಂಮ ಉದಯದಿಂದ ತಂಮತಂಮ

ಬಂಧನವನ್ನು ಪಡೆಯುತ್ತವೆ || ೭ ಔದಾರಿಕಾದಿ ಶರೀರಗಳಿಗೆ ಸಂದುಯಿಲ್ಲ ದಹಾಗೆ ಅನ್ಯೋನ್ಯ ಪ್ರದೇಶಗಳನ್ನು ಪ್ರವೇಶಿಸುವದ್ದರಿಂದ ಏಕತ್ವವಾಗುವದೇ ಸಂಘಾತ ನಾಮಕರ್ಮವು || ಈ ಸಂಘಾತ ನಾಮಕರ್ಮವು ೧ ಔದಾರಿಕ ಸಂಘಾತ, ೨ ವೈಕ್ರಿಯಕ ಸಂಘಾತ, ೩ ಆಹಾರಕ ಸಂಘಾತ, ೪ ತೈಜಸ ಸಂಘಾತ, ೫ ಕಾರ್ಮಣ ಸಂಘಾತ ಎಂದು ೫ ಪ್ರಕಾರವು || ೮. ಔದಾರಿಕಾದಿ ಶರೀರಗಳ ಆಕೃತಿಯನ್ನು ಉಂಟುಮಾಡುವದು ಸಂಸ್ಥಾನ ನಾಮಕರ್ಮವು || ಅದು ಸಮಚತುರಸ್ರ ಸಂಸ್ಥಾನ ನಾಮಕರ್ಮ. ೨ ನ್ಯಗ್ರೋಧ ಪರಿಮಂಡಲ ಸಂಸ್ಥಾನ ನಾಮಕರ್ಮ. ೩ ಸ್ವಾತಿ ಸಂಸ್ಥಾನ ನಾಮಕರ್ಮ. ೪ ಕುಬ್ಜ ಸಂಸ್ಥಾನ ನಾಮಕರ್ಮ ೫ ಹುಂಡ ಸಂಸ್ಥಾನ ನಾಮಕರ್ಮವು, ಎಂದು ೬ ಪ್ರಕಾರವು || ೯. ಅಸ್ತಿ ಬಂಧನ ( ಮೂಳೆಗಳ ಸೇರ್ವಿಕೆ ) ವಿಶೇಷಉಂಟುಮಾಡುವಕರ್ಮಕ್ಕೆ ಸಂಹನನ ನಾಮಕರ್ಮವೆಂದು ಹೆಸರು || ಈ ಸಂಹನನವು. ೧ ವಜ್ರವೃಷಭ ನಾರಾಚ ಸಂಹನನ ನಾಮಕರ್ಮ. ೨ ವಜ್ರನಾರಾಚಸಂಹನನ ನಾಮಕರ್ಮ, ೩ ನಾರಾಚಸಂಹನನ ನಾಮಕರ್ಮ. ೪ ಅರ್ಧ ನಾರಾಚ ಸಂಹನನ ನಾಮಕರ್ಮ. ೫ ಕೀಲಿತ ಸಂಹನನ ನಾಮಕರ್ಮ. ೬ ಅಸಂಪ್ರಾಪ್ತಸೃಪಾಟಿಕ ಸಂಹನನ ನಾಮಕರ್ಮವೆಂದು ಆರು ಪ್ರಕಾರವು || ೧೦. ಯಾವ ಕರ್ಮದಿಂದ ಸ್ಪರ್ಶ ಉಂಟಾಗುತ್ತದೋ ಅದು ಸ್ಪರ್ಶನಾಮಕರ್ಮವು || ಇದು ,೧ ಕರ್ಕಶನಾಮಕರ್ಮ. ೨ ಮೃದುನಾಮಕರ್ಮ. ೩ ಗುರುನಾಮಕರ್ಮ. ೪ ಲಘುನಾಮಕರ್ಮ. ೫ ಸ್ನಿಗ್ಧನಾಮಕರ್ಮ. ೬ ರೂಕ್ಷನಾಮಕರ್ಮ. ೭ ಶೀತನಾಮಕರ್ಮ. ೮ ಉಷ್ಣನಾಮಕರ್ಮವೆಂದು ೮ ಪ್ರಕಾರವು || ೧೧. ಯಾವಕರ್ಮೋದಯದಿಂದ ರುಚಿ ಉಂಟಾಗುತ್ತದೋ ಅದು ರಸನಾಮಕರ್ಮವು || ಅದು ೧ ತಿಕ್ತನಾಮಕರ್ಮ. ೨ ಕಟುನಾಮಕರ್ಮ. ೩ ಕಷಾಯನಾಮಕರ್ಮ. ೪ ಆಮ್ಲನಾಮಕರ್ಮ. ೫ ಮಧುರನಾಮಕರ್ಮ ಎಂದು ೫ ಪ್ರಕಾರವು|| ೧೨. ಯಾವ ಕರ್ಮೋದಯದಿಂದ ಗಂಧ ಉಂಟಾಗುತ್ತದೋ ಅದು ಗಂಧನಾಮ ಕರ್ಮವು. ೧ ಸುರಭಿ ಗಂಧ (ಸುಗಂಧ) ನಾಮ. ೨ ಅಸುರಭಿ ಗಂಧ(ದುರ್ಗಂಧ)ನಾಮ ಎಂದು ೨ ಪ್ರಕಾರವು | ೧೩. ಯಾವಕರ್ಮದಿಂದ

ವರ್ಣವಿಭಾಗ ಉಂಟಾಗುತ್ತದೆಯೋ ಅದು ವರ್ಣನಾಮಕರ್ಮವು|| ಅದು ೧ ಕೃಷ್ಣವರ್ಣ ನಾಮಕರ್ಮ. ೨ ನೀಲವರ್ಣನಾಮ. ೩ ರಕ್ತವರ್ಣ ನಾಮ. ೪ ಹರಿದ್ರವರ್ಣನಾಮ. ಶುಕ್ಲವರ್ಣ ನಾಮಕರ್ಮವೆಂದು ೫ ಪ್ರಕಾರವು ‖ ೧೪, ಯಾವಕರ್ಮೋದಯದಿಂದ ಪೂರ್ವ (ತೈಜಸಕಾರ್ಮಣ) ಶರೀರಾಕಾರವು ನಾಶವಾಗದೇ ಯಿರುತ್ತದೆಯೋ ಆ ಕರ್ಮವು ಆನುಪೂರ್ವ್ಯ ನಾಮಕರ್ಮ ವೆಂಬುವದು ಆಗುತ್ತದೆ. ಇದು ೧ ನಾರಕಗತಿ ಪ್ರಾಯೋಗ್ಯಾನುಪೂರ್ವ್ಯ ನಾಮಕರ್ಮ. ೨ ತಿರ್ಯಗ್ಗತಿ ಪ್ರಾಯೋಗ್ಯಾನುಪೂರ್ವ್ಯ ನಾಮಕರ್ಮ. ೩ ಮನುಷ್ಯಗತಿ ಪ್ರಾಯೋಗ್ಯಾನುಪೂರ್ವ್ಯ ನಾಮಕರ್ಮ. ೪ ದೇವಗತಿಪ್ರಾಯೋಗ್ಯಾನುಪೂರ್ವ್ಯನಾಮಕರ್ಮ. ಇಂತೆಂದು ನಾಲ್ಕು ಪ್ರಕಾರವು ‖ ೧೫ ಯಾವ ಕರ್ಮೋದಯದಿಂದ ಶರೀರ ಯುಕ್ತನಾದಂಥಾ ಜೀವನು ಅಯಃ ಪಿಂಡದೋಪಾದಿಯಲ್ಲಿ ಭಾರವಾಗಿ ಇರುವದರ ದೆಶೆಯಿಂದ ಕೆಳಗೆ ಬೀಳುವದಿಲ್ಲವೋ, ಯಕ್ಕದ ಅರಳೆಯೋಪಾದಿಯಲ್ಲಿ ಲಘುವಾಗಿ ಇರುವದರಿಂದ ಮೇಲಕ್ಕೆ ಹೋಗುವದಿಲ್ಲವೋ ಅದಕ್ಕೆ ಅಗುರುಲಘುನಾಮ ಕರ್ಮವೆಂದು ಹೆಸರು ಬರುತ್ತದೆ ‖ ೧೬. ಯಾವ ಕರ್ಮೋದಯದಿಂದ ತಾನೆಕಂದಕಕ್ಕೆ ಖಮರಿಗೆಬಿಳುವದು ನೇಣಹಾಕಿಕ್ಕೊಳ್ಳುವದು ಇದು ಮೊದಲಾದದ್ದು ಮತ್ತು ತನಗೆ ಉಪದ್ರವಕರವಾಗಿರುವ ಅವಯುವಗಳ ಹೆಚ್ಚಿಗೆ ಅಂದರೆ ಥಪ್ಪವಾಗಿರುವಂಥಾ ಹೊಟ್ಟೆ, ಸ್ತನ ಮೊದಲಾದದ್ದು ಸಹ ಉಪಘಾತ ನಾಮಕರ್ಮವು ‖ ೧೭. ಯಾವ ಕರ್ಮೋದಯದಿಂದ ಇತರರಿಗೆ ಬಾಧಾಕರವಾದ ತೀಕ್ಷ್ಣವಾದ ಕೊಂಬು ಉಗುರುಮೊದಲಾದ ಅವಯುವಗಳುಂಟಾಗುತ್ತದೋ ಅದು ಪರಘಾತನಾಮಕರ್ಮವು ‖ ೧೮. ಯಾವ ಕರ್ಮೋದಯದಿಂದ ಆತಪ ರೂಪವಾದ ಬಿಸಲು ಉಂಟಾಗುತ್ತದೊ ಅದು ಆತಪ ನಾಮಕರ್ಮವು. ಈ ಆತಪವು ಸೂರ್ಯ ವಿಮಾನದಿಂದಲೇ ಬರುತ್ತದೆ ‖ ೧೯. ಯಾವ ಕರ್ಮೋದಯದಿಂದ ಉದ್ಯೋತರೂಪ ಶರೀರ ಉಂಟಾಗುತ್ತದೊ ಅದು ಉದ್ಯೋತ ನಾಮಕರ್ಮವು. ಈ ಉದ್ಯೋತವು ಖದ್ಯೋತ ಮೊದಲಾದ ಜೀವ ಶರೀರದಲ್ಲೂ ಚಂದ್ರವಿಮಾನದಲ್ಲಿಯೂ ಇರುತ್ತದೆ ‖ ೨೦. ಶರೀರದಲ್ಲಿ ಉಚ್ಛ್ವಾಸ ನಿಚ್ಛ್ವಾಸವನ್ನು ಹುಟ್ಟಿಸುವಂಥಾ

ಕರ್ಮವು ಉಚ್ಛ್ವಾಸ ನಾಮಕರ್ಮವು || ೨೧. ಆಕಾಶದಲ್ಲಿ ಸಂಚರಿಸುವದಕ್ಕೆ ಕಾರಣವಾದಂಥಾದ್ದು ವಿಹಾಯೋಗತಿ ನಾಮಕರ್ಮವು. ಅದು ೧ ಪ್ರಶಸ್ತ ವಿಹಾಯೋಗತಿ ನಾಮಕರ್ಮ. ೨ ಅಪ್ರಶಸ್ತ ವಿಹಾಯೋಗತಿ ನಾಮಕರ್ಮವೆಂದು ೨ ಪ್ರಕಾರವು || ೨೨ ಶರೀರನಾಮ ಕರ್ಮೋದಯದಿಂದ ಮಾಡಲ್ಪಟ್ಟಂಥಾ ಒಂದಾತ್ಮನಿಗೆ ಉಪಯೋಗಕ್ಕೆ ಕಾರಣವಾದಂಥಾ ಶರೀರವು ಪ್ರತ್ಯೇಕ ಶರೀರ ನಾಮಕರ್ಮವು || ೨೩. ಅನೇಕವಾದಂಥಾ ಜೀವಗಳಿಗೆ ಸಾಧಾರಣವಾಗಿ ಉಪಭೋಗಕ್ಕೆ ಕಾರಣವಾದಂಥಾ ಶರೀರವು ಸಾಧಾರಣಶರೀರ ನಾಮಕರ್ಮವು || ೨೪. ದ್ವೀಂದ್ರಿಯ ಮೊದಲಾದ ಜಂಗಮಪ್ರಾಣಿಗಳಲ್ಲಿ ಯಾವದರಿಂದ ಜನ್ಮ ಉಂಟಾಗುತ್ತದೋ ಅದು ತ್ರಸನಾಮಕರ್ಮವು || ೨೫. ಏಕೇಂದ್ರಿಯಗಳಾದ ಪೃಥುವ್ಯಪ್ತೇಜೋವಾಯು ವನಸ್ಪತಿ ಕಾಯಗಳಲ್ಲಿ ಯಾವ ನಿಮಿತ್ತದಿಂದ ಉತ್ಪತ್ತಿಯಾಗುತ್ತದೋ ಅದು ಸ್ಥಾವರ ನಾಮಕರ್ಮವು || ೨೬. ಅನ್ಯರಿಗೆ ಪ್ರೀತಿಯನ್ನು ಉಂಟುಮಾಡುವದು ಯಾವಕರ್ಮವೋ ಅದು ಸುಭಗನಾಮಕರ್ಮವು || ೨೭. ರೂಪಾದಿಗಳಿಂದಲಾಗಲಿ ಯಿಲ್ಲದೆಯಾಗಲಿ ಅನ್ಯರಿಗೆ ಅಪ್ರೀತಿಯನ್ನು ಉಂಟುಮಾಡುವದು ಯಾವದೋ ಅದು ದುರ್ಭಗನಾಮಕರ್ಮವು || ೨೮. ಮನೋಜ್ಞವಾದ ಸ್ವರ ಯಾವದರಿಂದ ಉಂಟಾಗುತ್ತದೊ ಅದು ಸ್ವರನಾಮಕರ್ಮವು || ೨೯. ಯಾವ ಸ್ವರ ಅಮನೋಜ್ಞವಾಗುತ್ತದೋ ಅದು ದುಸ್ವರನಾಮಕರ್ಮವು || ೩೦. ಯಾವದರಿಂದ ಮಸ್ತಕಾದ್ಯವಯವಗಳನ್ನು ನೋಡಿದಾಗ್ಯು ಕೇಳಿದಾಗ್ಯು ರಮಣೀಯವಾದಂಥಾದ್ದಾಗುತ್ತಿದೆಯೋ ಅದು ಶುಭನಾಮ ಕರ್ಮವು || ೩೧. ಶುಭನಾಮಕ್ಕೆ ವಿರುದ್ಧವಾದದ್ದು ಅಶುಭ ನಾಮಕರ್ಮವು || ೩೨. ಅನ್ಯಜೀವಗಳ ಉಪಕಾರಕ್ಕು ಅಪಕಾರಕ್ಕೂ ಆಗದೇ ಯಿರುವಂಥ, ಸೂಕ್ಷ್ಮವಾದ ಶರೀರವು ಯಾವದರಿಂದ ಉಂಟಾಗುತ್ತದೋ ಅದು ಸೂಕ್ಷ್ಮನಾಮಕರ್ಮವು || ೩೩. ಅನ್ಯರಿಂದ ಮಾಡಿದ ಬಾಧೆಗಳಿಗೆ ಯೋಗ್ಯವಾದಂಥಾ ಸ್ಥೂಲವಾದ ಶರೀರವು ಯಾವದರಿಂದ ಉಂಟಾಗುತ್ತದೊ ಅದು ಬಾದರ ನಾಮಕರ್ಮವು || ೩೪. ಯಾವ ಕರ್ಮೋದಯದಿಂದ ಆಗತಕ್ಕ ಆಹಾರಾದಿಗಳಿಂದ ಅಂತರ್ಮುಹೂರ್ತದಲ್ಲಿ ಪರ್ಯಾ

ಪ್ತಿಯನ್ನು ಪಡೆಯುತ್ತಿಧೆಯೋ ಅದು ಪರ್ಯಾಪ್ತಿ ನಾಮಕರ್ಮವು ; ಈ ಪರ್ಯಾಪ್ತಿಯು ಆರು ಪ್ರಕಾರವು ‖ ೧ ಆಹಾರಪರ್ಯಾಪ್ತಿ. ೨ ಶರೀರ ಪರ್ಯಾಪ್ತಿ. ೩ ಇಂದ್ರಿಯ ಪರ್ಯಾಪ್ತಿ. ೪ ಪ್ರಾಣಾಪಾನ ಪರ್ಯಾಪ್ತಿ. ೫ ಭಾಷಾ ಪರ್ಯಾಪ್ತಿ. ೬ ಮನಃ ಪರ್ಯಾಪ್ತಿ ‖ ಏಕೇಂದ್ರಿಯಕ್ಕೆ ಆಹಾರ, ಶರೀರ, ಇಂದ್ರಿಯ, ಪ್ರಾಣಾಪಾನ ಎಂಬ ೪ ಪರ್ಯಾಪ್ತಿಗಳು ಆಗುತ್ತವೆ. ದ್ವೀಂದ್ರಿಯ, ತ್ರೀಂದ್ರಿಯ, ಚತು ರಿಂದ್ರಿಯ, ಅಸಂಜ್ಞಿ ಪಂಚೇಂದ್ರಿಯಗಳಿಗೆ ಮನಃ ಪರ್ಯಾಪ್ತಿ ಬಿ ಟ್ಟು ಬಾಕಿ ೫ ಪರ್ಯಾಪ್ತಿಗಳು ಆಗುತ್ತವೆ. ಸಂಜ್ಞಿ ಪಂಚೇಂದ್ರಿ ಯಕ್ಕೆ ಆರು ಪರ್ಯಾಪ್ತಿಗಳು ಉಂಟಾಗುತ್ತದೆ ‖ ೩೫. ಯಾವ ಕರ್ಮೋ ದಯದಿಂದ ಹಿಂದೆ ಹೇಳಿದ ಆರು ಪರ್ಯಾಪ್ತಿಗಳಲ್ಲಿ ಒಂದನ್ನೂ ಪೂರೈಸ ದೇ ಇರುವನೋ ಅದೇಯೇ ಅಪರ್ಯಾಪ್ತಿ ನಾಮಕರ್ಮವು ‖೩೬. ಯಾವಕ ರ್ಮೋದಯದಿಂದ ಇತರರಿಂದ ಮಾಡುವದಕ್ಕೆ ಶಕ್ಯವಿಲ್ಲದ ಉಪವಾಸ ತಪಸ್ಸನ್ನೂ ಮಾಡಿದರೂ ಅಂಗೋಪಾಂಗಗಳಸಪ್ತಧಾತು ಉಪಧಾತುಗ ಳಿಗೆ ಸ್ಥಿರತ್ವ ವುಂಟಾಗಿರುತ್ತದೆಯೊ ಅದು ಸ್ಥಿರನಾಮಕರ್ಮವು‖೩೭. ಯಾ ವಕರ್ಮೋದಯದಿಂದ ಸ್ವಲ್ಪವಾದ ಉಪವಾಸಾದಿಗಳಿಂದಲೂ ಶೀತೋ ಷ್ಣಗಳಿಂದಲೂ ಅಂಗೋಪಾಂಗಗಳಿಗೆ ಕೃಶ ಉಂಟಾಗುತ್ತದೋ ಅದು ಅಸ್ಥಿರನಾಮಕರ್ಮವು ‖ ೩೮. ಯಾವ ಕರ್ಮೋದಯದಿಂದ ಕಾಂತಿಯೊ ಡನೆಕೂಡಿದ ಶರೀರ ಕಾಣುತ್ತಿದೆಯೊ ಅದು ಆದೇಯ ನಾಮಕರ್ಮವು‖ ೩೯. ಯಾವಕರ್ಮೋದಯದಿಂದ ಕಾಂತಿ ಹೀನ ಶರೀರ ಉಂಟಾಗುತ್ತಿದೆ ಯೋ ಅದು ಅನಾದೇಯ ನಾಮಕರ್ಮವು ‖ ೪೦. ಯಾವ ಕರ್ಮೋದಯ ದಿಂದ ಪುಣ್ಯಜನಕ ಗುಣಗಳ ಪ್ರಖ್ಯಾತಿಯು ಉಂಟಾಗುತ್ತದೋ ಅದು ಯಶಃಕೀರ್ತಿ ನಾಮಕರ್ಮವು ‖ ೪೧. ಯಾವದರಿಂದ ಪಾಪಗುಣಗಳ ಪ್ರ ಖ್ಯಾತಿ ಉಂಟಾಗುತ್ತದೋ ಅದು ಅಯಶಃಕೀರ್ತಿ ನಾಮಕರ್ಮವು ‖ ೪೨. ಯಾವಕರ್ಮದಿಂದ ಅಚಿಂತ್ಯವಾದ ಐಶ್ವರ್ಯದೊಡನೆ ಕೂಡಿದ ಆರ್ಹಂ ತ್ಯ ಪದವಿಯು ಉಂಟಾಗುತ್ತದೋ ಅದುತೀರ್ಥಕರ ನಾಮಕರ್ಮವು‖೧೧‖

ಅ ‖ ಗೋತ್ರಕರ್ಮದ ಭೇದಗಳನ್ನು ಹೇಳುತ್ತಾರೆ.

ಸೂ ‖ ಉಚ್ಚೈರ್ನೀಚೈಶ್ಚ ‖ ೧೨ ‖

ಟೀ || ಉಚ್ಚೈಃ - ಉಚ್ಚೈರ್ಗೋತ್ರ ವಿಂತೆಂದು, ನೀಚೈಶ್ಚ - ನೀಚೈರ್ಗೋತ್ರ ವಿಂತೆಂದುಕೂಡ ||.

ತಾ || ಉತ್ತಮ ಸಂತತಿ ( ಜಾತಿ ) ಗಳೆಂತಲೂ, ನೀಚಸಂತತಿ (ಜಾತಿ) ಗಳೆಂತಲೂ ಗೋತ್ರ ಕರ್ಮವು ಏರಡು ಪ್ರಕಾರವು ಆಗುತ್ತದೆ||

ಅ || ಅಂತರಾಯ ಕರ್ಮಭೇದಗಳನ್ನು ಹೇಳುತ್ತಾರೆ.

ಸೂ || ದಾನಲಾಭ ಭೋಗೋಪ ಭೋಗ ವೀರ್ಯಾಣಾಂ ||೧೩||

ಟೀ || ದಾನಲಾಭ ಭೋಗೋಪ ಭೋಗ ವೀರ್ಯಾಣಾಂ - ದಾನ - ಕೊಡುವುದು, ಲಾಭ - ಪಡೆಯುವದು. ಭೋಗ - ಅನ್ನಾದಿಗಳು, ಉಪಭೋಗ - ಸ್ತ್ರೀ ವಸ್ತ್ರಾಭರಣಾದಿಗಳು, ವೀರ್ಯಾಣಾಂ - ಶಕ್ತಿಯು ಯಿವುಗಳಿಗೆ, ವಿಘಾತ ಮಾಡುವಂಥಾ ಕರ್ಮಗಳು ಅಂತರಾಯ ಕರ್ಮ ಪ್ರಕೃತಿಗಳು ||

ತಾ || ೧ ದಾನಾಂತರಾಯ. ೨ ಲಾಭಾಂತರಾಯ. ೩ ಭೋಗಾಂತರಾಯ. ೪ ಉಪ ಭೋಗಾಂತರಾಯ. ೫ ವೀರ್ಯಾಂತರಾಯ ಎಂದು ಅಂತರಾಯಕರ್ಮವು ೫ ಪ್ರಕಾರವು || ೧ ಕೊಡಬೇಕೆಂಬ ಅಪೇಕ್ಷೆ ಯಿದ್ದರೂ ಕೊಡುವದಕ್ಕೆ ಆಗದೇ ಹೋಗುವದು ದಾನಾಂತರಾಯ ಕರ್ಮವು || ೨ ಪಡೆಯಬೇಕೆಂಬ ಅಭಿಲಾಷೆ ಯಿದ್ದರೂ ಪಡೆಯದೇ ಯಿರುವದು ಲಾಭಾಂತರಾಯ ಕರ್ಮವು || ೩ ಗಂಧಮಾಲ್ಯಾದಿಗಳನ್ನು ಭೋಗಿಸುವ ಅಪೇಕ್ಷೆ ಯಿದ್ದರೂ ಅನುಭವಿಸುವದಿಲ್ಲವೋ ಅದು ಭೋಗಾಂತರಾಯವು || ೪ ವಸ್ತ್ರವಾಹನಗಳನ್ನು ಪುನಃ ಪುನಹ ಅನುಭವಿಸುವದಕ್ಕೆ ಇಚ್ಛೆ ಯಿದ್ದರೂ ಅನುಭವಿಸುವದಿಲ್ಲವೋ ಅದು ಉಪಭೋಗಾಂತರಾಯ ಕರ್ಮವು || ೫ ಸರ್ವವನ್ನು ನಿರ್ವಹಿಸಬೇಕೆಂಬ ಇಚ್ಛೆ ಯಿದ್ದರೂ ಅವುಗಳನ್ನು ಮಾಡುವದಕ್ಕೆ ಅಸಮರ್ಥನಾದಂಥಾವನಾಗಿ ಆಗುತ್ತಾನೋ ಅದು ವೀರ್ಯಾಂತರಾಯ ಕರ್ಮವು || ಈವರಿಗೆ ಮೂಲ ಪ್ರಕೃತಿಗಳ ಭೇದಗಳು ಹೇಳಲ್ಪಟ್ಟಿರುತ್ತದೆ || ೧೩ ||

ಅ || ಈ ಕರ್ಮಗಳ ಉತ್ಕೃಷ್ಟ ಸ್ಥಿತಿಯನ್ನು ಹೇಳುತ್ತಾರೆ.

ಸೂ || ಆದಿತಸ್ತಿಸೃಣಾಮಂತರಾಯಸ್ಯ ಚ ತ್ರಿಂಶತ್ಸಾಗರೋಪಮಕೋಟೀಕೋಟ್ಯಃ ಪರಾಸ್ಥಿತಿಃ || ೧೪ ||

ಟೀ ॥ ಆದಿತಃ - ಮೊದಲನೇದರ ದೆಶೆಯಿಂದ, ತಿಸೃಣಾಂ - ಮೂರು ಪ್ರಕೃತಿಗಳಿಗೆ, ಅಂತರಾಯಸ್ಯಚ - ಅಂತರಾಯ ಕರ್ಮಕ್ಕೂ, ಕೂಡ, ಪರಾಸ್ಥಿತಿಃ - ಉತ್ಕೃಷ್ಟಸ್ಥಿತಿಯು (ಆಯುಷ್ಯವು), ತ್ರಿಂಶತ್ಸಾಗರೋಪಮ ಕೋಟೀಕೋಟ್ಯಃ - ಮೂವತ್ತು ಸಾಗರೋಪಮ ಕೋಟಾಕೋಟಿಗಳಾಗುತ್ತವೆ ॥

ತಾ || ೧ ಜ್ಞಾನಾವರಣ, ೨ ದರ್ಶನಾ ವರಣ, ೩ ವೇದನೀಯ. ೪ ಅಂತರಾಯ ಈ ನಾಲ್ಕು ಕರ್ಮಗಳಿಗೂ ಉತ್ಕೃಷ್ಟ ಸ್ಥಿತಿಯು, ಮೂವತ್ತು ಸಾಗರೋಪಮ ಕೋಟಾ ಕೋಟಿಯು ॥ ೧೪ ||

ಅ ॥ ಮೋಹನೀಯಕರ್ಮದ ಉತ್ಕೃಷ್ಟ ಸ್ಥಿತಿಯನ್ನು ಹೇಳುತ್ತಾರೆ.

ಸೂ ॥ ಸಪ್ತತಿ ರ್ಮೋಹನೀಯಸ್ಯ ॥ ೧೫ ॥

ಟೀ || ಮೋಹನೀಯಸ್ಯ - ಮೋಹನೀಯ ಕರ್ಮಕ್ಕೆ, ಸಪ್ತತಿಃ - ಎಪ್ಪತ್ತು ಕೋಟಾಕೋಟಿ ಸಾಗರೋಪಮವು ಉತ್ಕೃಷ್ಟ ಸ್ಥಿತಿಯು || ೧೫ ||

ಅ ॥ ನಾಮ, ಗೋತ್ರ ಕರ್ಮಗಳ ಉತ್ಕೃಷ್ಟಸ್ಥಿತಿಯನ್ನು ಹೇಳುತ್ತಾರೆ

ಸೂ ॥ ವಿಂಶತಿರ್ನಾಮ ಗೋತ್ರಯೋಃ ॥ ೧೬ ||

ಟೀ || ನಾಮ ಗೋತ್ರಯೋಃ - ನಾಮಕರ್ಮ ಗೋತ್ರಕರ್ಮಗಳಿಗೆ, ವಿಂಶತಿಃ-ಇಪ್ಪತ್ತು ಕೋಟಾಕೋಟಿ ಸಾಗರೋಪಮವು ವುತ್ಕೃಷ್ಟಸ್ಥಿತಿಯು ॥

ತಾ ॥ ಜ್ಞಾನಾವರಣ, ದರ್ಶನಾವರಣ, ವೇದನೀಯ, ಅಂತರಾಯ, ಮೋಹನೀಯ, ನಾಮ, ಗೋತ್ರ ಈ ೭ ಕರ್ಮಗಳ ಉತ್ಕೃಷ್ಟಸ್ಥಿತಿಯು ಮಿಥ್ಯಾದೃಷ್ಟಿಯಾಗಿ ಸಂಜ್ಞಿ ಪಂಚೇಂದ್ರಿಯನಾಗಿ ಪರ್ಯಾಪ್ತನಾಗಿ ಇರುವಂಥಾ ಜೀವನಿಗೆ ಉತ್ಕೃಷ್ಟದಲ್ಲಿ ಬರುತ್ತದೆ ॥

ಅ ॥ ಆಯುಷ್ಯಕರ್ಮದ ಉತ್ಕೃಷ್ಟಸ್ಥಿತಿಯನ್ನು ಹೇಳುತ್ತಾರೆ.

ಸೂ || ತ್ರಯಸ್ತ್ರಿಂಶತ್ಸಾಗರೋಪಮಾಣ್ಯಾಯುಷಃ || ೧೭ ||

ಟೀ ॥ ಆಯುಷಃ - ಆಯುಃ ಕರ್ಮದ ಉತ್ಕೃಷ್ಟಸ್ಥಿತಿಯು, ತ್ರಯಸ್ತ್ರಿಂಶತ್ಸಾಗರೋಪಮಾಣಿ - ಮೂವತ್ತು ಮೂರು ಕೋಟಾಕೋಟಿ ಸಾಗರೋಪಮವು ಉತ್ಕೃಷ್ಟಸ್ಥಿತಿಯು ॥ ಇದು ಸಂಜ್ಞಿ

ಪಂಚೇಂದ್ರಿಯ ಪರ್ಯಾಪ್ತಕ ಕರ್ಮಭೂಮಿಗರ್ಭಜ ಪ್ರಾಣಿಗೆ ಆಗುತ್ತಿದೆ ॥ ೧೭ ॥

ಅ ॥ ವೇದನೀಯಕರ್ಮದ ಜಘನ್ಯಾಯುಷ್ಯವನ್ನು ಹೇಳುತ್ತಾರೆ.

ಸೂ ॥ ಅಪರಾದ್ವಾದಶ ಮುಹೂರ್ತಾ ವೇದನೀಯಸ್ಯ ॥ ೧೮ ॥

ಟೀ ॥ ವೇದನೀಯಸ್ಯ - ವೇದನೀಯಕರ್ಮದ, ಅಪರಾ - ಜಘನ್ಯಸ್ಥಿತಿಯು, ದ್ವಾದಶ ಮುಹೂರ್ತಾಃ - ಹನ್ನೆರಡು ಮುಹೂರ್ತಗಳು ॥

ತಾ ॥ ಮುಹೂರ್ತಕ್ಕೆ ೨ ಘಳಿಗೆಯು ಸ್ವಲ್ಪ ಕಡಮೆಯಾದ ಮುಹೂರ್ತಕ್ಕೆ ಅಂತರ್ಮುಹೂರ್ತವೆಂದು ಹೆಸರು ॥ ೧೮ ॥

ಅ ॥ ನಾಮ, ಗೋತ್ರಕರ್ಮಗಳಿಗೆ ಜಘನ್ಯಸ್ಥಿತಿಯನ್ನು ಹೇಳುತ್ತಾರೆ;

ಸೂ ॥ ನಾಮ ಗೋತ್ರಯೋರಷ್ಟೌ ॥ ೧೯ ॥

ಟೀ ॥ ನಾಮಗೋತ್ರಯೋಃ - ನಾಮಕರ್ಮ ಗೋತ್ರಕರ್ಮಗಳಿಗೆ, ಅಷ್ಟೌ - ಜಘನ್ಯಸ್ಥಿಯು ಎಂಟು ಮುಹೂರ್ತವು ॥ ೧೯ ॥

ಅ ॥ ಜ್ಞಾನಾವರಣ, ದರ್ಶನಾವರಣ, ಮೋಹನೀಯ, ಆಯುಷ್ಯ, ಅಂತರಾಯ ಕರ್ಮಗಳ ಜಘನ್ಯಸ್ಥಿತಿಯನ್ನು ಹೇಳುತ್ತಾರೆ.

ಸೂ ॥ ಶೇಷಾಣಾಮಂತರ್ಮುಹೂರ್ತಾ ॥ ೨೦ ॥

ಟೀ ॥ ಶೇಷಾಣಾಂ - ಉಳಿದಜ್ಞಾನಾವರಣೀಯ ದರ್ಶನಾವರಣೀಯ ಮೋಹನೀಯ ಆಯುಷ್ಯ ಅಂತರಾಯಗಳೆಂಬ ಐದು ಕರ್ಮಗಳಿಗೆ, ಅಂತರ್ಮುಹೂರ್ತಾ - ಅಂತರ್ಮುಹೂರ್ತವು ಜಘನ್ಯಸ್ಥಿತಿಯು ಆಗುತ್ತದೆ ॥ ತಾ ॥ ೧ ಜ್ಞಾನಾವರಣೀಯ, ೨ ದರ್ಶನಾವರಣೀಯ, ೩ ಅಂತರಾಯ ಈ ೩ ಕರ್ಮಗಳಿಗೂ ಜಘನ್ಯಸ್ಥಿತಿಯು ಸೂಕ್ಷ್ಮಸಾಂಪರಾಯನಲ್ಲಿ ಆಗುತ್ತದೆ ॥ ಮೋಹನೀಯ ಕರ್ಮದ ಜಘನ್ಯಸ್ಥಿತಿಯು ಅನಿವೃತ್ತಿಬಾದರ ಸಾಂಪರಾಯನಲ್ಲಿ ಆಗುತ್ತದೆ ॥ ಆಯುಷ್ಯ ಕರ್ಮದ ಜಘನ್ಯಸ್ಥಿತಿಯು ಕರ್ಮ ಭೂಮಿಯಲ್ಲಿ ಹುಟ್ಟಿದ ಮನುಷ್ಯ ತಿರ್ಯಂಚ ಪ್ರಾಣಿಗಳಿಗೆ ಆಗುತ್ತಿದೆ ॥ ೨೦ ॥

## ಅನುಭಾಗಾಧಿಕರಣಂ.

ಅ ॥ ಈ ಪ್ರಕೃತಿಗಳ ನುಭಾಗವನ್ನು ಹೇಳುತ್ತಾರೆ.

ಸೂ ॥ ರಸೋಽನುಭಾಗಃ ॥ ೨೧ ॥

Funding: Tattva Heritage Foundation,Kolkata. Digitization: eGangotri.



ಟೀ || ರಸ - ಕರ್ಮಗಳಶಕ್ತಿಯು, ಅನುಭಾಗಃ - ಅನುಭಾಗ ವೆಂಬುವದು ಆಗುತ್ತದೆ || ೨೧ ||

ಅ || ಅನುಭಾಗ ಬಂಧಲಕ್ಷಣವನ್ನು ಹೇಳುತ್ತಾರೆ.

ಸೂ || ವಿಪಾಕೋಽನುಭವಃ || ೨೨ ||

ಟೀ || ವಿಪಾಕಃ - ಜ್ಞಾನಾವರಣೀಯ ಮೊದಲಾದ ಕರ್ಮಗಳ ಫಲವನ್ನು ಕೊಡುವ ಸಾಮರ್ಥ್ಯವು, ಅನುಭವಃ - ಅನುಭಾಗ ಬಂಧವೆಂಬುವದು ಆಗುತ್ತದೆ ||

ತಾ || ಪೂರ್ವೋಕ್ತ ಕಷಾಯಗಳ ತೀವ್ರ - ಮಂದ ಮೊದಲಾದ ಭಾವದಿಂದ ಆದಂಥಾ ಆಸ್ರವ ವಿಶೇಷದಿಂದ ನಾನಾ ಪ್ರಕಾರವಾದ ಕರ್ಮಗಳು ತದನುಸಾರ ಫಲಗಳನ್ನು ಕೊಡುವದು ವಿಪಾಕ ಎಂಬುವದು ಆಗುತ್ತದೆ || ಅಥವಾ ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವ ನಿಮಿತ್ತಗಳಿಂದ ವುಂಟಾದ ನಾನಾಪ್ರಕಾರವಾದ ಕರ್ಮಗಳು ಫಲವನ್ನು ಕೊಡುವದು ವಿಪಾಕವೆಂಬುವದು ಆಗುತ್ತದೆ || ಈ ವಿಪಾಕವೇ ಅನುಭಾಗಬಂಧ ವೆಂತೆಂದು ಹೇಳಲ್ಪಡುತ್ತದೆ || ಇದು ಸ್ವಮುಖ - ಪರಮುಖವೆಂದು ೨ ಭೇದವು || ೨೨ ||

ಅ || ಕರ್ಮಾನುಭವವು ಅನ್ವರ್ಥಸಂಜ್ಞೆಯುಳ್ಳದ್ದೆಂದು ಹೇಳುತ್ತಾರೆ.

ಸೂ || ಸ ಯಥಾನಾಮ || ೨೩ ||

ಟೀ || ಸಃ - ಆ ಅನುಭವವು ( ಅನುಭಾಗಬಂಧವು ), ಯಥಾನಾಮ - ಜ್ಞಾನಾವರಣಾದಿ ಸ್ವಭಾವವು ಹ್ಯಾಗೆ ಯಿಧೆಯೋ ಹಾಗೆ ಆಗುತ್ತಿದೆ || ತಾ || ಜ್ಞಾನಾವರಣೀಯ ಕರ್ಮದ ಫಲವು ಜ್ಞಾನದ ಅಭಾವವು. ಇದೇಪ್ರಕಾರ ಆಯಾಯ ಕರ್ಮಗಳ ಅನ್ವರ್ಥಸಂಜ್ಞಾ (ಹೆಸರಿನ ಸಂಕೇತ) ನಿರ್ದೇಶಾನುಸಾರವಾಗಿ ಆಯಾಯಫಲ ವುಂಟಾಗುತ್ತದೆ|| ೨೩ ||

ಅ || ಅನುಭವದಿಂದ ಉಂಟಾಗುವ ಪ್ರಯೋಜನವನ್ನು ಹೇಳುತ್ತಾರೆ.

ಸೂ || ತತಶ್ಚ ನಿರ್ಜರಾ || ೨೪ ||

ಟೀ || ತತಃ - ಆ ಅನುಭವದದೆಶೆಯಿಂದ, ಚ - ತಪಸ್ಸಿನಿಂದಲೂ, ನಿರ್ಜರಾ - ಪೂರ್ವಾರ್ಜಿತ ಕರ್ಮ ಪರಿತ್ಯಾಗರೂಪ ನಿರ್ಜರೆಯು ಆಗುತ್ತದೆ|| ತಾ || ಆ ಕರ್ಮಗಳು ಸುಖ ದುಃಖ ಮೊದಲಾದ ತಂಮ ಫಲಗ

ಳನ್ನು ಆತ್ಮನಿಗೆ ಕೊಟ್ಟು - ಭೋಜನಮಾಡಿದ ಅಂನಾದಿಗಳ ವಿಕಾರ ದೋಷಾದಿಯಲ್ಲಿ ನಿಸ್ಸಾರಗಳಾದಂಥಾವುಗಳಾಗಿ ಆಗುತ್ತಿವೆ. ತಮ್ಮಸ್ಥಿತಿಗಳ ಕ್ಷಯದಿಂದ ನಿಲ್ಲುವದಕ್ಕೆ ಅವಕಾಶವಿಲ್ಲದೆ ಯಿರುವದ್ದರಿಂದ ತಂಮ ತಂಮ ಫಲಗಳನ್ನು ಕೊಟ್ಟು ನಿಶ್ಶೇಷಗಳಾಗಿ ಜೀರ್ಣಗಳಾಗುತ್ತವೆ || ಅದೇ ನಿರ್ಜರೆ ಯೆಂಬುವದು || ಆ ನಿರ್ಜರೆಯು- ಸವಿಪಾಕ- ಅವಿಪಾಕವೆಂದು ೨ ಭೇದವು || ಸ್ವಭಾವವಾಗಿ ಕರ್ಮಾನುಭವದಿಂದ ಆಗುವ ನಿರ್ಜರೆಯು ೧ ಸವಿಪಾಕ ನಿರ್ಜರೆಯು. ಇದು ಸಮಸ್ತ ಸಂಸಾರಿಜೀವಗಳಿಗೂ ವುಂಟು || ತಪಸ್ಸು ಮೊದಲಾದವುಗಳಿಂದ ಆಗುವ ನಿರ್ಜರೆಯು ೨ ಅವಿಪಾಕ ನಿರ್ಜರೆ ಎಂಬುವದು ಆಗುತ್ತದೆ || ೨೪ ||

## ಪ್ರ ದೇ ಶಾ ಧಿ ಕ ರ ಣಂ.

ಅ || ಪ್ರದೇಶಬಂಧನವನ್ನು ಹೇಳುತ್ತಾರೆ.

ಸೂ || ನಾಮಪ್ರತ್ಯಯಾಃ ಸರ್ವತೋ ಯೋಗವಿಶೇಷಾ ತ್ಸೂಕ್ಷ್ಮೈಕ ಕ್ಷೇತ್ರಾವಗಾಹಸ್ಥಿತಾಃ ಸರ್ವಾತ್ಮಪ್ರದೇಶೇಷ್ವನಂತಾನಂತಪ್ರದೇಶಾಃ || ೨೫ ||

ಟೀ || ನಾಮಪ್ರತ್ಯಯಾಃ - ಶರೀರನಾಮಾದಿ ಕರ್ಮೋದಯ (ಜ್ಞಾನಾವರಣಾದಿ ಕರ್ಮ) ಗಳನ್ನೆ ಕಾರಣವಾಗಿರುವ, ಸರ್ವತಃ - ಸಮಸ್ತ ಭಾಗಗಳಲ್ಲಿಯೂ (ಮೂರುಕಾಲದ ಎಲ್ಲಾಸಮಯದಲ್ಲೂ), ಯೋಗವಿಶೇಷಾತ್ - ಉಪಾತ್ತೈಕಾಂತ ಪರಿಣಾಮಾಭಿಧಾನ ಜಘನ್ಯಮಧ್ಯಮೋತ್ಕೃಷ್ಟ ಯೋಗಭೇದ ದ್ದೆಶೆಯಿಂದ (ಮನೋವಾಕ್ಕಾಯವ್ಯಾಪಾರರೂಪ ವಿಶೇಷದಿಂದ), ಸೂಕ್ಷ್ಮೈಕ ಕ್ಷೇತ್ರಾವಗಾಹಸ್ಥಿತಾಃ- ಸೂಕ್ಷ್ಮ - ಸ್ವಭಾವದಿಂದ ಸಣ್ಣಗಳಾದಂಥಾ, ಏಕ - ಒಂದಾದಂಥ, ಕ್ಷೇತ್ರ - ಕ್ಷೇತ್ರದಲ್ಲಿ, ಅವಗಾಹ - ಇದ್ದುಕೊಂಡು, (ಪ್ರವೇಶಿಸಿ) ಸ್ಥಿತಾಃ = ನಿಶ್ಚಂಚಲವಾದಂಥಾ, (ಕಾರ್ಮಣವರ್ಗಣೆಯ ಪುದ್ಗಲಗಳು) ಸರ್ವಾತ್ಮ ಪ್ರದೇಶೇಷು - ಲೋಕ ಪ್ರಮಿತ ನಿಖಿಲ ಜೀವಪ್ರದೇಶಗಳಲ್ಲಿ, ಅನಂತಾನಂತಪ್ರದೇಶಾಃ - ಒಂದೊಂದು ಜೀವಪ್ರದೇಶಗಳಲ್ಲಿ ಅನಂತಾನಂತ ಪ್ರದೇಶಗಳು ಆಗುತ್ತಿವೆ ||

ತಾ ॥ ಜ್ಞಾನಾವರಣೀಯವೊದಲಾದ ಕರ್ಮಪ್ರಕೃತಿಗಳು ಅನೇಕಭವಗಳಲ್ಲಿ ಮನೋವಚನಕಾಯ ವ್ಯಾಪಾರರೂಪವಾದ. ಯೋಗವಿಶೇಷನಿಮಿತ್ತದಿಂದ, ಸ್ವಭಾವದಿಂದ ಸೂಕ್ಷ್ಮಗಳಾದಂಥಾವುಗಳಾಗಿಯೂ, ಒಂದೊಂದುಕ್ಷೇತ್ರದಲ್ಲಿ ಇರುವಂಥಾವುಗಳಾಗಿಯೂ, ನಿಶ್ಚಲವಾದಂಥಾವುಗಳಾಗಿಯೂ, ಇರುವಂಥಾಪುದ್ಗಲಗಳು ಸಮಸ್ತವಾದ ಆತ್ಮನ ಪ್ರದೇಶಗಳಲ್ಲಿಯೂ ವ್ಯಾಪಿಸಿಕೊಂಡು ಇರುವಂಥಾ ಅನಂತಾನಂತ ಪರಮಾಣುಗಳುಯಿದಾವೆ ॥ ಅಂದರೆ ಆತ್ಮನಿಗೆ ಯೋಗವಿಶೇಷದಿಂದ ಮೂರುಕಾಲದಲ್ಲೂ ಬಂಧನವಾಗುಪ, ಜ್ಞಾನಾವರಣಾದಿಕರ್ಮಪ್ರಕೃತಗಳಿಗೆಕಾರಣಭೂತವು. ಹಾಗೆಆತ್ಮನಸಮಸ್ತ ಪ್ರದೇಶವನ್ನು ಪಡೆದು ಕರ್ಮರೂಪಪರಿಣಾಮಕ್ಕೆ ಯೋಗ್ಯವಾದ ಸೂಕ್ಷ್ಮವಾದ ಮತ್ತು ಯಾವಕ್ಷೇತ್ರದಲ್ಲಿ ಆತ್ಮನು ಇರುವದೋ ಆ ಕ್ಷೇತ್ರವನ್ನು ಅವಗಾಹಮಾಡಿಇರುವನು. ಹಾಗೆಅನಂತಾನಂತಪ್ರದೇಶರೂಪ ಪುದ್ಗಲಸ್ಕಂಧಕ್ಕೆ ಪ್ರದೇಶಬಂಧವೆಂದು ಹೆಸರು ॥ ೨೪ ॥

ಪುಣ್ಯಾಧಿಕರಣಂ.

ಅ ॥ ಪುಣ್ಯಕರ್ಮ ಪ್ರಕೃತಿಗಳನ್ನು ಹೇಳುತ್ತಾರೆ.

ಸೂ ॥ ಸದ್ವೇದ್ಯಶುಭಾಯುರ್ನಾಮಗೋತ್ರಾಣಿ ಪುಣ್ಯಂ ॥ ೨೬ ॥

ಟೀ ॥ ಸದ್ವೇದ್ಯಶುಭಾಯುರ್ನಾಮಗೋತ್ರಾಣಿ - ಸದ್ವೇದ್ಯ-ಸುಖಫಲರೂಪವಾದ ಸಾತಾವೇದನೀಯಕರ್ಮವು, ಶುಭ-ಪ್ರಶಸ್ತವಾದಂಥ, ಆಯುಃ- ಆಯುಷ್ಯವು, ನಾಮ-ನಾಮಕರ್ಮವು, ಗೋತ್ರಾಣಿ-ಗೋತ್ರಕರ್ಮವು ಇವುಗಳು, ಪುಣ್ಯಂ - ಪುಣ್ಯಕರ್ಮವು ಯಿಂತೆಂದು ಹೇಳಲ್ಪಡುತ್ತಿದೆ ॥

ತಾ ॥ ೧ ಸಾತಾವೇದನೀಯ, ೨ ತಿರ್ಯಗಾಯುಷ್ಯ. ೩ ಮನುಷ್ಯಾಯುಷ್ಯ, ೪ ದೇವಾಯುಷ್ಯ, ೫ ಮನುಷ್ಯಗತಿ, ೬ ದೇವಗತಿ, ೭ ಪಂಚೇಂದ್ರಿಯಜಾತಿ, ೧೨ ಪಂಚಶರೀರಗಳು, ೧೫ ಮೂರು ಅಂಗೋಪಾಂಗಗಳು, ೧೬ ಸಮಚತುರಸ್ರ ಸಂಸ್ಥಾನ, ೧೭ ವಜ್ರವೃಷಭನಾರಾಚಸಂಹನನ, ೨೨ ಐದು ಪ್ರಶಸ್ತ ವರ್ಣ, ೨೪ ಎರಡುಗಂಧ. ೩೨ ಎಂಟುಪ್ರಶಸ್ತಸ್ಪರ್ಶ, ೩೩ ಮನುಷ್ಯಗತ್ಯಾನು ಪೂರ್ವ್ಯ-

೩೪ ದೇವಗತ್ಯಾನು ಪೂರ್ವ್ಯ, ೩೫ ಅಗುರು ಲಘು ೩೬ ಪರಘಾತ ೩೭ ಉಛ್ವಾಸ, ೩೮ ಆತಪ, ೩೯ ಉದ್ಯೋತ, ೪೦ ಪ್ರಶಸ್ತವಿಹಾಯೋಗತಿ ೪೧ ತ್ರಸ, ೪೨ ಬಾದರ, ೪೩ ಪರ್ಯಾಪ್ತಿ, ೪೪ ಪ್ರತ್ಯೇಕಶರೀರ, ೪೫ ಸ್ಥಿರ, ೪೬ ಶುಭ, ೪೭ ಸುಭಗ, ೪೮ ಸುಸ್ವರ, ೪೯ ಆದೇಯ, ೫೦ ಯಶಃಕೀರ್ತಿ, ೫೧ ನಿರ್ಮಾಣ, ೫೨ ತೀರ್ಥಕರನಾಮ, ೫೩ ಐದು ಬಂಧನ, ೬೨ ಐದುಸಂಘಾತ, ೬೭ ಐದುಪ್ರಶಸ್ತರಸ, ೬೮ ಪ್ರಶಸ್ತವಾದ ಉಚ್ಛೈರ್ಗೋತ್ರ, ಈ ೬೮ ಪ್ರಕೃತಿಗಳು ಪುಣ್ಯಕರ್ಮಗಳು ॥ ೨೬

## ಪಾ ಪಾ ಧಿ ಕ ರ ಣ ಂ.

ಅ ॥ ಉಳಿದ ಪ್ರಕೃತಿಗಳು ಪಾಪಕರ್ಮಗಳೆಂದು ಹೇಳುತ್ತಾರೆ.

ಸೂ ॥ ಅತೋಽನ್ಯತ್ಪಾಪಂ ॥ ೨೭ ॥

ಟೀ ॥ ಅತಃ-ಈಗಹೇಳಿದ ಪುಣ್ಯಪ್ರಕೃತಿಗಳದೆಶೆಯಿಂದ, ಅನ್ಯತ್-ಇತರವಾದಂಥಾ ಕರ್ಮವು. ಪಾಪಂ-ಪಾಪಕರ್ಮಗಳು ॥

ತಾ ॥ ಜ್ಞಾನಾವರಣೀಯ ಪ್ರಕೃತಿಗಳು ಐದು, ದರ್ಶನಾವರಣೀಯ ಪ್ರಕೃತಿಗಳು ಒಂಭತ್ತು, ಮೋಹನೀಯ ಪ್ರಕೃತಿಗಳು ಇಪ್ಪತ್ತೆಂಟು, ಅಂತರಾಯಪ್ರಕೃತಿಗಳು ಐದು, ನೀಚೈರ್ಗೋತ್ರವೆಂದು ಅಸಾತಾವೇದನೀಯ ನರಕಾಯು ವೆಂದು ॥ ನಾಮಕರ್ಮದಲ್ಲಿ ಹಿಂದಲಸೂತ್ರದಲ್ಲಿಹೇಳಿದವುಗಳುಬಿಟ್ಟು ಬಾಕಿಯಿರುವವುಸಹ ಪಾಪಕರ್ಮಗಳು ಆಗುತ್ತವೆ ॥ ಮತ್ತು ಸ್ಪರ್ಶಾದಿಗಳಲ್ಲಿಕೆಲವು ಅಪ್ರಶಸ್ತವಾಗಿಯು ಇವೆ॥

ಇತಿ ತತ್ವಾರ್ಥಾಧಿಗಮೇ ಮೋಕ್ಷಶಾಸ್ತ್ರೇ ಅಷ್ಟಮೋಽಧ್ಯಾಯಃ.



## ಅಥ ನವಮೋಽಧ್ಯಾಯ ಪ್ರಾರಂಭಃ.

## ಸ ಂ ವ ರಾ ಧಿ ಕ ರ ಣ ಂ.

ಅ ॥ ಸಂವರೆಯನ್ನು ಹೇಳುತ್ತಾರೆ.

ಸೂ ॥ ಆಸ್ರವನಿರೋಧಃ ಸಂವರಃ ॥ ೧ ॥

ಟೀ ॥ ಆಸ್ರವನಿರೋಧಃ - ಆಸ್ರವ- ಹೊಸದಾಗಿಬರುವ ಕರ್ಮವ ನ್ನು, ನಿರೋಧಃ- ತಡೆಯುವವದು, ಸಂವರಃ-ಸಂವರೆಯು ( ಇಂತೆಂದು ಹೇಳಲ್ಪಡುತ್ತದೆ ) ॥

ತಾ ॥ ಮಿಥ್ಯಾದರ್ಶನ ಮೊದಲಾದ ಕರ್ಮಗಳನ್ನು ಬರದಹಾಗೆ ಉಪಾಯದಿಂದ ತಡೆಯುವದು ಯಾವದುಂಟೋ ಅದೇಯೇ ಸಂವರೆ ಯೆಂಬುವದು ॥ ೧ ಭಾವಸಂವರೆ, ೨ ದ್ರವ್ಯಸಂವರೆಎಂದು ಸಂವರೆಯು ೨ ಪ್ರಕಾರವು ಆಗುತ್ತದೆ ॥ ಆತ್ಮನಿಗೆ ದ್ರವ್ಯಾದಿಗಳನ್ನೆ ಕಾರಣವಾಗಿ ವುಳ್ಳಂಥಾ ಭಾವಾಂತರವನ್ನು ಪಡೆಯೋಣವೇ ಸಂಸಾರವೆಂಬುವದು. ಆ ಸಂಸಾರಕ್ಕೆ ನಿಮಿತ್ತವಾದ ಕ್ರಿಯಾಪರಿಣಾಮವನ್ನು ಬಿಡುವದೇ ಭಾವ ಸಂವರೆಯು ॥ ಆ ಭಾವಸಂವರೆ ಪೂರ್ವಕವಾದ ಕರ್ಮಪುದ್ಗಲಗಳು ಬರದಹಾಗೆ ನಿಂತುಯಿರುವದು ದ್ರವ್ಯಸಂವರೆಯೆಂದುಆಗುತ್ತದೆ ॥ ೧ ॥

ಆ ॥ ಸಂವರೆಯಾಗುವದಕ್ಕೆ ಕಾರಣಗಳನ್ನು ಹೇಳುತ್ತಾರೆ.

ಸೂ ॥ ಸಗುಪ್ತಿಸಮಿತಿಧರ್ಮಾನುಪ್ರೇಕ್ಷಾಪರೀಷಹಜ ಯಚಾರಿತ್ರೈಃ ॥ ೨ ॥

ಟೀ ॥ ಗುಪ್ತಿಸಮಿತಿಧರ್ಮಾನುಪ್ರೇಕ್ಷಾ ಪರೀಷಹಜಯಚಾರಿ ತ್ರೈಃ - ಗುಪ್ತಿ-ತ್ರಿಗುಪ್ತಿಯು, ಸಮಿತಿ-ಪಂಚಸಮಿತಿಯು, ಧರ್ಮ- ದಶಧರ್ಮವು, ಅನುಪ್ರೇಕ್ಷಾ-ದ್ವಾದಶಾನು ಪ್ರೇಕ್ಷೆಯು, ಪರೀಷಹಜ ಯ - ದ್ವಾವಿಂಶತಿ ಪರೀಷಹಜಯವು, ಚಾರಿತ್ರೈಃ- ಪಂಚಚಾರಿತ್ರವು ಇವುಗಳಿಂದ, ಸಃ- ಆ ಸಂವರೆಯು ಆಗುತ್ತದೆ ||

ತಾ || ಸಂಸಾರಕ್ಕೆ ಕಾರಣಗಳಾದ ಯಥೇಷ್ಟವಾದ ಮನೋ ವಚನಕಾಯವ್ಯಾಪಾರಗಳನ್ನು ಪರಿಹರಿಸಿ ಆತ್ಮನನ್ನು ರಕ್ಷಿಸುವದು ಗುಪ್ತಿಯೆಂಬುವದು || ಅನ್ಯಪ್ರಾಣಿಗಳಿಗೆ ತನ್ನಿಂದ ಉಂಟಾಗುವಬಾಧೆ ಯನ್ನು ಪರಿಹರಿಸಬೇಕೆಂಬುವ ಯಿಚ್ಛೆಯಿಂದ ಮಾರ್ಗಮೊದಲಾದವುಗ ಳಲ್ಲಿ ಚಂದಾಗಿನೋಡಿನಡೆಯುವದು ಸಮಿತಿಯೆಂಬುವದು || ತನಗೆ ಯಿಷ್ಟವಾದಂಥಾ ನರೇಂದ್ರ ಸುರೇಂದ್ರ ಮುನೀಂದ್ರರು ಮೊದಲಾದ ಸ್ಥಾನದಲ್ಲಿ ಆತ್ಮನನ್ನುಯಿರಿಸುವಂಥಾದ್ದು ಯಾವದೋ ಅದೇಯೇಧರ್ಮ ವೆಂಬುವದು ॥ ಶರೀರಮೊದಲಾದವುಗಳ ಸ್ವಭಾವವನ್ನು ಆತ್ಮನ ಸ್ವ

ರೂಪವನ್ನು ಚಿಂತಿಸುವದು ಅನುಪ್ರೇಕ್ಷೆಯೆಂಬುವದು ॥ ಕ್ಷುತ್ಪಿಪಾಸವೊದಲಾದ ಪರೀಷಹಗಳನ್ನು ಜಯಿಸುವದು ಪರೀಷಹಜಯವೆಂಬುವದು ॥ ಸಂಸಾರಪರಿಭ್ರಮಣಕ್ಕೆ ಕಾರಣವಿಲ್ಲದ ನಡತೆಯನ್ನು ನಡೆಸುವದು ಚಾರಿತ್ರವು ॥ ಈ ೬ ರಿಂದ ಸಂವರೆಯಾಗುತ್ತದೆ ॥ ೨ ॥

ಅ ॥ ತಪಸ್ಸಿನಿಂದಲೂ ಸಂವರೆಯಾಗುತ್ತೆಂದು ಹೇಳುತ್ತಾರೆ.

ಸೂ ॥ ತಪಸಾ ನಿರ್ಜರಾ ಚ ॥ ೩ ॥

ಟೀ ॥ ತಪಸಾ-ಅನಶನವೊದಲಾದ ತಪಸ್ಸಿನಿಂದ, ನಿರ್ಜರಾ- ಕರ್ಮಗಳ ನಿರ್ಜರೆಯು ಉಂಟಾಗುತ್ತಾ ಇದೆ, ಚ - ಚ ಶಬ್ದದಿಂದ ಪೂರ್ವೋಕ್ತವಾದ ಸಂವರೆಯು ಆಗುತ್ತಾ ಇದೆ ॥

ತಾ ॥ ತಪಸ್ಸಿನಿಂದ ಕರ್ಮಗಳ ಏಕದೇಶಕ್ಷಯರೂಪವಾದ ನಿರ್ಜರೆಯು ಆಗುವದಲ್ಲದೆ ಸಂವರೆಯೂಸಹ ಆಗುತ್ತದೆ ॥ ತಪಸ್ಸುಸಂವರೆಗೂ ನಿರ್ಜರೆಗೂ ಕಾರಣವಾಗುವದ್ದರಿಂದ ಸಂವರೆಗೆ ಹೇತುವಾದಂಥಾಗುಪ್ತಿವೊದಲಾದ ಸಮಸ್ತದಲ್ಲಿಯೂ ತಪಸ್ಸೆ ಪ್ರಧಾನವೆಂತೆಂದು ಸೂಚಿಸುವದಕ್ಕೋಸ್ಕರ ತಪಸಾನಿರ್ಜರಾಚ ಇಂತೆಂದು ಭಿನ್ನವಾಗಿ ಸೂತ್ರವನ್ನು ಹೇಳಿದರು ॥ ೩ ॥—

## ಗುಪ್ತ್ಯಧಿಕರಣಂ.

ಅ ॥ ಗುಪ್ತಿಯ ಲಕ್ಷಣವನ್ನು ಹೇಳುತ್ತಾರೆ.

ಸೂ ॥ ಸಮ್ಯಗ್ಯೋಗನಿಗ್ರಹೋ ಗುಪ್ತಿಃ ॥ ೪ ॥

ಟೀ ॥ ಸಮ್ಯಗ್ಯೋಗನಿಗ್ರಹಃ - ಸಮ್ಯಕ್- ಚಂದಾಗಿ, ಯೋಗ-ಮನೋವಾಕ್ಕಾಯ ವ್ಯಾಪಾರಗಳನ್ನು, ನಿಗ್ರಹಃ-ತಂತಮ್ಮ ವಿಷಯಗಳ ಕಡೆ ಹೋಗದಂತೆಮಾಡುವದು, ಗುಪ್ತಿಃ - ಗುಪ್ತಿಯೆಂಬುವದು ಆಗುತ್ತದೆ ॥

ತಾ ॥ ೧ ಮನೋಗುಪ್ತಿ, ೨ ವಚನಗುಪ್ತಿ ೩ ಕಾಯಗುಪ್ತಿ ಎಂದು ಗುಪ್ತಿಯು ೩ ಪ್ರಕಾರವು ॥ (೧) ಕಣ್ಣಿಂದನೋಡದೆ ಮೃದುವಾದವಸ್ತುಗಳಿಂದ ಗುಡಿಸದೇಯಿರುವ ಭೂಮಿಯಲ್ಲಿ ಸ್ವಾತಂತ್ರೀಯವಾಗಿ ತಿರುಗುವದು ಪದಾರ್ಥಗಳನ್ನು ಇಡುವದು ವೊದಲಾದ ವ್ಯಾಪಾರಗಳನ್ನುಬಿಟ್ಟು ಪ್ರಮಾದವಿಲ್ಲದವನಾಗಿ ಕಾಯವ್ಯಾಪಾರಗ

ಳನ್ನು ನಿಗ್ರಹಿಸುವದೇ ಕಾಯಗುಪ್ತಿಯೆಂಬುವದು || (೨) ನಿಸ್ಸಾರ ವಾಗಿಯೂ ಅಪ್ರಿಯವಾಗಿಯೂ ಇರುವ ವಚನಗಳನ್ನು ಬಿಟ್ಟು ಪ್ರಮಾದರಹಿತನಾದಂಥಾವನಾಗಿ ಸ್ವಾತಂತ್ರವಿಲ್ಲದಹಾಗೆ ವಾಗ್ವ್ಯಾಪಾರಗಳನ್ನು ನಿಗ್ರಹಿಸುವದೇ ವಾಗ್ಗುಪ್ತಿಯೆಂಬುವದು || (೩) ಅತೀತಾನಾಗತವಿಷಯಾಭಿಲಾಷೆಯಿಂದ ಉಂಟಾದ ಮಾನಸಿಕವ್ಯಾಪಾರಗಳನ್ನು ಬಿಟ್ಟು ಜಾಗರೂಕನಾಗಿ ಮನೋವ್ಯಾಪಾರಗಳನ್ನು ಸದ್ಭಾವನೆಯಲ್ಲೇ ನಿಗ್ರಹಿಸಿ ನಿಲ್ಲಿಸುವದು ಮನೋಗುಪ್ತಿಯೆಂಬುವದು || ೪ ||

## ಸ ಮಿ ತ್ಯ ಧಿ ಕ ರ ಣ ಂ.

ಅ || ಸಮಿತಿಯ ಲಕ್ಷಣವನ್ನು ಹೇಳುತ್ತಾರೆ.

ಸೂ || ಈರ್ಯಾಭಾಷೈಷಣಾದಾನನಿಕ್ಷೇಪೋತ್ಸರ್ಗಾಃ ಸಮಿತಯಃ || ೫ ||

ಟೀ || ಸಮ್ಯಕ್ ಎಂಬಪದವನ್ನು ಹಿಂದಲಸೂತ್ರದಿಂದ ಅನುವೃತ್ತಿ ಮಾಡಿಕೊಳ್ಳಬೇಕು || ಸಮ್ಯಕ್=ಚಂದಾಗಿ, ಈರ್ಯಾಭಾಷೈಷಣಾದಾನನಿಕ್ಷೇಪೋತ್ಸರ್ಗಾಃ - ಈರ್ಯಾ-ಜೀವಗಳಿಗೆ ಭಾಧೆಯಾಗದಹಾಗೆ ಬೆಳಕಿನಲ್ಲಿ ನೋಡಿನಡೆಯುವದು, ಭಾಷಾ-ಹಿತವು ಪರಿಮಿತವು ನಿರ್ಣಯವುಳ್ಳದ ಮಾತನಾಡುವದು, ಏಷಣಾ- ಜ್ಞಾನ ಸಂಯಮ ತಪೋನಿಮಿತ್ತವಾಗಿ ಇತರರಿಂದ ಕೊಡಲ್ಪಡುವ ಪ್ರಶಸ್ತವಾದ ಪ್ರಾಸುಕಾಹಾರವನ್ನು ಪ್ರೀತಿ ದ್ವೇಷ ಇಲ್ಲದೇ ತೆಗದುಕೊಳ್ಳುವದು,ಆದಾನನಿಕ್ಷೇಪಣ- ಪ್ರಾಣಿಗಳಿಗೆ ಬಾಧೆಯಾಗದಹಾಗೆ ಪ್ರಯತ್ನದಿಂದ ಧರ್ಮಸಂಬಂಧ ಉಪಕರಣಗಳನ್ನು ತೆಗೆಯುವದು ಇಡುವದು, ಉತ್ಸರ್ಗಃ-ಪ್ರಾಣಿಗಳಿಗೆ ಬಾಧೆಯಾಗದಹಾಗೆ ನೋಡಿಮಲಮೂತ್ರಾದಿಗಳನ್ನು ಬಿಡುವದು ಎಂಬುವ ೫ ಗಳು, ಸಮಿತಯಃ - ಪ್ರಾಣಿಪೀಡಾಪರಿಹಾರಕ್ಕೆ ಉಪಾಯಗಳಾದಂಥಾ ಸಮಿತಿಗಳು ||

ತಾ || ೧ ಯತಿಯು ಸೂರ್ಯೋದಯದ ಬೆಳಕಿನಿಂದ ಚಂದಾಗಿ ಕಾಣುವಹಾಗೆ ಆಪಮೇಲೆ ಮನುಷ್ಯಾದಿಗಳು ಸಂಚಾರಮಾಡಿರುವದರಿಂದ ಇಬ್ಬನಿ ಮೊದಲಾದವುಗಳು ಹೋದಮಾರ್ಗದಲ್ಲಿ, ಮನಸ್ಸನ್ನು ಮತ್ತೊಂದು ಪದಾರ್ಥದಲ್ಲಿ ಇಡದೆ ಮೆಲ್ಲಮೆಲ್ಲಗೆ ಕಾಲುಗಳನ್ನು ಇಟ್ಟು

ಯುಗಪ್ರಮಾಣವುುಂಡುಗಡೆ ದಾರಿಯನ್ನನೋಡುತ್ತಾ ಜಾಗರೂಕನಾಗಿ ನಡೆಯುವದಕ್ಕೆ ಈರ್ಯಾಸಮಿತಿಎಂದು ಹೆಸರು || ೨ ಮೋಕ್ಷಕ್ಕೆ ಹೋಗುವದಕ್ಕೆ ಸಾಧಕವಾದ ಮಾತು ಹಿತವೆಂಬುವದು, ಇದಕ್ಕೆ ವಿರುದ್ಧವಾದದ್ದು ಅಹಿತವೆಂಬುದು, ಇದು ಸ್ವನಿಮಿತ್ತ ಪರನಿಮಿತ್ತಎಂದು ೨ ಪ್ರಕಾರವು, ಪ್ರಯೋಜನಕರವಾಗಿಯೂ, ನಿಸ್ಸಾರವಾದ ಬಹುಮಾತುಗಳು ಯಿಲ್ಲದೇನೂ ಯಿರುವವಚನವು ಮಿತವೆಂಬುವದು. ಸರಳವಾದ ಅಭಿಪ್ರಾಯವುಳ್ಳ ವ್ಯಕ್ತವಾದ ಅಕ್ಷರಗಳುಳ್ಳಂಥ ವಚನವು ಅಸಂದಿಗ್ಧವೆಂಬುವದು. ಹಿತ, ಮಿತ, ಅಸಂದಿಗ್ಧಗಳಾಗಿರುವ ಪರಮಾಗಕ್ಕೆ ಅನುಸಾರವಾಗಿರುವ ವಚನಗಳನ್ನು ಅಸತ್ಯ, ಭ್ರಾಂತಿ, ಮಾತ್ಸರ್ಯ, ಅಪ್ರಿಯ, ಕಷಾಯಯುಕ್ತ, ಪರಿಹಾಸಯುಕ್ತ, ದೇಶವಿರೋಧಿ, ಕಾಲವಿರೋಧಿ, ಅತಿಸ್ತುತಿ, ಇವೇಮೊದಲಾದ ವಾಗ್ದೋಷಗಳನ್ನುಬಿಟ್ಟು ಧರ್ಮಾರ್ಥವಾಗಿ ಆಡುವಮಾತು ಭಾಷಾಸಮಿತಿಯು || ೩. ಸಮ್ಯಗ್ದರ್ಶನವೇಮೊದಲಾದ ಗುಣಗಳೆಂಬರತ್ನಸಮೂಹವನ್ನು ಶರೀರವೆಂಬ ಭಂಡಿಯಮೇಲೆಹಾಕಿಕೊಂಡು ಸಮಾಧಿಯೆಂಬಪಟ್ಟಣಕ್ಕೆ ಹೋಗುವದಕ್ಕೆ ಅಪೇಕ್ಷಿಸುವ ಯತಿಯು ಭಂಡಿಯಅಚ್ಚಿಗೆ ಕಪ್ಪುಹಾಕುವದರೋಪಾದಿಯಲ್ಲಿ ಶರೀರಧಾರಣಮಾಡುವದಕೋಸ್ಕರ ಉದರಾಗ್ನಿ ದಾಹೋಪಶಮನಿಮಿತ್ತವಾಗಿ ಸ್ವೀಕರಿಸದೇಯಿರುವನಾಗಿ, ದೇಶಕಾಲವಿಧಿ ಸಾಮರ್ಥ್ಯಗಳೊಡನೆಕೂಡಿದ ನಿರ್ದೋಷವಾದ ಅನ್ನಾದಿಗಳನ್ನು ಕೇವಲಶರೀರಧಾರಣಾರ್ಥವಾಗಿ ಸ್ವೀಕರಿಸುವದು ಏಷಣಾಸಮಿತಿಎಂಬುವದು || ೪. ಧರ್ಮವಿರುದ್ಧವಿಲ್ಲದೆ ಜ್ಞಾನವೊದಲಾದವುಗಳಿಗೆ ಸಾಧನಗಳಾದ ಪುಸ್ತಕ, ಮೊದಲಾದ ದ್ರವ್ಯಗಳನ್ನು ಭೂಮಿಯಿಂದ ಕೈಗೆತೆಗೆದುಕೊಳ್ಳುವಾಗಲೂ ಭೂಮಿಯಮೇಲೆ ಇರಿಸುವಾಗಲೂ ಕಣ್ಣಿಂದ ನೋಡಿ ಮೃದುವಾದ ಉಪಕರಣದಿಂದಗುಡಿಸಿ ಪ್ರವರ್ತಿಸುವದು ಆದಾನನಿಕ್ಷೇಪಣ ಸಮಿತಿಯೆಂಬುವದು || ೫. ಸ್ಥಾವರಜಂಗಮರೂಪಗಳಾದ ಪ್ರಾಣಿಗಳಿಗೆ ವಿರೋಧವಿಲ್ಲದಹಾಗೆ ಮಲಮೂತ್ರಗಳನ್ನು ಬಿಡುವದು ತಮ್ಮ ಶರೀರವನ್ನು ಭೂಮಿಯಲ್ಲಿ ಇರಿಸುವದು ಇದುಮೊದಲಾದದ್ದು ಉತ್ಸರ್ಗಸಮಿತಿಎಂಬುವದು ಆಗುತ್ತದೆ || ೫ ||

## ಧ ರ್ಮಾ ಧಿ ಕ ರ ಣ ಂ.

ಅ ॥ ಪ್ರಮಾದಗಳನ್ನು ಪರಿಹರಿಸುವದಕ್ಕೆ ದಶಧರ್ಮಗಳನ್ನು ಹೇಳುತ್ತಾರೆ.

ಸೂ ॥ ಉತ್ತಮಕ್ಷಮಾಮಾರ್ದವಾರ್ಜವಶೌಚ ಸತ್ಯಸಂ ಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಾಣಿಧರ್ಮಃ ॥

ಟೀ ॥ ಉತ್ತಮ ಕ್ಷಮಾ ಮಾರ್ದವಾರ್ಜವಶೌಚ ಸತ್ಯಸಂಯಮ ತಪಸ್ತ್ಯಾಗಾ ಕಿಂಚನ್ಯ ಬ್ರಹ್ಮಚರ್ಯಾಣಿ – ಉತ್ತಮ – ಖ್ಯಾತಿಪೂಜಾದಿಗಳ ಅಪೇಕ್ಷೆ ಯಿಲ್ಲದ್ದರಿಂದ ಉತ್ತಮವಾದಂಥ, ಕ್ಷಮಾ - ಸೈರಿಣೆಯು, ಮಾರ್ದವ - ಜಾತ್ಯಾದಿ ಮದವಿಲ್ಲದೇ ಯಿರುವದು, ಆರ್ಜವ- ಮಾಯೆಯಿಲ್ಲದೇ ಯಿರುವದು, ಶೌಚ - ಹೆಚ್ಚು ಲೋಭವಿಲ್ಲದೇ ಯಿರುವದು, ಸತ್ಯ - ಸತ್ಪುರುಷರಲ್ಲಿ ಒಳ್ಳೇಮಾತುಗಳಾಡುವದು, ಸಂಯಮ - ಇಂದ್ರಿಯವಿಷಯಗಳನ್ನು ತ್ಯಾಗಮಾಡುವದು, ತಪಃ - ಕರ್ಮ ಕ್ಷಯಾರ್ಥವಾಗಿ - ಶರೀರ, ಇಂದ್ರಿಯಗಳ ಅಹಂಕಾರವನ್ನು ಕೆಡಿಸುವ ನಡವಳಿಕೆಯು, ತ್ಯಾಗ – ಸಂಯಮಿಗೆ ಯೋಗ್ಯವಾದದ್ದನ್ನು ಕೊಡುವದು ಮತ್ತು ಪರಿಗ್ರಹವನ್ನು ಬಿಡುವದು, ಆಕಿಂಚನ್ಯ- ಶರೀರಾದಿಗಳಲ್ಲಿ ಮಮತ್ವವಿಲ್ಲದೇ ಯಿರುವದು, ಬ್ರಹ್ಮಚರ್ಯಾಣಿ - ಅತೀಚಾರವಿಲ್ಲದ ಬ್ರಹ್ಮಚರ್ಯವು ಇವುಗಳು, ಧರ್ಮಃ - ಧರ್ಮವು ॥

ತಾ ॥ ೧ ಉತ್ತಮ ಕ್ಷಮಾ. ೨ ಉತ್ತಮಮಾರ್ದವ. ೩ ಉತ್ತಮ ಆರ್ಜವ. ೪ ಉತ್ತಮಶೌಚ. ೫ ಉತ್ತಮಸತ್ಯ. ೬ ಉತ್ತಮಸಂಯಮ. ೭ ಉತ್ತಮ ತಪಸ್ಸು. ೮ ಉತ್ತಮತ್ಯಾಗ. ೯ ಉತ್ತಮ ಆಕಿಂಚನ್ಯ. ೧೦ ಉತ್ತಮಬ್ರಹ್ಮಚರ್ಯ - ಈ ೧೦ ದಶಧರ್ಮಗಳು ॥ ೧. ಆಹಾರಾದಿಗಳಿಗೆ ಹೋಗುವ ಯತಿಯನ್ನು ಕುರಿತು ದುಷ್ಟಜನರು ಅವಮಾನ, ಹಾಸ್ಯ, ಉಪದ್ರವ, ಬೈಗಳು ಮೊದಲಾದ್ದನ್ನು ಮಾಡಿದರು ಆ ಕಾರಣದಿಂದ ತನ್ನ ಮನಸ್ಸಿನಲ್ಲಿ ಕ್ರೋಧಾದಿ ಕಾಲುಷ್ಯ ಪರಿಣಾಮ ಮಾಡದೆ ಯಿರುವದೇ ಉತ್ತಮ ಕ್ಷಮೆಯು ॥ ೨. ಉತ್ತಮವಾದ, ಜಾತಿ, ಕುಲ, ರೂಪು, ವಿಜ್ಞಾನ, ಐಶ್ವರ್ಯ, ಶ್ರುತ, ಲಾಭ, ವೀರ್ಯ ಮೊದಲಾದವುಗಳುಳ್ಳಂಥಾವನಾದಾಗ್ಯೂ, ಯತಿಯು ಇವುಗಳಲ್ಲಿ ಗರ್ವವಿಲ್ಲದವನಾಗಿ ಇತರರ ತಿರಸ್ಕಾರದಲ್ಲಿ ಅಭಿಮಾನ ಇಲ್ಲದೇ ಇರುವದೇ ಉತ್ತ

ಮಮಾರ್ದವಯೆಂಬುವದು || ೩. ಮಾನೋವಾಕ್ಕುಗಳಲ್ಲಿ ಕುಟಿಲಭಾವಗಳು ಇಲ್ಲದೇ ಸರಳವಾಗಿ ನಡೆಯುವದೇ ಉತ್ತಮ ಆರ್ಜವವು || ೪. ವಿಶೇಷವಾಗಿ ಲೋಭಕಷಾಯವನ್ನು ಬಿಡುವದು ಉತ್ತಮ ಶೌಚವು || ೫. ಪ್ರಶಸ್ತವಾದ ಜನಗಳಲ್ಲಿ ಒಳ್ಳೆ ಮಾತನಾಡುವದು ಉತ್ತಮ ಸತ್ಯವೆಂಬುವದು ಆಸತ್ಯವು ಹತ್ತು ಪ್ರಕಾರವು. ೧ ಜಿನಪದಸತ್ಯ. ೨ ಸಂಸ್ಕೃತಿ ಸತ್ಯ. ೩ ಸ್ಥಾಪನಾ ಸತ್ಯ. ೪ ನಾಮ ಸತ್ಯ. ೫ ರೂಪ ಸತ್ಯ. ೬ ಪ್ರತಿತ್ಯ ಸತ್ಯ. ೭ ವ್ಯವಹಾರ ಸತ್ಯ. ೮ ಸಂಭಾನಾ ಸತ್ಯ. ೯ ಭಾವ ಸತ್ಯ. ೧೦ ಉಪಭಾವ ಸತ್ಯ ಎಂದು ಸತ್ಯವಚನವು ೧೦ ಪ್ರಕಾರವು || ೬. ಸಂಯಮವು. ೧ ಪ್ರಾಣಿಸಂಯಮ. ೨ ಇಂದ್ರಿಯ ಸಂಯಮ ವೆಂದು ೨ ಪ್ರಕಾರವು || ಯತಿಯು ಏಕೇಂದ್ರಿಯ ಮೊದಲಾದ ಪ್ರಾಣಿಗಳ ಪೀಡೆಯನ್ನು ಪರಿಹರಿಸುವದು ಪ್ರಾಣಿ ಸಂಯಮವೆಂಬುವದು || ಇಂದ್ರಿಯ ವಿಷಯವಾದ ಭೋಗೋಪ ಭೋಗ ವಸ್ತುಗಳಲ್ಲಿ ಅಭಿಲಾಷೆ ಇಲ್ಲದೇ ಯಿರುವದೇ ಇಂದ್ರಿಯ ಸಂಯಮ ವೆಂಬುವದು ಆಗುತ್ತದೆ || ಆ ಸಂಯಮ ಪ್ರತಿಪಾಲನಾರ್ಥವಾಗಿ ಎಂಟು ಶುದ್ಧಿಗಳು ಬೇಕು. ಯಾವವೆಂದರೆ ೧ ಭಾವಶುದ್ಧಿ. ೨ ಕಾಯಶುದ್ಧಿ. ೩. ವಿನಯ ಶುದ್ಧಿ. ೪ ಈರ್ಯಾಪಥಶುದ್ಧಿ. ೫ ಭಿಕ್ಷಾಶುದ್ಧಿ. ೬ ಪ್ರತಿಷ್ಠಾಪನಾ ಶುದ್ಧಿ. ೭ ಶಯನಾಸನಶುದ್ಧಿ. ೮ ವಾಕ್ಯಶುದ್ಧಿ || ೭. ಕರ್ಮಕ್ಷಯ ನಿಮಿತ್ತವಾಗಿ ಕಾಯಕ್ಲೇಶ ಮಾಡುವದು ಉತ್ತಮ ತಪಸ್ಸು. ಆ ತಪಸ್ಸು ಹನ್ನೆರಡು ಪ್ರಕಾರವು ಅದನ್ನು ಮುಂದೆ ಹೇಳುತ್ತಾರೆ || ೮. ಯತಿಗೆ ಯೋಗ್ಯವಾದ ಜ್ಞಾನ ಮೊದಲಾದವುಗಳನ್ನು ಕೊಡುವದು ಅಥವಾ ಚೇತನಾ ಚೇತನಗಳಾದ ಪರಿಗ್ರಹವನ್ನು ಬಿಡುವದು ಉತ್ತಮ ತ್ಯಾಗವು || ೯ ಶರೀರ ಮೊದಲಾದ ವಸ್ತುಗಳಲ್ಲಿ ಮಮತ್ವ ಪೂರ್ವಕವಾದ ಅಭಿಲಾಷೆಯಿಲ್ಲದೆ ಯಿರುವದು ಉತ್ತಮ ಆಕಿಂಚಿನ್ಯವು || ೧೦ ಅನುಭವಿಸಿದ್ದ ಸ್ತ್ರೀಯರ ಸ್ಮರಣೆ ಸ್ತ್ರೀಯರೊಡನೆಮಾತು ಅವರ ಸಂಬಂಧವಾದ ಶಯನ ಆಸನಗಳು ಮೊದಲಾದವುಗಳನ್ನು ಬಿಡುವದು ಮತ್ತು ಅಸ್ವಾತಂತ್ರ ನಿಮಿತ್ತವಾಗಿ ತನ್ನ ಆತ್ಮನಲ್ಲಿಯೂ ಗುರುವಿನಲ್ಲಿಯೂ ವರ್ತಿಸುವದು ಉತ್ತಮ ಬ್ರಹ್ಮಚರ್ಯವು ಎಂಬುವದು ಇವೇ ದಶ ಧರ್ಮಗಳು ||೬||

## ಅನುಪ್ರೇಕ್ಷಾಧಿಕರಣಂ

ಅ॥ ಪರಧರ್ಮ ಧೃಡವಾಗುವದಕ್ಕಾಗಿ ಅನುಪ್ರೇಕ್ಷೆಯನ್ನು ಹೇಳುತ್ತಾರೆ.

ಸೂ॥ ಅನಿತ್ಯಾ ಶರಣಸಂಸಾರೈಕತ್ವಾ ನ್ಯತ್ವಾಶುಚ್ಯಾಸ್ರವ ಸಂವರನಿರ್ಜರಾಲೋಕ ಬೋಧಿದುರ್ಲಭಧರ್ಮ ಸ್ವಾಖ್ಯಾ ತತ್ವಾನುಚಿಂತನ ಮನುಪ್ರೇಕ್ಷಾಃ ॥ ೭ ॥

ಟೀ ॥ ಅನಿತ್ಯಾಶರಣಸಂಸಾರೈಕತ್ವಾ ನ್ಯತ್ವಾಶುಚ್ಯಾಸ್ರವ ಸಂವರನಿರ್ಜರಾಲೋಕ ಬೋಧಿ ದುರ್ಲಭಧರ್ಮಸ್ವಾಖ್ಯಾ ತತ್ವಾನು ಚಿಂತನಂ - ಅನಿತ್ಯ - ಆತ್ಮನ ಜ್ಞಾನದರ್ಶನೋಪ ಯೋಗಗಳನ್ನುಬಿಟ್ಟು ಉಳಿಪ ಶರೀರ, ಇಂದ್ರಿಯ ವಿಷಯಕವಾದ ಭೋಗೋಪ ಭೋಗ ದ್ರವ್ಯಗಳು ಎಲ್ಲವು ನೀರಿನ ಗುಳ್ಳೆಯಂತೆ ನಾಶವಾಗತಕ್ಕವು ನಿತ್ಯವಲ್ಲವು, (ಎಂದು ಚಿಂತಿಸುವದು ಅನಿತ್ಯಾನುಪ್ರೇಕ್ಷೆಯು), ಅಶರಣ - ಸಂಸಾರದುಃಖದಿಂದ ಪೀಡಿತವಾದ ಜೀವಕ್ಕೆ ಧರ್ಮ ಒಂದು ವಿನಹ ಇನ್ಯಾರು ಸಂರಕ್ಷಕರು ಇಲ್ಲ (ಎಂದು ಚಿಂತಿಸುವದು ಅಶರಣಾನುಪ್ರೇಕ್ಷೆಯು) ಸಂಸಾರ-ದೇವನಾರಕ ಮನುಷ್ಯತಿರ್ಯಂಚ ಜೀವಗಳು ನಾಲ್ಕು ಗತಿಯಲ್ಲಿ ನಾನಾ ಜನ್ಮಗಳಲ್ಲಿ ಅನೇಕ ಪ್ರಕಾರದಿಂದ ತೊಳಲುವದು ಸಂಸಾರವು, (ಎಂದು ಚಿಂತಿಸುವದು ಸಂಸಾರಾನುಪ್ರೇಕ್ಷೆಯು), ಏಕತ್ವ - ಹುಟ್ಟುವದು ಸಾಯುವದು ಮುಪ್ಪು ಎಂಬುವಗಳಿಂದ ಹುಟ್ಟಿದ ಮಹಾದುಃಖವನ್ನು ಅನುಭವಿಸುವನು ನಾನೊಬ್ಬನೆ ಇನ್ಯಾರು ಕೂಡಾಬರುವದಿಲ್ಲ ಧರ್ಮ ವಂದೇಯೇ ಬರತಕ್ಕದ್ದು (ಎಂದುಚಿಂತಿಸುವದು ಏಕತ್ವಾನುಪ್ರೇಕ್ಷೆಯು), ಅನ್ಯತ್ವ - ಶರೀರದಿಂದ ಆತ್ಮನು ಅತ್ಯಂತಭಿನ್ನನು (ಎಂದು ಚಿಂತಿಸುವದು ಅನ್ಯತ್ವಾನುಪ್ರೇಕ್ಷೆಯು), ಅಶುಚಿ- ಮಾಂಸ ರಕ್ತಾದಿ ಸಪ್ತಧಾತು ಮಯವಾಗಿ ಮಲಮೂತ್ರಗಳಿಂದ ತುಂಬಿರುವ ಶರೀರವನ್ನು ಜಲಾದಿಗಳಿಂದ ಶುಚಿಮಾಡುವದಕ್ಕೆ ಬರುವದಿಲ್ಲ (ಎಂದು ಚಿಂತಿಸುವದು ಅಶುಚಿತ್ವಾನುಪ್ರೇಕ್ಷೆಯು), ಆಸ್ರವ - ಮಿಥ್ಯಾತ್ವ ಸಂಯಮ ಕಷಾಯ ಮನವಚನ ಕಾಯಗಳಿಂದ ತುಂಬಿರುವ ಜೀವಗಳ ಶರೀರದಲ್ಲಿ ಅನಂತಾನಂತಕರ್ಮ ಪರಮಾಣುಗಳು ಬರುತ್ತವೆ (ಎಂದು ಚಿಂತಿಸುವದು ಆಸ್ರವಾನುಪ್ರೇಕ್ಷೆಯು), ಸಂವರ

ಮಿಥ್ಯಾತ್ವಾದಿಗಳಿಂದ ಬರುವಕರ್ಮ ಪರಮಾಣುಗಳು ದರ್ಶನ ಕಷಾಯ ವ್ರತ ಕಷಾಯ ನಿಗ್ರಹವು ಮನವಚನ ಕಾಯನಿರೋಢವು ಎಂಬುವ ಇವರಿಂದಕೂಡಿದ ಪ್ರಾಣಿಗಳ ಶರೀರವನ್ನು ಹೊಂದುವದಿಲ್ಲ. (ಎಂದು ಚಿಂತಿಸುವದು ಸಂವರಾನುಪ್ರೇಕ್ಷೆಯು ). ನಿರ್ಜರಾ- ಸಮ್ಯಕ್ತ್ವವನ್ನು ಗ್ರಹಿಸುವದೇ ಮೊದಲಾದ್ದರಿಂದ ಕರ್ಮಗಳ ಕೆಲವು ಪರಿಣಾಮಗಳು ಬಿಟ್ಟು ಹೋಗುವದು(ಎಂದು ಚಿಂತಿಸುವದು ನಿರ್ಜರಾನುಪ್ರೇಕ್ಷೆಯು ), ಲೋಕ ಯಾರಿಂದಲೂ ಮಾಡದೇ ಸ್ವಭಾವದಿಂದಿರುವದು ಅನಾದ್ಯನಿಧನವು ಷಡ್ದ್ರವ್ಯದಿಂದ ತುಂಬಿರುವ ಆಕಾಶ ಪ್ರದೇಶವೆ ಲೋಕವು ಅದರಲ್ಲಿ ಜೀವನು ಇಲ್ಲದ ಸ್ಥಳವಿಲ್ಲವು (ಎಂದು ಚಿಂತಿಸುವದು ಲೋಕಾನು ಪ್ರೇಕ್ಷೆಯು ), ಬೋಧಿದುರ್ಲಭ – ಸಮ್ಯಗ್ದರ್ಶನಾದಿಗಳು, ಜೀವನಿಗೆ ಹಿತಾ ಹಿತ ವಿಚಾರವುಳ್ಳ ಜನ್ಮವು ಬರುವದು ಸಮ್ಯಜ್ಞಾನಾದಿಗಳು ಲಭಿಸುವದುಬಹಳ ಕಷ್ಟವು ( ಎಂದು ಚಿಂತಿಸುವದು ಬೋಧಿ ದುರ್ಲಭಾನುಪ್ರೇಕ್ಷೆಯು ), ಧರ್ಮಸ್ವಾಖ್ಯತತ್ವ - ಜೀವಗಳನ್ನು ಕ್ಲೇಶದ್ದೆಶೆಯಿಂದ ಮೇಲಕ್ಕೆ ಎತ್ತುವರು, ಸರ್ವಜ್ಞನಿಂದ ಹೇಳಲ್ಪಟ್ಟ ಸದ್ಧರ್ಮವನ್ನು ಪಡೆದವರು ಧನ್ಯರು ಅಂದರೆ ನಿಶ್ರೇಯಸ ಸುಖಪ್ರಾಪ್ತಿ ಯಾಗುತ್ತದೆ ( ಎಂದು ಚಿಂತಿಸುವದು ಧರ್ಮಾನುಪ್ರೇಕ್ಷೆಯು), ಇವುಗಳ, ಅನುಚಿಂತನಂ - ಭಾವಿಸುವದು, ಅನುಪ್ರೇಕ್ಷಾಃ - ಅನುಪ್ರೇಕ್ಷೆಗಳು ಆಗುತ್ತವೆ ||

ತಾ || ಮೇಲೆ ಹನ್ನೆರಡು ಭಾವನೆಗನ್ನು ನಿರಂತರ ಭಾವಿಸಿದರೆ ಉತ್ತಮ ಕ್ಷಮಾದಿ ದಶಧರ್ಮಗಳು ಸ್ಥಿರವಾಗಿ ನಿಲ್ಲುವದು ಅದರಿಂದ ಅಧಿಕಸಂವರೆ ಉಂಟಾಗುತ್ತದೆ || ೭ ||

ಪ ರೀ ಷ ಹ ಜ ಯಾ ಧಿ ಕ ರ ಣ ಂ.

ಅ || ಪರೀಷಹ ಜಯದಿಂದ ಆಗುವ ಪ್ರಯೋಜನವನ್ನು ಹೇಳುತ್ತಾರೆ.

ಸೂ || ಮಾರ್ಗಾಚ್ಯವನ ನಿರ್ಜರಾರ್ಥಂ ಪರಿಷೋಢವ್ಯಾಃ ಪರೀಷಹಾಃ || ೮ ||

ಟೀ || ಮಾರ್ಗಾಚ್ಯವನ ನಿರ್ಜರಾರ್ಥಂ - ಮಾರ್ಗ - ಸಂವರೆಮಾರ್ಗವನ್ನು (ಮುಕ್ತಿಮಾರ್ಗವನ್ನು), ಅಚ್ಯವನ – ಬಿಡದೇಯಿರುವದಕ್ಕೋಸ್ಕರ, ಕರ್ಮನಿರ್ಜರಾರ್ಥಂ - ಕರ್ಮಗಳ ಏಕದೇಶಕ್ಷಯ ಕಾರಣವಾ

ಗಿ, ಪರೀಷಹಾಃ - ಕ್ಷುತ್ಪಿಪಾಸಾದಿ ೨೨ ಪರೀಷಹಗಳು, ಪರಿಷೋಢ ವ್ಯಾಃ - ಸಹಿಸತಕ್ಕಂಥಾವುಗಳು ||

ತಾ || ಸಂವರೆ, ನಿರ್ಜರೆ, ಉಂಟಾಗುವದಕ್ಕೆ ಪರೀಷಹಗಳನ್ನು ಜಯಿಸಬೇಕು. ಇದರಿಂದ ಮೋಕ್ಷ ಸುಖಪ್ರಾಪ್ತಿಯಾಗುತ್ತದೆ || ೮ ||

ಅ || ಇಪ್ಪತ್ತೆರಡು ಪರೀಷಹಗಳನ್ನು ಹೇಳುತ್ತಾರೆ.

ಸೂ|| ಕ್ಷುತ್ಪಿಪಾಸಾ ಶೀತೋಷ್ಣ ದಂಶಮಶಕನಾಗ್ನ್ಯ ರತಿ ಸ್ತ್ರೀಚರ್ಯಾನಿಷದ್ಯಾ ಶಯ್ಯಾಕ್ರೋಶ ವಧಯಾಚ್ನಾ ಲಾಭರೋಗ ಮಲ ಸತ್ಕಾರಪುರಸ್ಕಾರ ಪ್ರಜ್ಞಾಜ್ಞಾನ ದರ್ಶನಾನಿ || ೯ ||

ಟೀ || ಕ್ಷುತ್ಪಿಪಾಸಾ ಶೀತೋಷ್ಣ ದಂಶಮಶಕನಾಗ್ನ್ಯ ರತಿ ಸ್ತ್ರೀಚರ್ಯಾನಿಷದ್ಯಾ ಶಯ್ಯಾಕ್ರೋಶ ವಧಯಾಚ್ನಾ ಲಾಭರೋಗ ಮಲಸತ್ಕಾರ ಪುರಸ್ಕಾರ ಪ್ರಜ್ಞಾ ಜ್ಞಾನ ದರ್ಶನಾನಿ - ಕ್ಷುತ್ - ೧ಹೊಟ್ಟೆಹಸಿವು ೧, ಪಿಪಾಸಾ-ಬಾಯಾರಿಕೆಯು ೨, ಶೀತ- ಶೀತವು ೩, ಉಷ್ಣ - ಉಷ್ಣವು ೪, ದಂಶಮಶಕ- ಚಿಕ್ಕಟು ನೊರಜುಗಳು ೫, ನಾಗ್ನ್ಯ ದಿಗಂಬರಿಯಾಗಿರುವದು ೬. ಅರತಿ - ಮೆಚ್ಚದೇ ಯಿರುವದು, ಸ್ತ್ರೀ - ಸ್ತ್ರೀಯು ೮, ಚರ್ಯಾ - ತೊಳಲುವದು ೯, ನಿಷದ್ಯಾ - ಕೂತುಕೊಂಡಿರುವದು ೧೦, ಶಯ್ಯಾ - ಮಲಗುವದು ೧೧, ಆಕ್ರೋಶ - ಬೈಯ್ಗಳು ೧೨, ವಧ - ಕೊಲೆಯು ೧೩. ಯಾಚನ - ಬೇಡುವದು ೧೪, ಅಲಾಭ - ಪಡೆಯದೆ ಯಿರುವದು ೧೫, ರೋಗ - ರೋಗವು ೧೬, ತೃಣಸ್ಪರ್ಶ - ಹುಲ್ಲುಮೊದಲಾದವುಗಳ ಮುಟ್ಟುವದು ೧೭, ಮಲ- ಮಲವು ೧೮, ಸತ್ಕಾರ - ಆತ್ಮಗೌರವಸ್ತೋತ್ರಲ್ಲಿ ಆಗ್ರಹವು ೧೯, ಪ್ರಜ್ಞಾ - ತಿಳುವಳಿಕೆಯ ಮದವು ೨೦, ಅಜ್ಞಾನ - ಅಜ್ಞಾನವು ೨೧, ಅದರ್ಶನಾನಿ - ಸಮ್ಯಕ್ತ್ವಯಿಲ್ಲದೇ ಯಿರುವ ಸಂಕ್ಲೇ ಪರಿಣಾಮ ೨೨, ಇವುಗಳನ್ನು,ಸಂವರೆ ನಿರ್ಜರೆಗೋಸ್ಕರ ಸೈರಿಸುವದಕ್ಕೆ ಪರೀಷಹ ಜಯವು ಎಂದು ಹೆಸರು ||

ತಾ || ಯತಿಯು ನಿರವದ್ಯಾಹಾರವನ್ನು ಶರೀರ ಸಂರಕ್ಷಣೆಗೆ ತಕ್ಕಷ್ಟು ತೆಗದುಕೊಂಡು, ಕ್ಷುದ್ಬಾಧೆಯನ್ನು ಸಹಜ ಶುದ್ಧ ಪರಮ ಪಾರಿಣಾಮಿಕ ಪರಮಭಾವನೆಯಿಂದ ಉಂಟಾದಂಥಾ ಅಮೃತಾಹಾರದಿಂದ

ಹೊಟ್ಟೆ ಹಸಿವಿನ ಬಾಧೆಯನ್ನು ಹೋಗಲಾಡಿಸುವದಕ್ಕೆ ೧ ಕ್ಷುತ್ಪರೀಷಹ ಜಯವೆಂದು ಹೆಸರು || ಜಲದಲ್ಲಿ ಸ್ನಾನಾದಿಗಳನ್ನು ಮಾಡುವದೇ ಮೊದಲಾದ ಶೀತೋಪಚಾರಗಳನ್ನು ಬಿಟ್ಟು ಆತ್ಮದ್ರವ್ಯವನ್ನು ತಿಳಿಯುವದರಿಂದ ಉಂಟಾದ ಪರಮಾನಂದವೆಂಬ ಅಮೃತ ಜಲಪಾನದಿಂದ ಉಪಶಮವನ್ನು ಪಡೆಯುವ ಋಷಿಗೆ ೨ಪಿಪಾಸಾಪರೀಷಹ ಜಯವೆಂಬುವದಾಗುತ್ತದೆ || ಯತಿಯು ವಸ್ತ್ರಾದಿಗಳು ಯಿಲ್ಲದೇ ಇಬ್ಬನಿಮಳೆ ಮೊದಲಾದವುಗಳಿಂದ ಉಂಟಾಗುವ ಶೀತಬಾಧೆಯನ್ನು ವೀತರಾಗ ನಿರ್ವಿಕಲ್ಪ ಸ್ವಸಂವೇದನ ಜ್ಞಾನಾಭಿಧಾನವನ್ನುಳ್ಳಂಥಾ ಪರಮಧ್ಯಾನವೆಂಬುವಂಥಾ ಬೆಂಕಿಯಿಂದ ಹೋಗಲಾಡಿಸುದಕ್ಕೆ ೩ ಶೀತ ಪರೀಷಹ ಜಯವೆಂದು ಹೆಸರು || ಬಿಸಿಲು ಕಾಡುಕಿಚ್ಚು, ಪಿತ್ತ ಜ್ವರಾದಿಗಳಿಂದ ಉಂಟಾದ ಬಾಯಾರಿಕೆ ಮೊದಲಾದ ದುಃಖಗಳನ್ನು ಸಹಿಸುವದಕ್ಕೆ ೪ ಉಷ್ಣ ಪರೀಷಹ ಜಯವೆಂದು ಹೆಸರು || ನೊಣ ಸೊಳ್ಳೆ ವೃಶ್ಚಿಕ ಮೊದಲಾದ ಜಂತುಗಳಿಂದ ಉಂಟಾದ ಬಾಧೆಗಳನ್ನು ಸಹಿಸುವದಕ್ಕೆ ೫ ದಂಶಮಶಕ ಪರೀಷಹ ಜಯವೆಂದು ಹೆಸರು || ಯತಿಯು ಬಟ್ಟೆಯಿಲ್ಲದೇ ಯಿರುವದರಿಂದ ಉಂಟಾಗುವ ನಾಚಿಕೆ ಮೊದಲಾದವುಗಳನ್ನು ಬಿಟ್ಟು ಬ್ರಹ್ಮಚರ್ಯದಿಂದಲೂ ಜ್ಞಾನ ವೈರಾಗ್ಯ ಭಾವನೆಯಿಂದಲೂ ನಿರ್ಮಲವಾದ ದಿಕ್ಕುಗಳೆನ್ನೇ ವಸ್ತ್ರವುಳ್ಳವನಾಗಿಯು ಯಿರುವದೇಯೆ ೬ ನಾಗ್ನ್ಯಪರೀಷಹ ಜಯುವೆಂಬುದಾಗುತ್ತದೆ || ಇಂದ್ರಿಯ ಸುಖದ ಅಭಿಲಾಷೆಯಿಂದ ಸಂಯಮದಲ್ಲಿ ರುಚಿ ಯಿಲ್ಲದವನಾಗದೆ ಆತ್ಮಸುಖದಲ್ಲಿ ಅನುರಕ್ತನಾಗುವದಕ್ಕೆ ೭ ಅರತಿ ಪರೀಷಹ ಜಯವೆಂದು ಹೆಸರು || ಆರಾಮಭವನ ಮೊದಲಾದಂಥಾಏಕಾಂತಪ್ರದೇಶದಲ್ಲಿ ನವಯೌವ್ವನದಿಂದಾದ ಹಾವಭಾವ ವಿಲಾಸ ವಿಭ್ರಮದಿಂದ ಮದಿಸಿರುವಂಥಾ ಸ್ತ್ರೀಯರುಗಳಿಂದ ಬಾಧೆಪಡಿಸುವನಾದಾಗ್ಯುಮನಶ್ಚಾಂಚಲ್ಯವಿಲ್ಲದೆ ಮೋಕ್ಷ ಲಕ್ಷ್ಮೀವಿಲಾಸವನ್ನು ನೋಡುವದರಲ್ಲಿ ಪ್ರೀತಿಯುಳ್ಳ ಯತಿಗೆ ೮ ಸ್ತ್ರೀಪರೀಷಹ ಜಯುವೆಂಬುವದಾಗುತ್ತದೆ || ಬಹುಕಾಲ ಪರ್ಯಂತರ ಗುರುಸಮೀಪದಲ್ಲಿ ವಾಸಮಾಡಿ ಗುರುವಿನ ಅಪ್ಪಣೆಯಿಂದ ದೇಶಾಂತರದಲ್ಲಿ ವಿಹರಿಸುವಂಥಾವನಾಗಿ ಅನ್ನಾದಿ ತ್ಯಾಗದಿಂದ ಆಗುವ ಪರಿಕ್ಲೇಶದ ಶರೀರ

ವೃಳ್ಳವನಾಗಿ ಮಾರ್ಗದಲ್ಲಿ ಸಂಚಾರ ಮಾಡುವದರಲ್ಲಿ ಕ್ಲೇಶಭಾವವನ್ನು ಪ
ಡೆಯದೇ ಯಿರುವದೇ ೯ ಚರ್ಯಾ ಪರೀಷಹ ಜಯವು ‖ ಕುಕ್ಕುಟಾಸನ
ವೀರಾಸನ ಮೊದಲಾದ ಆಸನಗಳಿಂದ ಶ್ಮಶಾನ ಗುಹೆ, ಕೋಟರವೆ ಮೊ
ದಲಾದ ಸ್ಥಳಗಳಲ್ಲಿ ಕೂತುಕೊಳ್ಳುವದರಲ್ಲಿ ಚಲಿಸದೇ ಯಿರುವ ಶರೀ
ರಾದಿಗಳುಳ್ಳ ಯತಿಗೆ ೧೦ ನಿಷದ್ಯಾ ಪರೀಷಹ ಜಯವೆಂಬುವದು ಆ
ಗುತ್ತದೆ‖ ಧ್ಯಾನಾಧ್ಯಯನ ಮೊದಲಾದ ಮಾರ್ಗದಿಂದ ಆದ ಶ್ರಮ ಪರಿಹ
ರಕ್ಕೋಸ್ಕರ ಕಠಿಣವಾಗಿಯು ಹಳ್ಳ ತಿಟ್ಟಾಗಿಯು ಇರುವಪ್ರದೇಶದಲ್ಲಿ ಅಂ
ತರ್ಮುಹೂರ್ತಕಾಲ ಪರ್ಯಂತರ ಏಕಪಾರ್ಶ್ವ ದಂಡಾಯುತ ಮೊದಲಾ
ದ ಶಯುನವನ್ನು ಪಡೆದು ತಿರುಗದೇ ಯಿರುವನಾಗಿ ಇತರರಿಂದ ಬರುವ
ಉಪದ್ರವಗಳನ್ನು ಕ್ಷಮಿಸುವ ಯತಿಗೆ ಆತ್ಮಭಾವನಾ ರೂಪವಾದ ಪರ
ಮಯೋಗ ವೆಂಬುವ ನಿದ್ರೆಯಲ್ಲಿ ಆಸಕ್ತ ಚಿತ್ತನಾಗುವದು ೧೧ ಶಯ್ಯಾ
ಪರೀಷಹ ಜಯವೆಂಬುವದು ಆಗುತ್ತದೆ ‖ ಮಿಥ್ಯಾದೃಷ್ಟಿ ಮ್ಲೇಚ್ಛ,
ಖಲಜನ, ಪಾಪಿ ಜನರು ಮೊದಲಾದವರು ಆಡುವ ಅಪಮಾನ ವಚನ ನಿಂ
ದಾವಚನ ಮೊದಲಾದ ದುಷ್ಟವಾದ ಮಾತುಗಳನ್ನು ಕೇಳಿದಾಗ್ಯು ಸ
ಹಿಸುವದಕ್ಕೆ ೧೨ ಆಕ್ರೋಶ ಪರೀಷಹ ಜಯವೆಂಬುವದು ಆಗುತ್ತದೆ‖
ಎಳೆಯುವದು ಕಟ್ಟುವದು ಕತ್ತರಿಸುವದು ಕೊಲ್ಲುವದು ಮೊದಲಾದ
ಉಪಸರ್ಗವನ್ನು ಮಾಡಿದರು ಮನೋವಿಕಾರವಿಲ್ಲದೆ ಸಹಿಸಿಕೊಂಡು ಸ
ಮ್ಯಗ್ದರ್ಶನಜ್ಞಾನಚಾರಿತ್ರಗಳಿಗೆಘಾತವಿಲ್ಲವೆಂಬಚಿಂತೆಯಿಂದ ಪರಿಣಾಮ
ಶುದ್ಧನಾಗಿರುವದು ವಧ ಪರೀಷಹ ಜಯವೆಂಬುವದು ಆಗುತ್ತದೆ‖ ಆಹಾ
ರೌಷಧಾದಿಗಳುದೊರೆಯದೇ ಪ್ರಾಣ ಹೋಗುತ್ತಾ ಯಿದ್ದರೂ ಯಾಚಿಸ
ದೆ ಆತ್ಮಧ್ಯಾನಾ ಸಕ್ತನಾಗಿರುವದು ೧೪ ಯಾಚ್ನಾ ಪರೀಷಹಜಯವು ‖
ಪಾಣಿಪುಟಾಹಾರಿಯಾಗಿ ಬಹುಕಾಲ ತಿರಿಗುತ್ತಾ ಅನೇಕ ಕಡೆ ಭಿಕ್ಷೆ
ಯನ್ನು ಪಡೆಯದೇ ಯಿದ್ದದ್ದಕ್ಕೆ ಕ್ಲೇಶಪಡದೇ ಅಭೇದ ರತ್ನತ್ರಯ ಲಾ
ಭದಿಂದ ಸಂತುಷ್ಟನಾಗಿರುವದು ೧೫ ಅಲಾಭ ಪರೀಷಹ ಜಯವು‖ ವಿರು
ದ್ಧ ಆಹಾರಾದಿಗಳಿಂದ ವೈಷಮ್ಯ ಉಂಟಾಗಿ ಬರುವ ರೋಗಗಳಿಗೆ ತನ್ನಲ್ಲಿ
ರುವ ಋದ್ಧಿಗಳಿಂದ ಪ್ರತೀಕಾರ ಮಾಡದೆ ವಿಶುದ್ಧಾತ್ಮ ತತ್ವ ಪರಿಜ್ಞಾ
ನದಿಂದ ಉಂಟಾದ ಪರಮಾನಂದಾಮೃತ ರಸಾಯನ ಲಾಭದಿಂದ ಜಯಿ

ಸುವದಕ್ಕೆ ೧೬ ರೋಗ ಪರೀಷಹ ಜಯವೆಂದು ಹೆಸರು ॥ ವೊಣಗಿದ ಹುಲ್ಲು ಸಣ್ಣಕಲ್ಲು ಮುಳ್ಳು ಹೆಂಟಿ ವೊದಲಾದವುಗಳಿಂದ ಉಂಟಾಗುವ ವೇಧೆಯನ್ನು ಸಹಿಸುವದಕ್ಕೆ ೧೭ ತೃಣ ಸ್ಪರ್ಶಾದಿ ಪರೀಷಹ ಜಯವೆಂದು ಹೆಸರು || ಸ್ನಾನಾದಿಗಳಿಲ್ಲದ್ದರಿಂದ ಉಂಟಾಗುವ ಕೊಳಕು ಕಜ್ಜಿ ವೊದಲಾದ್ದರ ಬಾಧೆಗಳನ್ನು ಸಹಿಸುವದಕ್ಕೆ ೧೮ ಮಲ ಪರೀಷಹ ಜಯವೆಂದು ಹೆಸರು॥ ದುಷ್ಟರು ಜ್ಞಾನಹೀನರು ವೊದಲಾದವರು ಅಪಮಾನ ಮಾಡಿದರೂ ಸನ್ಮಾನಮಾಡದೇ ಯಿದ್ದರೂತಾನು ಗೌರವ ಬೇಕೆಂಬಅಪೇಕ್ಷೆಮಾಡದೇ ಯಿರುವದಕ್ಕೆ ೧೯ ಸತ್ಕಾರ ಪುರಸ್ಕಾರ ಪರೀಷಹ ಜಯವೆಂದು ಹೆಸರು ॥ ಅಧ್ಯಾತ್ಮಾದಿ ಸಮಸ್ತ ಶಾಸ್ತ್ರದಲ್ಲಿ ನಿಪುಣನಾದರು ಗರ್ವದಿಂದ ಬಿಡಲ್ಪಟ್ಟದ್ದರೆ ಅದಕ್ಕೆ ೨೦ ಪ್ರಜ್ಞಾ ಪರೀಷಹ ಜಯವೆಂದು ಹೆಸರು ॥ ಇತರರು ಈತನು ಯೇನು ತಿಳಿಯದವನು ಎಂದು ಹೇಳುವದೇ ವೊದಲಾದ ತಿರಸ್ಕಾರ ಮಾತಿನಿಂದ ಸಹಿಸಿಕೊಂಡು ಜ್ಞಾನಾವರಣಾದಿಕರ್ಮಗಳ ಕ್ಷಯೋಪಶಮ ಪರಿಜ್ಞಾನಿಯಾಗಿರುವದು ೨೧ ಅಜ್ಞಾನಪರೀಷಹ ಜಯವೆಂಬುವದು ಆಗುತ್ತದೆ|| ಅನೇಕಕಾಲ ತಪಸ್ಸು ಮಾಡಿದರೂ ಯಾವಶಕ್ತಿಯು ನನಗೆ ಬರಲಿಲ್ಲಾ ಈ ತಪಸ್ಸು ಮಾಡುವದ್ದರಿಂದ ಯೇನು ಪ್ರಯೋಜನವೂ ವ್ರತ ಪರಿಪಾಲನೇ ಮಾಡುವದ್ದರಿಂದ ಯೇನು ಪ್ರಯೋಜನವೂ ತೋರುವದಿಲ್ಲ ಯೆಂಬುವ ಯೋಚನೆಯನ್ನು ಮಾಡದೆ ನಿಶ್ಚಯ ಸಮ್ಯಗ್ದರ್ಶನಾದಿ ಭಾವನೆಯಲ್ಲಿರುವದಕ್ಕೆ ೨೨ ಅದರ್ಶನಾ ಪರೀಷಹ ಜಯವೆಂದು ಹೆಸರು ॥ ಈ ೨೨ ಪರೀಷಹ ಜಯದಿಂದ ಸಂವರೆಯು ಉಂಟಾಗುತ್ತದೆ ॥ ೯ ||

ಅ ॥ ಹದಿನಾಲ್ಕು ಪರೀಷಹಗಳಿರುವ ೩ ಗುಣಸ್ಥಾನವನ್ನು ಹೇಳುತ್ತಾರೆ.

ಸೂ ॥ ಸೂಕ್ಷ್ಮ ಸಾಂಪರಾಯಛದ್ಮಸ್ಥವೀತರಾಗಯೋಶ್ಚತುರ್ದಶ || ೧೦ ॥

ಟೀ ॥ ಸೂಕ್ಷ್ಮಸಾಂಪರಾಯ ಛದ್ಮಸ್ಥವೀತರಾಗಯೋಃ - ಸೂಕ್ಷ್ಮಸಾಂಪರಾಯ - ಸೂಕ್ಷ್ಮ ಸಾಂಪರಾಯ ಗುಣಸ್ಥಾನವರ್ತಿಯು, ಛದ್ಮಸ್ಥವೀತರಾಗಯೋಃ - ಛದ್ಮಸ್ಥವೀತರಾಗನಾದ ಉಪಶಾಂತನು ಮ

ತ್ತು, ಕ್ಷೀಣಕಷಾಯನು ಎಂಬ ಇವರುಗಳಿಗೆ, ಚತುರ್ದಶ - ಹದಿನಾಲ್ಕು ಪರೀಷಹಗಳು ಇರುತ್ತವೆ ||

ತಾ || ೧ ಹೊಟ್ಟೆ ಹಸಿವು, ೨ ಬಾಯಾರಿಕೆ, ೩ ಶೀತ, ೪ ಉಷ್ಣ, ೫ ದಂಶಮಶಕ, ೬ ಚರ್ಯಾ, ೭ ಶಯ್ಯಾ, ೮ ವಧ, ೯ ಅಲಾಭ, ೧೦ ರೋಗ, ೧೧ ತೃಣಸ್ಪರ್ಶ, ೧೨ ಮಲ, ೧೩ ಪ್ರಜ್ಞಾ, ೧೪ ಅಜ್ಞಾನ ಈ ೧೪ ಪರೀಷಹಗಳು ೧೦ನೇ ಗುಣಸ್ಥಾನವಾದ ಸೂಕ್ಷ್ಮ ಸಾಂಪರಾಯನಲ್ಲಿಯೂ, ೧೧ನೇ ಗುಣಸ್ಥಾನವಾದ ಉಪಶಾಂತ ಕಷಾಯನಲ್ಲಿಯೂ ೧೨ನೇ ಗುಣಸ್ಥಾನವಾದ ಕ್ಷೀಣ ಕಷಾಯನಲ್ಲಿಯೂ, ಉಂಟಾಗುತ್ತದೆ || ೧೦ ||

ಅ || ಕೇವಲಿಗಳಲ್ಲಿ ೧೧ ಪರೀಷಹಗಳು ಉಪಚಾರದಿಂದ ಹೇಳಲ್ಪಡುತ್ತವೆ ಎಂದು ಹೇಳುತ್ತಾರೆ,

ಸೂ || ಏಕಾದಶ ಜಿನೇ || ೧೧ ||

ಟೀ || ಜಿನೇ - ಭಗವಂತನಾದ ಅರ್ಹಂತನಲ್ಲಿ, ಏಕಾದಶ - ಹನ್ನೊಂದು ಪರೀಷಹಗಳು ಉಪಚಾರದಿಂದ ಹೇಳಲ್ಪಡುತ್ತವೆ ||

ತಾ || ೧ ಕ್ಷುತ್, ೨ ಪಿಪಾಸಾ, ೩ ಶೀತ, ೪ ಉಷ್ಣ, ೫ ದಂಶಮಶಕ, ೬ ಚರ್ಯಾ, ೭ ಶಯ್ಯಾ, ೮ ವಧ, ೯ ರೋಗ, ೧೦ ತೃಣಸ್ಪರ್ಶ ೧೧ ಮಲ, ಈ ೧೧ ಪರೀಷಹಗಳು ಸಯೋಗಿ ಕೇವಲಿಯಲ್ಲಿಧಾವೆ | ಮೋಹನೀಯ ಕರ್ಮೋದಯ ಸಹಾಯ ಇಲ್ಲದೇ ಯಿರುವದ್ದರಿಂದ ಕ್ಷುತ್ಪಿಪಾಸ ಮೊದಲಾದ ವೇದನೆಗಳು ಕೇವಲಿಗಳಲ್ಲಿ ಇಲ್ಲದೇ ಯಿರುವದ್ದರಿಂದ ಕ್ಷುತ್ಪಿಪಾಸ ಮೊದಲಾದ ಪರೀಷಹಗಳು ಹ್ಯಾಗೆ ಯಿಧಾವೆ ಅಂದರೆ - ಕ್ಷುತ್ ಮೊದಲಾದ ವೇದನೆಗಳು ಯಿಲ್ಲದೇ ಯಿದ್ದಾಗ್ಯೂ ದ್ರವ್ಯ ಕರ್ಮವಾದ ವೇದನೀಯ ಕರ್ಮವು ಸದ್ಭಾವ ಮಾತ್ರದಿಂದ ಇರುವದ್ದರಿಂದ ಅದನ್ನು ಅಪೇಕ್ಷಿಸಿ ಪರೀಷಹವು ಉಪಚಾರದಿಂದ ( ನಾಮಮಾತ್ರವಾಗಿ ) ಹೇಳಲ್ಪಡುತ್ತಿದೆ || ೧೧ ||

ಅ || ನಾಲ್ಕು ಗುಣಸ್ಥಾನದವರಿಗೆ ಎಲ್ಲಾ ಪರೀಷಹ ಉಂಟೆಂದು ಹೇಳುತ್ತಾರೆ.

ಸೂ || ಬಾದರಸಾಂಪರಾಯೇ ಸರ್ವೇ || ೧೨ ||

ಟೀ || ಬಾದರಸಾಂಪರಾಯೇ - ಪ್ರಮತ್ತ ಮೊದಲಾದ ನಾಲ್ಕು ಗುಣಸ್ಥಾನದಲ್ಲಿ, ಸರ್ವೇ - ಎಲ್ಲಾ ಪರೀಷಹಗಳು ಯಿರುತ್ತವೆ ||

ತಾ || ೬ನೇ ಪ್ರಮತ್ತ. ೭ನೇ ಅಪ್ರಮತ್ತ. ೮ನೇ ಅಪೂರ್ವಕರಣ. ೯ನೇ ಅನಿವೃತ್ತಿಕರಣ ಈ ೪ ಗುಣಸ್ಥಾನದವರು ಸ್ಥೂಲವಾದ ಕಷಾಯವುಳ್ಳವರಾದಕಾರಣ ಕ್ಷುತ್ ಮೊದಲಾದ ಎಲ್ಲಾ ಪರೀಷಹಗಳುವುಳ್ಳವರಾಗಿ ಯಿರುತ್ತಾರೆ || ೧೨ ||

ಅ || ಜ್ಞಾನಾವರಣೀಯದಿಂದ ೨ ಪರೀಷಹ ಬರುತ್ತೆಂದು ಹೇಳುತ್ತಾರೆ.

ಸೂ || ಜ್ಞಾನಾವರಣೇ ಪ್ರಜ್ಞಾಜ್ಞಾನೇ || ೧೩ ||

ಟೀ || ಜ್ಞಾನಾವರಣೇ- ಜ್ಞಾನಾವರಣೀಯ ಕರ್ಮೋದಯ ಉಂಟಾಗುತ್ತಿರಲಾಗಿ, ಪ್ರಜ್ಞಾಜ್ಞಾನೇ - ಪ್ರಜ್ಞಾ-ಜ್ಞಾನಪರೀಷಹವು, ಅಜ್ಞಾನೇ-ಅಜ್ಞಾನಪರೀಷಹವು ಯೀ ೨ ಪರೀಷಹಗಳು ಉಂಟಾಗುತ್ತದೆ||

ಅ || ದರ್ಶನ ಮೋಹನೀಯ, ಅಂತರಾಯ ಕರ್ಮಗಳಿಂದ ಬರುವ ಪರೀಷಹವನ್ನು ಹೇಳುತ್ತಾರೆ.

ಸೂ || ದರ್ಶನ ಮೋಹಾಂತರಾಯಯೋರದರ್ಶನಾಲಾಭೌ ||೧೪

ಟೀ || ದರ್ಶನಮೋಹಾಂತರಾಯಯೋಃ - ದರ್ಶನಮೋಹ-ದರ್ಶನಮೋಹನೀಯ ಕರ್ಮವು, ಅಂತರಾಯಯೋಃ - ಲಾಭಾಂತರಾಯ ಕರ್ಮವು ಯಿವುಗಳು ಇರುತಿರಲಾಗಿ, ಅದರ್ಶನಾಲಾಭೌ - ಅದರ್ಶನ-ಸಮ್ಯಗ್ದರ್ಶನಯಿಲ್ಲದೇ ಯಿರುವದು, ಅಲಾಭೌ-ಇಷ್ಟವಸ್ತುಗಳನ್ನು ಪಡೆಯದೆ ಯಿರುವದು ||

ತಾ || ದರ್ಶನಮೋಹನೀಯ ಕರ್ಮೋದಯದಿಂದ ಅದರ್ಶನ ಪರೀಷಹವು, ಅಂತರಾಯಕರ್ಮೋದಯದಿಂದ ಅಲಾಭಪರೀಷಹವು ಉಂಟಾಗುತ್ತದೆ || ೧೪ ||

ಅ || ಚಾರಿತ್ರಮೋಹನೀಯದಿಂದ ಬರುವ ಪರೀಷಹವನ್ನು ಹೇಳುತ್ತಾರೆ.

ಸೂ || ಚಾರಿತ್ರಮೋಹೇನಾಗ್ನ್ಯಾರತಿಸ್ತ್ರೀನಿಷದ್ಯಾಕ್ರೋಶಯಾಚ್ನಾಸತ್ಕಾರ ಪುರಸ್ಕಾರಾಃ || ೧೫ ||

ಟೀ || ಚಾರಿತ್ರಮೋಹೇ-ಚಾರಿತ್ರಮೋಹನೀಯಕರ್ಮವು ಇರುತಿರಲಾಗಿ, ನಾಗ್ನ್ಯಾರತಿಸ್ತ್ರೀನಿಷದ್ಯಾಕ್ರೋಶಯಾಚ್ನಾಸತ್ಕಾರ ಪುರಸ್ಕಾರಾಃ- ನಾಗ್ನ್ಯ-ನಾಗ್ನ್ಯಪರೀಷಹವು, ಅರತಿ-ಅರತಿಪರೀಷಹವು, ಸ್ತ್ರೀ-ಸ್ತ್ರೀಪರೀಷಹವು, ನಿಷದ್ಯಾ-ನಿಷದ್ಯಾಪರೀಷಹವು, ಆಕ್ರೋಶ -

ಆಕ್ರೋಶಪರೀಷಹವು, ಯಾಚ್ಞಾ-ಯಾಚ್ಞಾಪರೀಷಹವು, ಸತ್ಕಾರಪುರಸ್ಕಾರಾಃ-ಸತ್ಕಾರ ಪುರಸ್ಕಾರ ಪರೀಷಹವು ||

ತಾ || ಚಾರಿತ್ರಮೋಹನೀಯ ಕರ್ಮದಿಂದ ೧ ನಾಗ್ನ್ಯ. ೨ ಅರತಿ. ೩ ಸ್ತ್ರೀ. ೪ ನಿಷದ್ಯಾ. ೫ ಆಕ್ರೋಶ. ೬ ಯಾಚ್ಞಾ, ೭ ಸತ್ಕಾರ ಪುರಸ್ಕಾರಗಳೆಂಬ ೭ ಪರೀಷಹಗಳು ಉಂಟಾಗುತ್ತವೆ || ೧೫ ||

ಅ || ವೇದನೀಯಕರ್ಮದ ಪರೀಷಹಗಳನ್ನು ಹೇಳುತ್ತಾರೆ.

ಸೂ || ವೇದನೀಯೇಶೇಷಾಃ || ೧೬ ||

ಟೀ || ವೇದನೀಯೇ-ವೇದನೀಯ ಕರ್ಮವುಂಟಾಗುತ್ತಿರಲಾಗಿ, ಶೇಷಾಃ-ಉಳಿದ ೧೧ ಪರೀಷಹಗಳು ಉಂಟಾಗುತ್ತವೆ ||

ತಾ || ೧ ಕ್ಷುತ್. ೨ ಪಿಪಾಸಾ. ೩ ಶೀತ. ೪ ಉಷ್ಣ. ೫ ದಂಶಮಶಕ. ೬ ಚರ್ಯಾ. ೭ ಶಯ್ಯಾ. ೮ ವಧ. ೯ ರೋಗ. ೧೦ ತೃಣಸ್ಪರ್ಶ. ೧೧ ಮಲ. ಎಂಬ ೧೧ ಪರೀಷಹಗಳು ವೇದನೀಯಕರ್ಮೋದಯದಿಂದ ಉಂಟಾಗುತ್ತದೆ || ೧೬ ||

ಅ || ಒಂದೇಕಾಲದಲ್ಲಿ ೧೯ ಪರೀಷಹಗಳವರಿಗೆ ಬರುತ್ತೆಂದು ಹೇಳುತ್ತಾರೆ.

ಸೂ || ಏಕಾದಯೋ ಭಾಜ್ಯಾ ಯುಗಪದೇಕಸ್ಮಿನ್ನೈಕೋನವಿಂಶತೇಃ || ೧೭ ||

ಟೀ || ಏಕಸ್ಮಿನ್-ಒಂದು ಜೀವನಲ್ಲಿ, ಯುಗಪತ್ - ಏಕಕಾಲದಲ್ಲಿ, ಏಕಾದಯಃ-ಒಂದೇಮೊದಲಾದ ಪರೀಷಹಗಳು, ಏಕೋನವಿಂಶತೇಃ-ಹತ್ತೊಂಭತ್ತು ಪರೀಷಹದ್ದೆಶೆಯಿಂದ, ಭಾಜ್ಯಾನಿ-ವಿಭಾಗಮಾಡತಕ್ಕಂಥಾವುಗಳು || ಒಂದೇದಪಾ ೧೯ ಪರೀಷಹದ ವರಿಗೂ ಬರುತ್ತವೆ || ೧೭ ||

ಚಾರಿತ್ರಾಧಿಕರಣಂ.

ಅ | ಚಾರಿತ್ರದ ಐದು ಭೇದಗಳನ್ನು ಹೇಳುತ್ತಾರೆ.

ಸೂ || ಸಾಮಾಯಿಕ ಛೇದೋಪಸ್ಥಾಪನಾಪರಿಹಾರ ವಿಶುದ್ಧಿ ಸೂಕ್ಷ್ಮ ಸಾಂಪರಾಯಯಥಾಖ್ಯಾತಮಿತಿ ಚಾರಿತ್ರಂ||

ಟೀ || ಸಾಮಾಯಿಕಛೇದೋಪಸ್ಥಾಪನಾ ಪರಿಹಾರವಿಶುದ್ಧಿ ಸೂಕ್ಷ್ಮಸಾಂಪರಾಯಯಥಾಖ್ಯಾತಮಿತಿ-ಸಾಮಾಯಿಕ - ಎಲ್ಲಾ ಸಾವದ್ಯಭೇದದಿಂದಬಿಡುವ ಸಾಮಾಯಿಕವು, ಛೇದೋಪಸ್ಥಾಪನಾ- ಪ್ರಮಾದದಿಂದ

ಆದ ದೋಷವನ್ನು ಪ್ರಾಯಶ್ಚಿತ್ತವಿಧಿಯಿಂದ ತ್ಯಜಿಸಿ ಚಾರಿತ್ರಶುದ್ಧಿ ಯನ್ನು ಮಾಡುವ ಛೇದೋಪಸ್ಥಾಪನೆಯು, ಪರಿಹಾರವಿಶುದ್ಧಿ - ಗುಪ್ತಿ ಸಮಿತಿಗಳಲ್ಲಿದ್ದುಕೊಂಡು ಸಾವದ್ಯವನ್ನು ಪರಿಹರಿಸುವ ಪರಿಹಾರ ವಿಶುದ್ಧಿಯು, ಸೂಕ್ಷ್ಮ ಸಾಂಪರಾಯ - ಅತ್ಯಂತ ಸ್ವಲ್ಪವಾದ ಕಷಾಯದಲ್ಲಿ ಕೂಡಿರುವ ಸೂಕ್ಷ್ಮ ಸಾಂಪರಾಯವು, ಯಥಾಖ್ಯಾತಮಿತಿ - ಮೋಹನೀಯದ ಸಮಸ್ತ ಉಪಶಮದಿಂದ ಆತ್ಮರೂಪವು ಹ್ಯಾಗೆ ಇಹೆಯೊ ಹಾಗೆ ಹೇಳಲ್ಪಡುವ ಯಥಾಖ್ಯಾತವು ಇಂತೆಂದು, ಚಾರಿತ್ರಂ- ಚಾರಿತ್ರವು ( ಐದು ವಿಧವು) ॥ ತಾ ॥ ೧ ಜೀವಿತ, ಮರಣ. ಲಾಭ ಮೊದಲಾದ ಸುಖ ದುಃಖಗಳಲ್ಲಿ ಮಾಧ್ಯಸ್ಥವಾದಂಥಾ ಪರಿಣಾಮ ವಿಶೇಷವು ೧ ಸಾಮಾಯಿಕಚಾರಿತ್ರವೆಂಬುವದಾಗುತ್ತದೆ ॥ ಆಸಾಮಾಯಿಕವು, ೧ ನಿಯತಕಾಲ ಸಾಮಾಯಿಕ, ೨ ಅನಿಯುತಕಾಲ ಸಾಮಾಯಿಕ ಎಂದು ಎರಡು ಭೇದವು ॥ ಸ್ವಾಧ್ಯಾಯ ಮೊದಲಾದದ್ದು ನಿಯತಕಾಲ ಸಾಮಾಯಿಕವು ॥ ಈರ್ಯಾಪಥ ಶುದ್ಧಿ ಮೊದಲಾದದ್ದು ಅನಿಯತಕಾಲ ಸಾಮಾಯಿಕವು. ಇವುಗಳು ವ್ಯವಹಾರ ಸಾಮಾಯಿಕವು॥ ಕೇವಲ ಜ್ಞಾನಮೊದಲಾದ ಅನಂತ ಗುಣಗಳಿಗೆ ಆಧಾರಭೂತವಾದಂಥಾ ತಂನ ಪರಮಾತ್ಮ ಸ್ವರೂಪವನ್ನು ಭಾವಿಸುವಂಥಾದ್ದರಲ್ಲಿ ನಿಶ್ಚಯ ಸಾಮಾಯಿಕ ವೆಂಬುವದು ಆಗುತ್ತದೆ ॥ ೨ ಅಹಿಂಸಾದಿ ವ್ರತಗಳಿಗೆ ಪ್ರಮಾದದಿಂದ ಖಂಡನೆ ಯಾದರೆ ಪ್ರಾಯಶ್ಚಿತ್ತದಿಂದ ಪರಿಹರಿಸಿ ಪೂರ್ವದಂತೆ ಅಹಿಂಸಾದಿ ವ್ರತಗಳನ್ನು ನಿರತೀಚಾರವಾಗಿ ನಡೆಸುವದು ಛೇದೋಪಸ್ಥಾಪನೆಯು, ಅಥವಾ ಸಾವದ್ಯ ವ್ಯಾಪಾರವನ್ನು ಹಿಂಸಾದಿ ವಿಕಲ್ಪದಿಂದ ಭೇದಿಸಿ ಬಿಡುವದು ಛೇದೋಪಸ್ಥಾಪನಾ ಚಾರಿತ್ರವು ॥ ೩ ಪ್ರಾಣಿ ಪೀಡಾ ಪರಿಹಾರದೊಡನೆ ಕೂಡಿಯಿರುವಂಥಾ ಶುದ್ಧಿಯನ್ನುಳ್ಳಂಥಾ ಚಾರಿತ್ರವು ಪರಿಹಾರವಿಶುದ್ಧಿ ಚಾರಿತ್ರವು ॥ ೪ ಅತ್ಯಂತ ಸೂಕ್ಷ್ಮವಾದಂಥ ಲೋಭ ಕಷಾಯವನ್ನುಳ್ಳಂಥಾ ಜಿನಮುನಿಯು ಉಪಶಮಕ ನಾಗಲಿ ಕ್ಷಾಯಿಕನಾಗಲಿ ಆದರೆ ಅದು ಸೂಕ್ಷ್ಮ ಸಾಂಪರಾಯ ಚಾರಿತ್ರವು ॥ ೫ ಚಾರಿತ್ರ ಮೋಹನೀಯ ಕರ್ಮದ ಸಂಪೂರ್ಣ ಉಪಶಮದಿಂದಲಾಗಲಿ ಕ್ಷಯದಿಂದಲಾಗಲಿ ಪರಮ ಉದಾಶೀನ ರೂಪವಾಗಿರುವದು ಯಥಾಖ್ಯಾತ ಚಾರಿತ್ರವು॥ ಸಾಮಾಯಿಕ, ಛೇದೋಪಸ್ಥಾ

ಪನ ಈ ೨ ಚಾರಿತ್ರಗಳು ಪ್ರಮತ್ತ, ಅಪ್ರಮತ್ತ, ಅಪೂರ್ವಕರಣ, ಅನಿವೃತ್ತಿಕರಣ ಈ ೪ ಗುಣ ಸ್ಥಾನದವರಿಗೆ ಆಗುತ್ತದೆ || ಪರಿಹಾರ ವಿಶುದ್ಧಿ ಚಾರಿತ್ರವು ೬ ನೇ ಪ್ರಮತ್ತ ೭ ನೇ ಅಪ್ರಮತ್ತ ಗುಣಸ್ಥಾನಗಳಲ್ಲಿ ಆಗುತ್ತದೆ || ಸೂಕ್ಷ್ಮ ಸಾಂಪರಾಯ ಚಾರಿತ್ರವು ಸೂಕ್ಷ್ಮ ಸಾಂಪರಾಯಗುಣ ಸ್ಥಾನ ಒಂದರಲ್ಲೇ ಆಗುತ್ತದೆ || ಯಥಾಖ್ಯಾತ ಚಾರಿತ್ರವು ೧೧ ನೇ ಉಪಶಾಂತ ಕಷಾಯ ೧೨ ನೇ ಕ್ಷೀಣಕಷಾಯ ೧೩ ನೇ ಸಯೋಗಿ ೧೪ ನೇ ಅಯೋಗಿ ಈ ೪ ಗುಣಸ್ಥಾನಗಳಲ್ಲೂ ಇರುತ್ತದೆ || ೧೮ ||

ತ ಪೋ ಧಿ ಕ ರ ಣ ೦.

ಅ || ಬಾಹ್ಯತಪಸ್ಸು ಆರುವಿಧವೆಂದು ಹೇಳುತ್ತಾರೆ.

ಸೂ || ಅನಶನ ಅವಮೋದರ್ಯವೃತ್ತಿ ಪರಿಸಂಖ್ಯಾನರಸ
ಪರಿತ್ಯಾಗ ವಿವಿಕ್ತಶಯ್ಯಾಸನಕಾಯಕ್ಲೇಶಾಬಾಹ್ಯಂತಪಃ|| ೧೯ ||

ಟೀ || ಅನಶನಾವಮೋದರ್ಯವೃತ್ತಿ ಪರಿಸಂಖ್ಯಾನ ರಸಪರಿತ್ಯಾಗ ವಿವಿಕ್ತ ಶಯ್ಯಾಸನ ಕಾಯಕ್ಲೇಶಾಃ - ಅನಶನ - ಮಂತ್ರಸಾಧನಾದ್ಯೈಹಿಕ ಫಲವನ್ನು ಅಪೇಕ್ಷಿಸದೆ ಅಂತರಂಗ ತಪೋವೃದ್ಧಿ ನಿಮಿತ್ತ ಭೋಜನ ಮಾಡುವದು, ಅವಮೋದರ್ಯ - ಸ್ವಭಾವವಾದ ಆಹಾರದಲ್ಲಿ ತುತ್ತುಗಳನ್ನು ಕಮ್ಮಿಯಾಗಿ ತೆಗದುಕೊಳ್ಳುವದು, ವೃತ್ತಿಪರಿಸಂಖ್ಯಾನ - ದಾತೃಮನೆ ಪಾತ್ರ ಭೋಜನ ಮೊದಲಾದವುಗಳಲ್ಲಿ ಇಂಥಿಂಥಾದ್ದು ಬೇಡವೆಂಬ ನಿಯಮವು, ರಸ ಪರಿತ್ಯಾಗ -ಹಾಲು ತುಪ್ಪ ಮೊದಲಾದ ರಸವಸ್ತುಗಳನ್ನು ಬಿಡುವದು, ವಿವಿಕ್ತಶಯ್ಯಾಸನ-ಧ್ಯಾನಾಧ್ಯಯನಕ್ಕೆ ವಿಘ್ನಕಾರಿಗಳಾದ ಸ್ತ್ರೀಯರಾದಿಗಳು ಇಲ್ಲದ ಏಕಾಂತವಾದ ಶುದ್ಧ ಭೂಮಿಯಲ್ಲಿ ಇರುವದು ಕೂತುಕೊಂಡಿರುವದು, ಕಾಯಕ್ಲೇಶಾಃ -ಶರೀರದಲ್ಲಿ ಮಮತ್ವವಿಲ್ಲದೆ ಆಹಾರಾದಿಗಳನ್ನು ಬಿಟ್ಟು ಕೃಶ ಮಾಡುವದು, ಇವುಗಳು, ಬಾಹ್ಯಂತಪಃ - ಬಾಹ್ಯವಾದ ಇಂದ್ರಿಯದ ಅಹಂಕಾರವನ್ನು ಹೋಗಲಾಡಿಸುವಂಥಾ ಬಾಹ್ಯ ತಪಸ್ಸೆಂಬುವದು ಆಗುತ್ತದೆ ||

ತಾ || ೧. ಸಂಯಮದ ಸಿದ್ಧಿಗೋಸ್ಕರಲೂ, ರಾಗಾದಿಗಳ ನಾಶಕ್ಕೋಸ್ಕರಲೂ, ಧ್ಯಾನ, ಆಗಮಾಭ್ಯಾಸ ಇವುಗಳಸಿದ್ಧಿಗೋಸ್ಕರಲೂ ಅನ್ನ - ಪಾನ-ಖಾದ್ಯ - ಲೇಹ್ಯ ಎಂಬ ೪ ವಿಧ ಆಹಾರವನ್ನು ಬಿಡುವದು

ಅನಶನ ತಪವೆಂಬು ಹೆಸರು ॥ ೨. ತಾನು ಭೋಜನ ಮಾಡುವ ಆಹಾರ ಪ್ರಮಾಣದಲ್ಲಿ ಅರ್ಧಗ್ರಾಸವಾಗಲಿ ಕಾಲು ಗ್ರಾಸವಾಗಲಿ ಆಹಾರತೆಗಡುಕೊಳ್ಳುವದು ಅವಮೋದರ್ಯ ತಪವು॥ ೩. ರಸ್ತರುಧಿರಮಾಂಸ ಮೊದಲಾದವುಗಳ ಶೋಷಣೆಗೂ ಸಂಯಮ ರಕ್ಷಣೆಗೂ, ಆಶಾನಿವೃತ್ತಿಗೂಸಹ ಮನೆ, ಬಿಡದಿ, ಬೀದಿ ಇವುಗಳನಿಯಮದಿಂದಹೋಗುವದು ಅಲ್ಲಿ ಆಹಾರ ದೊರೆಯದೆ ಯಿದ್ದರೆ ಇನ್ನೊಂದುಕಡೆ ಹೋಗುವದಿಲ್ಲವೆಂಬ ಪ್ರತಿಜ್ಞೆಮಾಡಿ ಅದೇಮೇರೆ ನಡೆಯುವದು ವೃತ್ತಿಪರಿ ಸಂಖ್ಯಾನ ತಪವು॥ ೪. ಇಂದ್ರಿಯ ಮದಗಳನ್ನು ನಿಗ್ರಹಿಸುವದರಿಂದ ಸಂಯಮ ಸಿದ್ಧಿಸುತ್ತದೆ ಅದಕ್ಕಾಗಿ ಹಾಲು ತುಪ್ಪ ಬೆಲ್ಲ ಸಕ್ಕರೆ ಎಣ್ಣೆ ಮೊದಲಾದ ಪುಷ್ಟವದಾರ್ಥಗಳನ್ನು ಬಿಡುವದು ರಸ ಪರಿತ್ಯಾಗ ತಪವು ॥ ೫. ಬ್ರಹ್ಮಚರ್ಯ ಪರಿಪಾಲನೆಗೂ, ಅಧ್ಯಯನ ಸಿದ್ಧಿಗೋಸ್ಕರಲೂ, ಜಂತುಪಿಡಾ ಸ್ತ್ರೀ ಪಶು ಮೊದಲಾದವು ಇಲ್ಲದ ಬೆಟ್ಟ, ಶ್ಮಶಾನ ಉದ್ಯಾನವನ ಶೂನ್ಯಾಗಾರ ಮೊದಲಾದ ಏಕಾಂತ ಪ್ರದೇಶದಲ್ಲಿ ಇರುವದು ವಿವಿಕ್ತಶಯ್ಯಾಸನ ತಪವು ॥ ೬ ವೀರಾಸನ, ಕುಕ್ಕುಟಾಸನ, ಪರ್ಯಂಕ, ಅರ್ಧಪರ್ಯಂಕ, ಯೇಕಪಾರ್ಶ್ವ, ಧನುಶ್ಶಯ್ಯಾ ಮೊದಲಾದ್ದನ್ನು ಮಾಡುವದು ಮೌನಮಾಡುವದು ಬಿಸಲು ಛಳಿಯಲ್ಲಿರುವದು ಮೊದಲಾದದ್ದು ಕಾಯಕ್ಲೇಶ ತಪವು ॥ ಅನಶನ ಮೊದಲಾದದ್ದು ಬಾಹ್ಯ ದ್ರವ್ಯಗಳನ್ನು ಅಪೇಕ್ಷಿಸಿ ಮಾಡುವ ತಪಸ್ಸಾದ್ದರಿಂದ ಬಾಹ್ಯ ತಪಸ್ಸೆಂದು ಹೆಸರು ॥ ಅಥವಾ ಇತರರಿಗೆ ತಾನುಮಾಡುವ ಉಪವಾಸ ಮೊದಲಾದದ್ದು ಪ್ರತ್ಯಕ್ಷವಾಗಿ ಕಾಣುವದ್ದರಿಂದ ಇದಕ್ಕೆ ಬಾಹ್ಯ ತಪಸ್ಸೆಂದು ಹೆಸರು ಬಂದಿರುತ್ತದೆ ॥ ದೇಹೇಂದ್ರಿಯಗಳನ್ನು ಸುಡುವದರಿಂದ ಇದಕ್ಕೆ ತಪಸ್ಸೆಂಬ ಹೆಸರು ಬಂದಿಷೆ॥ ೧೯ ॥

ಅ ॥ ಆರುವಿಧ ಅಂತರಂಗ ತಪಸ್ಸನ್ನು ಹೇಳುತ್ತಾರೆ.

ಸೂ ॥ ಪ್ರಾಯಶ್ಚಿತ್ತ ವಿನಯವೈಯ್ಯಾವೃತ್ಯ ಸ್ವಾಧ್ಯಾಯ ವ್ಯುತ್ಸರ್ಗಧ್ಯಾನಾನ್ಯುತ್ತರಂ ॥ ೨೦ ॥

ಟಿ ॥ ಪ್ರಾಯಶ್ಚಿತ್ತ ವಿನಯ ವೈಯ್ಯಾವೃತ್ಯ ಸ್ವಾಧ್ಯಾಯವ್ಯುತ್ಸರ್ಗಧ್ಯಾನಾನಿ - ಪ್ರಾಯಶ್ಚಿತ್ತ - ಪ್ರಮಾದದಿಂದ ವುಂಟಾದ ದೋಷ

ಗಳನ್ನು ಪರಿಹರಿಸುವದು, ವಿನಯ - ಪೂಜ್ಯರಾದಂಥಾವರುಗಳಲ್ಲಿ ವಿಶ್ವಾಸ ಮಾಡುವದು, ವೈಯ್ಯಾವೃತ್ಯ- ತಂನ ಶರೀರ ವ್ಯಾಪಾರದಿಂದಲೂ ದ್ರವ್ಯಾಂತರದಿಂದಲೂ, ಉಪಚಾರ ಮಾಡುವದು, ಸ್ವಾಧ್ಯಾಯ - ಜ್ಞಾನಭಾವನೆಯಲ್ಲಿ ಆಲಸ್ಯವನ್ನು ಬಿಡುವದು, ವ್ಯುತ್ಸರ್ಗ-ತಂನದು ಎಂಬುವಂಥಾ ಸಂಕಲ್ಪವನ್ನು ಬಿಡುವದು, ಧ್ಯಾನಾನಿ - ಚಿತ್ತ ವಿಕಲ್ಪವನ್ನು ಬಿಟ್ಟು ಆತ್ಮ ಮೊದಲಾದ ವಸ್ತುಗಳನ್ನು ಚಿಂತಿಸುವದು ಇವುಗಳು, ಉತ್ತರಂ - ಅಭ್ಯಂತರ ತಪಸ್ಸು, ಇಂತೆಂದು ಹೇಳಲ್ಪಡುತ್ತದೆ ||

ತಾ|| ೧. ಪ್ರಮಾದ ದೋಷಗಳನ್ನು ಹಾಳುಮಾಡುವದು ಪ್ರಾಯಶ್ಚಿತ್ತವು|| ೨. ಪೂಜ್ಯರಾದ ಆಚಾರ್ಯರು ಮೊದಲಾದವರಲ್ಲಿ ಪ್ರತ್ಯಕ್ಷದಲ್ಲಿ ಪ್ರತ್ಯುತ್ಥಾನಾದಿಗಳನ್ನೂ ಹಿಂದುಗಡೆ ಅವರ ಗುಣಸ್ಮರಣೆ ಮಾಡುವದು ಸಹ ವಿನಯವು || ೩. ಆಚಾರ್ಯರು ಮೊದಲಾದವರಿಗೆ ಕಾಲು ಉಜ್ಜುವದು ಮೊದಲಾದ ಉಪಚಾರವನ್ನೂ ಆಹಾರಾ ಭಯ ಭೈಷಜ್ಯ ಶಾಸ್ತ್ರ ದಾನಗಳನ್ನು ಮಾಡುವದು ಸಹ ವೈಯಾವೃತ್ಯವು || ೪. ಆಲಸ್ಯವಿಲ್ಲದೆ ಪರಮಾಗಮವನ್ನು ಸರ್ವದಾ ಪಾರಾಯಣ ಮಾಡುವದು ಸ್ವಾಧ್ಯಾಯವು || ೫. ಬಾಹ್ಯಾಭ್ಯಂತರ ಪರಿಗ್ರಹ ಬಿಡುವದು ವ್ಯುತ್ಸರ್ಗವು|| ೬. ಪಂಚಪರಮೇಷ್ಠಿಗಳನ್ನು ಮತ್ತು ಪರಮಾತ್ಮ ಸ್ವರೂಪವನ್ನು ಏಕಾಗ್ರಚಿತ್ತದಿಂದ ಚಿಂತಿಸುವದು ಧ್ಯಾನವು|| ಈ ೬ ಅಭ್ಯಂತರ ತಪಸ್ಸುಗಳು. ಇದು ಅಂತರಂಗವಾದ ಮನಸ್ಸನ್ನೇ ನಿಯಮಿಸುವದಕ್ಕೋಸ್ಕರವಾಗಿ ಮಾಡೋಣದರಿಂದ ಅಭ್ಯಂತರ ತಪಸ್ಸೆಂಬ ಹೆಸರು ಬಂದಿಧೆ ||೨೦||

ಅ || ಆರುವಿಧ ಅಭ್ಯಂತರ ತಪಸ್ಸುಗಳ ಭೇದವನ್ನು ಹೇಳುತ್ತಾರೆ.

ಸೂ || ನವ ಚತುರ್ದಶ ಪಂಚದ್ವಿಭೇದಾ ಯಥಾಕ್ರಮಂ ಪ್ರಾಗ್ಧ್ಯಾನಾತ್ || ೨೧ ||

ಟೀ || ಧ್ಯಾನಾತ್ - ಧ್ಯಾನದ್ದೆಶೆಯಿಂದ, ಪ್ರಾಕ್ - ಪೂರ್ವದಲ್ಲಿ, ಯಥಾಕ್ರಮಂ - ಕ್ರಮವನ್ನು ಅತಿಕ್ರಮಿಸದೆ, ನವ ಚತುರ್ದಶ ಪಂಚ ದ್ವಿಭೇದಾಃ - ನವ - ಒಂಭತ್ತು, ಚತುರ್ದಶ - ಹದಿನಾಲ್ಕು, ಪಂಚ - ಐದು, ದ್ವಿ - ಎರಡು, ಭೇದಾಃ - ಭೇದಗಳುಳ್ಳಂಥಾವುಗಳು ||

ತಾ ॥ ೧. ಪ್ರಾಯಶ್ಚಿತ್ತ ೯ ಪ್ರಕಾರವು, ೨. ವಿನಯ ೪ ಪ್ರಕಾರವು. ೩. ವೈಯಾವೃತ್ಯ ೧೦ ಪ್ರಕಾರವು. ೪. ಸ್ವಾಧ್ಯಾಯ ೫ ಪ್ರಕಾರವು. ೫. ಉತ್ಸರ್ಗ ೨ ಪ್ರಕಾರವು ಆಗುತ್ತಿದೆ ॥ ೨೧ ॥

ಪ್ರಾ ಯ ಶ್ಚಿ ತ್ತಾ ಧಿ ಕ ರ ಣ ಂ.

ಅ ॥ ಪ್ರಾಯಶ್ಚಿತ್ತದ ಒಂಭತ್ತು ಭೇದಗಳನ್ನು ಹೇಳುತ್ತಾರೆ.

ಸೂ ॥ ಆಲೋಚನ ಪ್ರತಿಕ್ರಮಣ ತದುಭಯ ವಿವೇಕ ವ್ಯುತ್ಸರ್ಗ ತಪಚ್ಛೇದ ಪರಿಹಾರೋಪಸ್ಥಾಪನಾಃ ॥ ೨೨ ॥

ಟೀ ॥ ಆಲೋಚನ ಪ್ರತಿಕ್ರಮಣ ತದುಭಯ ವಿವೇಕ ವ್ಯುತ್ಸರ್ಗ ತಪಚ್ಛೇದ ಪರಿಹಾರೋಪಸ್ಥಾಪನಾಃ - ಆಲೋಚನ - ಗುರುಗಳಿಗೆ ವಂಚಿಸದೆ ದೋಷವನ್ನು ಹೇಳುವದು, ಪ್ರತಿಕ್ರಮಣ - ಕಳೆದದೋಷವನ್ನು ಪುನಹ ಮಾಡುವದಿಲ್ಲ ವೆಂಬುವದು, ತದುಭಯ - ಆಲೋಚನ ಪ್ರತಿಕ್ರಮಣ ಎರಡನ್ನು ಮಾಡುವದು, ವಿವೇಕ-ದೋಷಗಳನ್ನು ನಾಶಮಾಡುವದಕ್ಕೆ ಆಗದಿರುವದ್ರವ್ಯಕ್ಷೇತ್ರಗಳನ್ನು ಬಿಡುವದು, ವ್ಯುತ್ಸರ್ಗ-ಕಾಯೋತ್ಸರ್ಗಾದಿಗಳನ್ನು ಮಾಡುವದು, ತಪಃ - ಅನಶನ ಧ್ಯಾನಾದಿಗಳನ್ನು ಮಾಡುವದು, ಛೇದ - ದಿನ ಪಕ್ಷ ಮಾಸಾದಿ ಕೃತಪ್ರವ್ರಜ್ಯಾರೂಪಣಾತ್ಮಕಚ್ಛೇದವು, ಪರಿಹಾರ - ಪಕ್ಷ ಮಾಸಾದಿ ವಿಭಾಗದಿಂದ ಪ್ರಾಯಶ್ಚಿತ್ತವನ್ನು ತೆಗದುಕೊಂಡು ದೂರದಲ್ಲಿರುವದು, ಉಪಸ್ಥಾಪನಾಃ - ಪುನಹ ದೀಕ್ಷೆ ತೆಗದುಕೊಳ್ಳುವದು, ಇವುಗಳು ೯ ಪ್ರಾಯಶ್ಚಿತ್ತದ ಭೇದಗಳು ॥

ತಾ ॥ ಪ್ರಾಯಃ ಅಂದರೆ ಅಪರಾಧ ವೆಂದು ಅರ್ಥವು. ಚಿತ್ತ ವೆಂದರೆ ಶುದ್ಧಿ ಎಂದು ಅರ್ಥವು. ಆದ್ದರಿಂದ ಅಪರಾಧವನ್ನು ಪರಿಹರಿಸುವದಕ್ಕೆ ಪ್ರಾಯಶ್ಚಿತ್ತವೆಂದು ಹೆಸರು ॥ ಆ ಪ್ರಾಯಶ್ಚಿತ್ತವು ಒಂಭತ್ತು ಪ್ರಕಾರವು ॥ ೧. ತಾನು ಮಾಡಿದ ಅಪರಾಧಗಳನ್ನು ಹತ್ತುವಿಧ ದೋಷವಿಲ್ಲದವನಾಗಿ ಗುರುವಿನಲ್ಲಿ ಹೇಳುವದು ಆಲೋಚನಾ ಪ್ರಾಯಶ್ಚಿತ್ತವು ॥ ೨. ಪೂರ್ವದಲ್ಲಿ ಮಾಡಿದ ದೋಷವನ್ನು ಪರಿಹರಿಸುವದು ಪ್ರತಿಕ್ರಮಣ ಪ್ರಾಯಶ್ಚಿತ್ತವು ॥ ೩. ಒಂದು ದೋಷವು ಆಲೋಚನಾ ಮಾತ್ರದಿಂದ ಶುದ್ಧವಾಗತಕ್ಕದ್ದು, ಮತ್ತೊಂದು ದೋಷವು ಪ್ರತಿ

ಕ್ರಮಣ ಮಾತ್ರದಿಂದ ಶುದ್ಧನಾಗತಕ್ಕದ್ದು - ಈ ಎರಡು ಸಂಭವಿಸಿದರೆ ಆ ದೋಷವನ್ನು ಈ ಆಲೋಚನ ಪ್ರತಿಕ್ರಮಣದಿಂದ ಪರಿಹರಿಸಬೇಕು. ಅದು ತದುಭಯ ಪ್ರಾಯಶ್ಚಿತ್ತವು ‖ ೪. ಅಪ್ರಾಸುಕ, ಪ್ರತ್ಯಾಖ್ಯಾನ, ವಸ್ತುಗಳಿಂದ ಸಂಬಂಧವಾದ ಉಪಕರಣಗಳನ್ನು ವಿಂಗಡಿಸಿ ಯಿರಿಸುವದು ವಿವೇಕ ಪ್ರಾಯಶ್ಚಿತ್ತವು ‖ ೫. ಕಾಲ ನಿಯಮದಿಂದ ಕಾಯೋತ್ಸರ್ಗಾದಿಗಳನ್ನು ಮಾಡುವದು ವ್ಯುತ್ಸರ್ಗ ಪ್ರಾಯಶ್ಚಿತ್ತವು ‖ ೬. ಅನಶನ ಮೊದಲಾದದ್ದೇ ತಪಃ ಪ್ರಾಯಶ್ಚಿತ್ತವು ‖ ೭. ದಿನ, ಮಾಸ, ಸಂವತ್ಸರ ಮೊದಲಾದ ವಿಭಾಗದಿಂದ ಬಿಡುವದು ಚ್ಛೇದ ಪ್ರಾಯಶ್ಚಿತ್ತವು ‖ ೮ ಪಕ್ಷ, ಮಾಸ ಮೊದಲಾದ ಕಾಲ ವಿಭಾಗದಿಂದ ಸಂಘದಿಂದ ದೂರ ಇಡುವದು ಪರಿಹಾರ ಪ್ರಾಯಶ್ಚಿತ್ತವು ‖ ೯. ಪುನರ್ದೀಕ್ಷೆ ತೆಗೆದುಕೊಳ್ಳುವದು ಉಪಸ್ಥಾಪನಾ ಪ್ರಾಯಶ್ಚಿತ್ತವು ‖ ಈ ಪ್ರಾಯಶ್ಚಿತ್ತವನ್ನು ದೇಶ, ಕಾಲ, ಶಕ್ತಿ, ಸಮಯ ಮೊದಲಾದವುಗಳಿಗೆ ವಿರೋಧವಿಲ್ಲದೆ ವೈದ್ಯನೋಪಾದಿಯಲ್ಲಿ ಮಾಡಿಸತಕ್ಕದ್ದು ‖ ೨೨ ‖

ಅ ‖ ವಿನಯವೆಂಬ ಅಭ್ಯಂತರ ತಪಸ್ಸಿನ ಭೇದವನ್ನು ಹೇಳುತ್ತಾರೆ.

ಸೂ ‖ ಜ್ಞಾನದರ್ಶನಚಾರಿತ್ರೋಪಚಾರಾಃ ‖ ೨೩. ‖

ಟೀ ‖ ಜ್ಞಾನದರ್ಶನಚಾರಿತ್ರೋಪಚಾರಾಃ - ಜ್ಞಾನ - ಜ್ಞಾನ ವಿನಯವು, ದರ್ಶನ - ದರ್ಶನ ವಿನಯವು, ಚಾರಿತ್ರ - ಚಾರಿತ್ರ ವಿನಯವು, ಉಪಚಾರಾಃ - ಉಪಚಾರ ವಿನಯವು. ಇವುಗಳು ೪ ವಿನಯ ತಪಸ್ಸಿನ ಭೇದಗಳು ‖ ತಾ ‖ ೧, ದ್ರವ್ಯಕ್ಷೇತ್ರ, ಕಾಲ, ಭಾವ ವಿಶುದ್ಧಿಗಳನ್ನು ಮಾಡಿ ಮೋಕ್ಷನಿಮಿತ್ತವಾಗಿ ಭಕ್ತಿಯಿಂದ ಆಗಮವನ್ನು ಓದುವದು ಜ್ಞಾನ ವಿನಯವು ‖ ೨. ದೇವರು ಗುರು ಶಾಸ್ತ್ರಗಳನ್ನು ನಿಶ್ಶಂಕೆ ಮೊದಲಾದ ಗುಣಗಳಿಂದಕೂಡಿ ನಂಬುವದು ದರ್ಶನ ವಿನಯವು ‖ ೩. ಚಾರಿತ್ರದಲ್ಲು ಆಚಾರಿತ್ರವಂತರಲ್ಲು ಭಕ್ತಿ ಪ್ರೀತಿಯು ಚಾರಿತ್ರ ವಿನಯವು ‖ ೪. ಆಚಾರ್ಯಾದಿಗಳಿಗೆ ಅಭ್ಯುತ್ಥಾನ ಮೊದಲಾದ ಮರ್ಯಾದೆ ಮಾಡುವದು ಅವರ ಗುಣಗಳನ್ನು ಸ್ಮರಿಸುವದು ಸಹ ಉಪಚಾರ ವಿನಯವು. ಎಂದು ವಿನಯಾಭ್ಯಂತರ ತಪಸ್ಸು ೪ ಪ್ರಕಾರವಾಗಿ ಆಗುತ್ತದೆ ‖ ೨೩ ‖

## ವೈ ಯ್ಯಾ ಪೃ ತ್ಯಾ ಧಿ ಕ ರ ಣಂ.

ಅ ‖ ವೈಯ್ಯಾವೃತ್ಯದ ಹತ್ತು ಭೇದಗಳನ್ನು ಹೇಳುತ್ತಾರೆ.

ಸೂ ‖ ಆಚಾರ್ಯೋಪಾಧ್ಯಾಯ ತಪಸ್ವಿಶೈಕ್ಷಗ್ಲಾನಗ
ಣ ಕುಲ ಸಂಘ ಸಾಧು ಮನೋಜ್ಞಾನಾಂ ‖ ೨೪ ‖

ಟೀ ‖ ಆಚಾರ್ಯೋಪಾಧ್ಯಾಯ ತಪಸ್ವಿಶೈಕ್ಷಗ್ಲಾನ ಗಣ ಕುಲ ಸಂಘ ಸಾಧು ಮನೋಜ್ಞಾನಾಂ - ಆಚಾರ್ಯ - ಆಚಾರ್ಯರು, ಉಪಾಧ್ಯಾಯ - ಉಪಾಧ್ಯಾಯರು, ತಪಸ್ವಿ - ತಪಸ್ವಿಗಳು, ಶೈಕ್ಷ - ಆಗಮವನ್ನು ವೋದುವರು, ಗ್ಲಾನ - ರೋಗಿಷ್ಟರು, ಗಣ - ಸ್ಥವಿರರುಗಳ ಸಂತತಿ ( ದೊಡ್ಡ ಯತಿಗಳ ಪರಿಪಾಟಿ ) ಗಳು, ಕುಲ - ದೀಕ್ಷಕಾಚಾರ್ಯರ ಶಿಷ್ಯ ಸಂತಾನವು, ಸಂಘ = ಚಾತುರ್ವರ್ಣ್ಯ ಸಂಘವು, ಸಾಧು - ಬಹುಕಾಲದ ತಪಸ್ವಿಯು, ಮನೋಜ್ಞಾನಾಂ - ಗಮಕತ್ವ ಮಹಾ ಕುಲಾದಿಗಳಿಂದ ವಿಶಿಷ್ಟನಾಗಿರುವ ಸಂಯತನು ಅಸಂಯತ ಸಮ್ಯಗ್ದೃಷ್ಟಿ ಎಂಬುವ ಇವರುಗಳಿಗೆ, ಉಪಚಾರ ಮಾಡುವದು ವೈಯ್ಯಾವೃತ್ಯವು ‖

ತಾ ‖ ವೈಯ್ಯಾವೃತ್ಯವು ೧೦ ಭೇದವು ‖ ಆಚಾರ್ಯರು ಮೊದಲಾದವರಿಗೆ ಪರೀಷಹ ಮಿಥ್ಯಾತ್ವ ರೋಗ ಮೊದಲಾದವು ಸಂಭವಿಸಿದರೆ ಅದನ್ನು ಪರಿಹರಿಸುವದು ಧರ್ಮೋಪಚಾರಗಳನ್ನು ಮಾಡುವದು ಇದಕ್ಕೆ ವೈಯ್ಯಾವೃತ್ಯ ವೆಂಬುವ ಹೆಸರು ಆಗುತ್ತದೆ ‖ ೧. ಸ್ವರ್ಗಾಪವರ್ಗ ಸುಖಗಳಿಗೆ ಕಾರಣವಾದ ವ್ರತಾಚರಣೆಯಲ್ಲಿ ತಾನಿರುವರು ಇತರರು ಆ ಆಚರಣೆಯನ್ನು ಮಾಡುವಂತೆ ಮಾಡುವರು ಮತ್ತು ಪಂಚಾಚಾರವನ್ನು ಧರಿಸಿರುವರು ಇವರುಗಳಿಗೆ ಮಾಡುವ ವೈಯ್ಯಾವೃತ್ಯಕ್ಕೆ ಆಚಾರ್ಯ ವೈಯ್ಯಾವೃತ್ಯವೆಂದು ಹೆಸರು ‖ ೨. ಷಡ್ದ್ರವ್ಯ ಪಂಚಾಸ್ತಿಕಾಯ ಸಪ್ತ ತತ್ವ ನವಪದಾರ್ಥಗಳನ್ನು ತಾವು ಅಧ್ಯಯನ ಮಾಡುವದು ಇತರರಿಗೆ ಅಧ್ಯಯನ ಮಾಡಿಸುವದು ಇಂಥಾವರು ಉಪಾಧ್ಯಾಯರು ಇವರಿಗೆ ಮಾಡುವವೈಯ್ಯಾವೃತ್ಯವು ಉಪಾಧ್ಯಾಯವೈಯ್ಯಾವೃತ್ಯವು ಆಗುತ್ತದೆ‖ ೩. ಮಹೋಪವಾಸ ಮೊದಲಾದ ತಪಸ್ಸು ಮಾಡುವರಿಗೆ ಮಾಡುವ ವೈಯ್ಯಾವೃತ್ಯಕ್ಕೆ ತಪಸ್ವಿ ವೈಯ್ಯಾವೃತ್ಯವೆಂದು ಹೆಸರು ‖ ೪. ಶ್ರುತಜ್ಞಾನಾಭ್ಯಾಸಿಗಳಿಗೆ ನಿರಂತರ ವ್ರತದಲ್ಲಿರುವರಿಗೆ ಶೈಕ್ಷರೆಂದು ಹೆಸರು

ಇವರಿಗೆ ಮಾಡುವ ವೈಯ್ಯಾವೃತ್ಯಕ್ಕೆ ಶೈಕ್ಷ ವೈಯ್ಯಾವೃತ್ಯವೆಂದು ಹೆಸರು ‖ ೫. ರೋಗಾದಿಗಳಿಂದ ಪೀಡಿತವಾದ ಶರೀರವುಳ್ಳವರು ಗ್ಲಾನರು ಇವರ ವೈಯ್ಯಾವೃತ್ಯಕ್ಕೆ ಗ್ಲಾನ ವೈಯ್ಯಾವೃತ್ಯವೆಂದು ಹೆಸರು ‖ ೬. ಸ್ಥವಿರ ಸಂತತಿಯವರ ವೈಯ್ಯಾವೃತ್ಯಕ್ಕೆ ಗಣ ವೈಯ್ಯಾವೃತ್ಯವೆಂದು ಹೆಸರು ‖ ೭. ದೀಕ್ಷಾಚಾರ್ಯರ ಶಿಷ್ಯಾಮ್ನಾಯದವರ ವೈಯ್ಯಾವೃತ್ಯವು ಕುಲ ವೈಯ್ಯಾವೃತ್ಯವೆಂದಾಗುತ್ತದೆ‖ ೮. ಚಾತುರ್ವರ್ಣ್ಯಸಂಯಮಿ ನಿವಹ ರೂಪರ (೪ ವಿಧ ಮುನಿ ಸಂಘದ) ವೈಯ್ಯಾವೃತ್ಯಕ್ಕೆ ಸಂಘವೈಯ್ಯಾವೃತ್ಯವೆಂದು ಹೆಸರು ‖ ೯. ಬಹುಕಾಲದಿಂದ ದೀಕ್ಷಿತರಾದವರು ಸಾಧುಗಳು ಇವರ ವೈಯ್ಯಾವೃತ್ಯಕ್ಕೆ ಸಾಧು ವೈಯ್ಯಾವೃತ್ಯವೆಂದು ಹೆಸರು ‖ ೧೦. ವಿದ್ವತ್ವ ಮಹಾಕುಲತ್ವಾದಿಗಳಿಂದ ಶಿಷ್ಟ ಸಂಮತನು ವ್ರತ ದೀಕ್ಷಾಭಿಮುಖನು ಅಸಂಯತ ಸಮ್ಯಗ್ದೃಷ್ಟಿಯು ಎಂಬುವ ಹೆಸರುಳ್ಳವರು ಮನೋಜ್ಞರು. ಇವರ ವೈಯ್ಯಾವೃತ್ಯಕ್ಕೆ ಮನೋಜ್ಞ ವೈಯ್ಯಾವೃತ್ಯವೆಂದು ಹೆಸರು ‖ ೨೪ ‖

## ಸ್ವಾ ಧ್ಯಾ ಯಾ ಧಿ ಕ ರ ಣ ಂ.

ಅ ‖ ಸ್ವಾಧ್ಯಾಯದ ಭೇದವನ್ನು ಹೇಳುತ್ತಾರೆ.

ಸೂ ‖ ವಾಚನಾಪೃಚ್ಛನಾನುಪ್ರೇಕ್ಷಾಮ್ನಾಯ ಧರ್ಮೋಪದೇಶಾಃ ‖ ೨೫ ‖

ಟೀ ‖ ವಾಚನಾಪೃಚ್ಛನಾನುಪ್ರೇಕ್ಷಾಮ್ನಾಯಧರ್ಮೋಪದೇಶಾಃ - ವಾಚನಾ - ಪಾಪರಹಿತವಾದ ಗ್ರಂಥಗಳನ್ನು ವೋದುವದು, ಪೃಚ್ಛನಾ - ಸಂದೇಹ ನಿವೃತ್ಯರ್ಥವಾಗಿ ಕೇಳುವುದು, ಅನುಪ್ರೇಕ್ಷಾ - ಪುನಃ ಚಿಂತನೆ ಮಾಡುವದು, ಆಮ್ನಾಯ - ಕಂಠತಃ ನಿಲ್ಲುವಹಾಗೆ ಆವರ್ತಿಮಾಡುವದು, ಧರ್ಮೋಪದೇಶಾಃ - ಧರ್ಮವನ್ನು ಉಪದೇಶ ಮಾಡುವದು, ಇವುಗಳು, ಸ್ವಾಧ್ಯಾಯದ ಭೇದಗಳು ‖

ತಾ ‖ ೧. ನಿರವದ್ಯವಾದ ಗ್ರಂಥಗಳನ್ನು ಅರ್ಥಗಳನ್ನು ತಾನು ವೋದುವದು ಅನ್ಯರಿಗೆ ಬೋಧಿಸುವದು ಸಹ ವಾಚನಾ ಯೆಂಬುವದು ಆಗುತ್ತದೆ ‖ ೨. ಆತ್ಮೋನ್ನತಿ, ಅನ್ಯರ ವಂಚನೆ, ಪರಿಹಾಸ ಮೊದಲಾದ ದೋಷಗಳನ್ನು ಬಿಟ್ಟು ಕೇವಲ ಸಂಶಯ ಪರಿಹಾರಕ್ಕೋಸ್ಕರ

ವಾಗಿ ಅನ್ಯರನ್ನು ಪ್ರಶ್ನೆ ಮಾಡುವದು ಪೃಚ್ಛನಾ ಯೆಂಬುವದಾಗುತ್ತದೆ|| ೩. ಐಹಿಕ ಫಲಾಪೇಕ್ಷೆ ಯಿಲ್ಲದೆ ದೃತ ವಿಲಂಬಿತಾದಿ ದೋಷಗಳಿಲ್ಲದೆ ಗ್ರಂಥಾರ್ಥವನ್ನು ಮರಳಿ ಮರಳಿ ಬಾಯಿಂದ ಉಚ್ಚಾರ ಮಾಡುವದು ಆಮ್ನಾಯ ವೆಂಬುವದಾಗುತ್ತದೆ || ೪. ದುಷ್ಟಪ್ರಯೋಜನ ವಿಲ್ಲದೆ ಮಿಥ್ಯಾತ್ವ ಮೊದಲಾದ ಹುಚ್ಚು ಮಾರ್ಗಗಳನ್ನು ಹೋಗಲಾಡಿಸುವದಕ್ಕೋಸ್ಕರಲೂ ಸಂದೇಹ ಪರಿಹರಕ್ಕೋಸ್ಕರಲೂ, ಅಪೂರ್ವವಾದ ಪದಾರ್ಥಗಳನ್ನು ಪ್ರಕಾಶ ಮಾಡುವದಕ್ಕೋಸ್ಕರಲೂ ಧರ್ಮ ಕಥೆಗಳನ್ನು ಉಪದೇಶ ಮಾಡುವದು ಧರ್ಮೋಪದೇಶ ವೆಂಬುವ ದಾಗುತ್ತದೆ || ಈ ೫ ಸ್ವಾಧ್ಯಾಯವೆಂಬ ತಪಸ್ಸಿನ ಭೇದಗಳು ಆಗುತ್ತವೆ || ೨೫ ||

ವ್ಯುತ್ಸರ್ಗಾಧಿಕರಣಂ.

ಅ || ವ್ಯುತ್ಸರ್ಗ ತಪಸ್ಸು ಎರಡು ಭೇದವೆಂದು ಹೇಳುತ್ತಾರೆ.

ಸೂ || ಬಾಹ್ಯಾಭ್ಯಂತರೋಪಧ್ಯೋಃ || ೨೬ ||

ಟೀ || ಬಾಹ್ಯಾಭ್ಯಂತರೋಪಧ್ಯೋಃ - ಬಾಹ್ಯ - ಹೊರಗಿನ, ಅಭ್ಯಂತರ - ವೊಳಗಿನ, ಉಪಧ್ಯೋಃ - ಪರಿಗ್ರಹಗಳ, ನಿವೃತ್ತಿಯ ಭೇದದಿಂದ ವ್ಯುತ್ಸರ್ಗವು ಎರಡು ಭೇದವು ||

ತಾ || ಕ್ಷೇತ್ರ ಮನೆ ಮೊದಲಾದ ೧೦ ಬಾಹ್ಯ ಪರಿಗ್ರಹಗಳನ್ನು ಬಿಡುವದು ಬಾಹ್ಯೋಪಧಿ ವ್ಯುತ್ಸರ್ಗವು || ೨. ಕ್ರೋಧಾದಿ ಮಿಥ್ಯಾತ್ವ ಹಾಸ್ಯಾದಿ ಅಭ್ಯಂತರ ಪರಿಗ್ರಹಗಳನ್ನು ಬಿಡುವದು ಅಭ್ಯಂತರೋಪಧಿ ವ್ಯುತ್ಸರ್ಗವು ಎಂದು ವ್ಯುತ್ಸರ್ಗವು ೨ ಪ್ರಕಾರವು ||೨೬||

ಧ್ಯಾನಾಧಿಕರಣಂ.

ಅ || ಧ್ಯಾನಕ್ಕೆ ಅಧಿಕಾರಿ, ಧ್ಯಾನ ಲಕ್ಷಣಸಹ ಹೇಳುತ್ತಾರೆ.

ಸೂ || ಉತ್ತಮಸಂಹನನಸ್ಯೈಕಾಗ್ರಚಿಂತಾ ನಿರೋಧೋ ಧ್ಯಾನಮಾಂತರ್ಮುಹೂರ್ತಾತ್ || ೨೭ ||

ಟೀ || ಉತ್ತಮಸಂಹನನಸ್ಯ - ಮೊದಲ ಮೂರು ಸಂಹನನವುಳ್ಳವನಿಗೆ, ಅಂತರ್ಮುಹೂರ್ತಾತ್ - ಅಂತರ್ಮುಹೂರ್ತ ಕಾಲಪರ್ಯಂತರ, ಏಕಾಗ್ರ ಚಿಂತಾನಿರೋಧಃ - ಏಕಾಗ್ರ - ಮುಖ್ಯವಾದ ಒಂದು ವಸ್ತು

ವಿನಲ್ಲಿ, ಚಿಂತಾನಿರೋಧಃ - ಮನಸ್ಸನ್ನು ಚಲಿಸದೇ ಯಿರಿಸುವದು, ಧ್ಯಾನಂ - ಧ್ಯಾನವೆಂಬುವದು, ಆಗುತ್ತದೆ ॥

ತಾ ॥ ಆರು ಸಂಹನನಗಳಲ್ಲಿ ಮೊದಲ ಮೂರು ಅಂದರೆ ೧ ವಜ್ರ ವೃಷಭ ನಾರಾಚ ಸಂಹನನ - ೨ ವಜ್ರ ನಾರಾಚ ಸಂಹನನ - ೩ ನಾರಾಚ ಸಂಹನನ- ಈ ೩ ಕ್ಕೂ ಉತ್ತಮ ಸಂಹನನವೆಂಬು ಹೆಸರು. ಈ ಸಂಹನನದವರೇ ಧ್ಯಾನಮಾಡುವದಕ್ಕೆ ಶಕ್ತಿಯುಳ್ಳವರು. ಧ್ಯಾನವು ಹೆಚ್ಚಾಗಿ ನಿಂತರೆ ಅಂತರ್ಮುಹೂರ್ತಕಾಲದವರಿಗೆ ನಿಲ್ಲುತ್ತದೆ. ವಜ್ರ ವೃಷಭ ನಾರಾಚ ಸಂಹನನ ವಂದೇಯೇ ಮೋಕ್ಷವಾಗುವದಕ್ಕೆ ಕಾರಣಭೂತವಾಗಿದೆ ॥ ಮನಸ್ಸನ್ನು ಇತರ ವ್ಯಾಪಾರದಿಂದ ಬಿಡಿಸಿ ಒಂದೇ ಪದಾರ್ಥದಲ್ಲಿ ನಿಶ್ಚಂಚಲವಾಗಿ ಇರಿಸುವದು ಧ್ಯಾನವೆಂಬುವದು ಆಗುತ್ತದೆ. ಇದನ್ನೆ ಏಕಾಗ್ರ ಚಿಂತಾ ನಿರೋಧವೆಂತಲೂ ಹೇಳಬಹುದು॥

ಅ ॥ ಧ್ಯಾನವು ನಾಲ್ಕು ಭೇದವೆಂದು ಹೇಳುತ್ತಾರೆ.

ಸೂ ॥ ಆರ್ತ ರೌದ್ರ ಧರ್ಮ ಶುಕ್ಲಾನಿ ॥ ೨೮ ॥

ಟೀ ॥ ಆರ್ತ ರೌದ್ರ ಧರ್ಮ ಶುಕ್ಲಾನಿ - ಆರ್ತ - ಆರ್ತಧ್ಯಾನವು, ರೌದ್ರ - ರೌದ್ರಧ್ಯಾನವು, ಧರ್ಮ - ಧರ್ಮಧ್ಯಾನವು, ಶುಕ್ಲಾನಿ - ಶುಕ್ಲಧ್ಯಾನವು ಇವುಗಳು ೪ ಧ್ಯಾನ ಭೇದಗಳು ॥

ತಾ ॥ ೧ ಆರ್ತಧ್ಯಾನ, ೨ ರೌದ್ರಧ್ಯಾನ, ೩ ಧರ್ಮಧ್ಯಾನ, ೪ ಶುಕ್ಲಧ್ಯಾನ, ಎಂಬು ಧ್ಯಾನಗಳು ೪ ವಿಧಗಳು ॥ ೧ ದುಃಖವಿಷಯವಾದಂಥಾ ಪರಿಣಾಮವು ಆರ್ತಧ್ಯಾನವು ॥ ೨. ಕ್ರೂರವ್ಯಾಪಾರವನ್ನೇ ವಿಷಯ ವಾಗಿವುಳ್ಳಂಥಾ ಮನಃ ಪರಿಣಾಮವು ರೌದ್ರಧ್ಯಾನವು ॥ ೩. ಪದಾರ್ಥಗಳ ಯಥಾಸ್ಥಿತ ಸ್ವಭಾವ ಧರ್ಮವನ್ನು ವಿಷಯವಾಗಿ ವುಳ್ಳಂಥಾ ಮನಃ ಪರಿಣಾಮವು ಧರ್ಮಧ್ಯಾನವು ॥ ೪. ಆತ್ಮ ಪರಿಣಾಮ ಸ್ವರೂಪವೇ ಶುಕ್ಲಧ್ಯಾನವು ॥ ಆರ್ತ ರೌದ್ರಧ್ಯಾನಗಳು ಅಪ್ರಶಸ್ತಧ್ಯಾನಗಳು ॥ ಧರ್ಮ ಶುಕ್ಲ ಧ್ಯಾನಗಳು ಪ್ರಶಸ್ತಧ್ಯಾನಗಳು ॥ ೨೮ ॥

ಅ ॥ ಪ್ರಶಸ್ತಧ್ಯಾನಗಳೇ ಮೋಕ್ಷಕ್ಕೆ ಹೇತುಗಳೆಂದು ಹೇಳುತ್ತಾರೆ.

ಸೂ ॥ ಪರೇ ಮೋಕ್ಷ ಹೇತೂ ॥ ೨೯ ॥

ಟೀ ॥ ಪರೇ- ಧರ್ಮ ಶುಕ್ಲಧ್ಯಾನಗಳು, ಮೋಕ್ಷಹೇತೂ - ಮೋ

ಕ್ಷಕ್ಕೆ ಕಾರಣವಾದಂಥಾವುಗಳು ಎಂದು ಹೇಳಿದ್ದರಿಂದ ಉಳಿದ ಆರ್ತ ರೌದ್ರಧ್ಯಾನಗಳೆರಡು ಸಂಸಾರಕ್ಕೆ ಕಾರಣಗಳು ಆಗುತ್ತವೆ ॥ ೨೯ ॥

### ಆರ್ತಧ್ಯಾನಾಧಿಕರಣಂ.

ಅ ॥ ಆರ್ತಧ್ಯಾನದ ನಾಲ್ಕು ಭೇದಗಳಲ್ಲಿ ೧ ನೇದು ಹೇಳುತ್ತಾರೆ.

ಸೂ ॥ ಆರ್ತಮಮನೋಜ್ಞಸ್ಯ ಸಂಪ್ರಯೋಗೇ ತದ್ವಿ
ಪ್ರಯೋಗಾಯ ಸ್ಮೃತಿಸಮನ್ವಾಹಾರಃ ॥ ೩೦ ॥

ಟೀ ॥ ಅಮನೋಜ್ಞಸ್ಯ - ತನಗೆ ಪ್ರೀತಿಯಿಲ್ಲದ ವಿಷ ಶಸ್ತ್ರ ಮುಳ್ಳು, ಮೊದಲಾದ ಬಾಧಾಕರ ದ್ರವ್ಯದ, ಸಂಪ್ರಯೋಗೇ - ಸಂಬಂಧ ಉಂಟಾಗುತ್ತಿರಲಾಗಿ, ತದ್ವಿಪ್ರಯೋಗಾಯ- ತತ್ - ಆವಿಷಾದಿ ದ್ರವ್ಯಗಳ, ವಿಪ್ರಯೋಗಾಯ - ಅಗಲಿಕೆ ಯಾಗುವದಕ್ಕೋಸ್ಕರ, ಸ್ಮೃತಿಸಮನ್ವಾಹಾರಃ - ಅನವರತದಲ್ಲಿಯೂ ಚಿಂತಿಸುವದು, ಆರ್ತಂ - ಅನಿಷ್ಟ ಸಂಯೋಗ ವೆಂಬುವಂಥಾ ಮೊದಲನೇ ಆರ್ತಧ್ಯಾನವು ಆಗುತ್ತದೆ ॥

ತಾ ॥ ೧ ಅನಿಷ್ಟಸಂಯೋಗ. ೨ ಇಷ್ಟವಿಯೋಗ. ೩ ವೇದನ. ೪ ನಿದಾನ ವೆಂದು ಆರ್ತಧ್ಯಾನ ೪ ಪ್ರಕಾರವು ॥ ಪ್ರೀತಿಯಿಲ್ಲದೆ ಯಿರುವ ವಿಷ ಆಯುಧ ಮುಳ್ಳು ಶತ್ರು ಮೊದಲಾದವುಗಳ ಸಂಬಂಧವಾದರೆ ಆ ಅನಿಷ್ಟ ವಸ್ತುಗಳು ಎಷ್ಟುಹೊತ್ತಿಗೆ ಹೋದೀತೆಂದು ಅನವರತವು ಚಿಂತಿಸುವದಕ್ಕೆ ಅನಿಷ್ಟ ಸಂಯೋಗವೆಂದು ಹೆಸರು ಅದು ಮೊದಲನೇ ಆರ್ತಧ್ಯಾನ ವಾಗುತ್ತದೆ ॥ ೩೦ ॥

ಅ ॥ ಇಷ್ಟವಿಯೋಗವೆಂಬ ೨ ನೇ ಆರ್ತಧ್ಯಾನವನ್ನು ಹೇಳುತ್ತಾರೆ:

ಸೂ ॥ ವಿಪರೀತಂ ಮನೋಜ್ಞಸ್ಯ ॥ ೩೧ ॥

ಟೀ ॥ ಮನೋಜ್ಞಸ್ಯ- ಪುತ್ರ ಕಳತ್ರ ಮೊದಲಾದ ತನಗೆ ಇಷ್ಟವಾದ ದ್ರವ್ಯಕ್ಕೆ, ವಿಪರೀತಂ - ಪೂರ್ವದಲ್ಲಿ ಹೇಳಿದ್ದಕ್ಕೆ ವಿಪರೀತವು ॥

ತಾ ॥ ತನಗೆ ಪ್ರೇಮಾಸ್ಪದವಾದಂಥಾ ಪುತ್ರ ಮಿತ್ರ ಕಳತ್ರ ಮೊದಲಾದ ವಸ್ತುಗಳು ಅಗಲಿಕೆಯಾದರೆ ಪುನಃ ಆ ವಸ್ತುಗಳ ಸಂಬಂಧವು ಎಷ್ಟುಹೊತ್ತಿಗೆ ಆದೀತೆಂದು ಎಡಬಿಡದೆ ಚಿಂತಿಸುವದು ಇಷ್ಟ ವಿಯೋಗವೆಂಬ ೨ನೇ ಆರ್ತಧ್ಯಾನವು ಆಗುತ್ತದೆ ॥ ೩೧ ॥

ಅ ॥ ಮೂರನೇ ಆರ್ತಧ್ಯಾನದ ಲಕ್ಷಣವನ್ನು ಹೇಳುತ್ತಾರೆ.

ಸೂ ॥ ವೇದನಾಯಾಶ್ಚ ॥ ೩೨ ॥

ಟೀ ॥ ವೇದನಾಯಾಶ್ಚ - ವಾತಪಿತ್ತ ಶ್ಲೇಷ್ಮಾದಿ ವಿಕಾರದಿಂದ ಉಂಟಾದ ಅಕ್ಷಿ ಕುಕ್ಷಿ ಮೊದಲಾದ ರೋಗಗಳು ನನಗೆ ಯಾವಾಗಹೋದೀತೆಂ ಬಚಿಂತೆಯು ನಿರಂತರವಾಗಿ ಇರುವದು ಕೂಡ ವೇದನಾರ್ತವು ॥

ತಾ ॥ ರೋಗಗಳಿಂದ ಉಂಟಾದಂಥ ದುಃಖಗಳನ್ನು ಸಹಿಸಲಾರದೆ ಈ ರೋಗ ಯಾವಾಗ ಹೋದೀತೆಂದು ನಿರಂತರ ಚಿಂತಿಸುವದು. ೩ನೇ ವೇದನಾ ಆರ್ತಧ್ಯಾನವು ಆಗುತ್ತದೆ ॥ ೩೨ ॥

ಅ ॥ ನಾಲ್ಕನೇ ಆರ್ತಧ್ಯಾನದ ಲಕ್ಷಣವನ್ನು ಹೇಳುತ್ತಾರೆ.

ಸೂ ॥ ನಿದಾನಂ ಚ ॥ ೩೩ ॥

ಟೀ ॥ ನಿದಾನಂಚ - ನಿದಾನವೂಕೂಡ ೪ ನೇ ಆರ್ತಧ್ಯಾನವು ॥

ತಾ ॥ ಅತ್ಯಂತ ಅಭಿಲಾಷೆಯಿಂದ ಬರದೇ ಯಿರುವಂಥ ಮುಂದೆ ಆಗತಕ್ಕಂಥಾ ಭೋಗೋಪ ಭೋಗ ವಸ್ತುಗಳನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ನಿರಂತರ ಚಿಂತಿಸುವದು ನಿದಾನವೆಂಬ ೪ ನೇ ಆರ್ತಧ್ಯಾನವು ಆಗುತ್ತದೆ ॥ ೩೩ ॥

ಅ ॥ ಆರ್ತಧ್ಯಾನಕ್ಕೆ ಸ್ವಾಮಿಗಳನ್ನು ಹೇಳುತ್ತಾರೆ.

ಸೂ ॥ ತದವಿರತ ದೇಶವಿರತ ಪ್ರಮತ್ತ ಸಂಯತಾನಾಂ ॥ ೩೪ ॥

ಟೀ ॥ ತದವಿತ ದೇಶವಿರತಪ್ರಮತ್ತ ಸಂಯತಾನಾಂ - ತತ್ - ಆ ಆರ್ತಧ್ಯಾನವು, ಅವಿರತ - ಅವ್ರತನು, ದೇಶವಿರತ - ಶ್ರಾವಕನು, ಪ್ರಮತ್ತಸಂಯತಾನಾಂ-ಆರನೇ ಗುಣಸ್ಥಾನದವನಾದ ಪ್ರಮತ್ತ ಸಂಯತನು ಇವರುಗಳಿಗೆ, ಆಗುತ್ತದೆ॥

ತಾ ॥ ಮಿಥ್ಯಾದೃಷ್ಟಿ, ಸಾಸಾಧನ, ಮಿಶ್ರ, ಅವಿರತ, ದೇಶವಿರತ, ಈ ಐದು ಗುಣಸ್ಥಾನದವರಿಗೂ ನಾಲ್ಕು ಪ್ರಕಾರವಾದ ಆರ್ತಧ್ಯಾನಗಳು ಉಂಟಾಗುತ್ತದೆ ॥ ಪ್ರಮತ್ತ ಗುಣಸ್ಥಾನದವನಿಗೆ ನಿದಾನವೆಂಬ ಆರ್ತಧ್ಯಾನವು ಪ್ರಮಾದೋದ್ರೇಕದಿಂದ ಕದಾಚಿತ್ ಉಂಟಾಗುತ್ತದೆ ॥ ೩೪ ॥

ರೌದ್ರಧ್ಯಾನಾಧಿಕರಣಂ.

ಅ || ರೌದ್ರಧ್ಯಾನದ ಲಕ್ಷಣವನ್ನು ಅಧಿಕಾರಿಯನ್ನು ಹೇಳುತ್ತಾರೆ.

ಸೂ || ಹಿಂಸಾನೃತಸ್ತೇಯ ವಿಷಯ ಸಂರಕ್ಷಣೇಭ್ಯೋ ರೌದ್ರಮವಿರತ ದೇಶವಿರತಯೋಃ || ೩೫ ||

ಟೀ || ಹಿಂಸಾನೃತಸ್ತೇಯ ವಿಷಯ ಸಂರಕ್ಷಣೇಭ್ಯಃ - ಹಿಂಸಾ-ಕೊಲೆಯು, ಅನೃತ - ಸುಳ್ಳು, ಸ್ತೇಯ - ಕಳವು, ವಿಷಯಸಂರಕ್ಷಣೇಭ್ಯಃ - ಪರಿಗ್ರಹಗಳನ್ನು ಸಂರಕ್ಷಿಸುವದು, ಇವುಗಳ ದೆಸೆಯಿಂದ, ರೌದ್ರಂ - ರೌದ್ರಧ್ಯಾನವು. ಅವಿರತ ದೇಶವಿರತಯೋಃ - ಅವಿರತ - ಅವಿರತನು, ದೇಶವಿರತಯೋಃ - ದೇಶವಿರತನು ಇವರುಗಳಿಗೆ (ಉಂಟಾಗುತ್ತದೆ)||ತಾ || ೧ ಹಿಂಸಾನಂದ. ೨ ಮೃಷಾನಂದ. ೩ ಸ್ತೇಯಾನಂದ. ೪ ಸಂರಕ್ಷಣಾ ನಂದ ವೆಂದು ರೌದ್ರಧ್ಯಾನ ೪ ಪ್ರಕಾರವಾಗಿ ಆಗುತ್ತದೆ|| ೧. ಪ್ರಾಣಿಗಳ ಅವಯವವನ್ನು ಕತ್ತರಿಸುವದು, ಬರೆ ಹಾಕುವದು ಮೊದಲಾದ ಮನಃಪರಿಣಾಮಕ್ಕೆ ಹಿಂಸಾನಂದವೆಂದು ಹೆಸರು || ೨. ಸುಳ್ಳುಮಾತಿನಿಂದ ಅನ್ಯರನ್ನು ವಂಚಿಸುವ ಅಭಿಪ್ರಾಯವೇ ಮೃಷಾನಂದವಾಗುತ್ತದೆ || ೩. ಅನ್ಯರ ದ್ರವ್ಯವನ್ನು ಅಪಹರಿಸಬೇಕೆಂಬ ಅಭಿಪ್ರಾಯವೆ ಸ್ತೇಯಾನಂದ ವಾಗುತ್ತದೆ || ೪. ದ್ರವ್ಯ ಪುತ್ರ ಮಿತ್ರಾದಿ ಪರಿಗ್ರಹವನ್ನು ಸಂಪಾದಿಸಬೇಕು ಇವುಗಳನ್ನ ನಾಶವಿಲ್ಲದಹಾಗೆ ರಕ್ಷಿಸಬೇಕೆಂಬ ಚಿಂತೆಯು ಸಂರಕ್ಷಣಾನಂದ ವೆಂಬುವದಾಗುತ್ತದೆ || ಮಿಥ್ಯಾದೃಷ್ಟಿ, ಸಾಸಾಧನ, ಮಿಶ್ರ, ಅವಿರತ, ದೇಶವಿರತ ಈ ೫ ಗುಣಸ್ಥಾನದವರು ಕೊಲೆ ಮೊದಲಾದ ಅವ್ರತ ಪರಿಣಾಮವುಳ್ಳವರಾದಕಾರಣ ಇವರುಗಳಿಗೆ ರೌದ್ರಧ್ಯಾನ ಉಂಟಾಗುತ್ತದೆ || ದೇಶವಿರತರಿಗೆ ಕೊಲೆಮೊದಲಾದವುಗಳಿಲ್ಲದಿದ್ದರೂ ಹಿಂಸೆ ಮೊದಲಾದವುಗಳಲ್ಲಿ ಆಗ್ರಹ ಇರುವದಲ್ಲದೆ ಧನಧಾನ್ಯಾದಿಗಳ ಸಂರಕ್ಷಣಾ ಪರಿಣಾಮ ವಿರುವದ್ದರಿಂದ ರೌದ್ರಧ್ಯಾನ ಸಂಭವಿಸುತ್ತದೆ || ೩೫ ||

ಧರ್ಮ್ಯಧ್ಯಾನಾಧಿಕರಣಂ,

ಅ || ಧರ್ಮ್ಯಧ್ಯಾನದ ನಾಲ್ಕು ಭೇದಗಳನ್ನು ಹೇಳುತ್ತಾರೆ.

ಸೂ || ಆಜ್ಞಾಪಾಯ ವಿಪಾಕ ಸಂಸ್ಥಾನ ವಿಚಯಾಯ ಧರ್ಮ್ಯಂ||

ಟೀ ॥ ಆಜ್ಞಾಪಾಯ ವಿಪಾಕಸಂಸ್ಥಾನ ವಿಚಯಾಯ- ಆಜ್ಞಾ -ಸರ್ವಜ್ಞನಿಂದ ಹೇಳಲ್ಪಟ್ಟ ಪರಮಾಗಮವು, ಅಪಾಯ - ಸನ್ಮಾರ್ಗದ ಅಪಾಯವು, ವಿಪಾಕ - ಕರ್ಮಗಳ ಉದಯವು, ಸಂಸ್ಥಾನ - ಲೋಕ ಸ್ವರೂಪವು ಇವುಗಳ, ವಿಚಯಾಯ - ವಿಚಾರಣೆಗೋಸ್ಕರ, ( ನಿರಂತರವಲ್ಲೂ ಭಾವಿಸುವದು ) ಧರ್ಮ್ಯಂ – ಧರ್ಮಧ್ಯಾನವು ಆಗುತ್ತದೆ ॥

ತಾ ॥ ೧ ಆಜ್ಞಾ ವಿಚಯ. ೨ ಅಪಾಯ ವಿಚಯ. ೩ ವಿಪಾಕ ವಿಚಯ. ೪ ಸಂಸ್ಥಾನ ವಿಚಯ ವೆಂದು ಧರ್ಮಧ್ಯಾನ ನಾಲ್ಕು ಪ್ರಕಾರವು ॥ ೧. ಉಪದೇಶಕರು ಯಿಲ್ಲದೇ ಯಿದ್ದರೂ, ಮಂದ ಬುದ್ಧಿವುಳ್ಳವನಾಗಿ ಯಿದ್ದರೂ, ಪದಾರ್ಥಗಳು ಸೂಕ್ಷ್ಮಗಳಾಗಿರುವ ಕಾರಣದಿಂದ ಹೇತುದೃಷ್ಟಾಂತ ತಿಳಿಯುವದು ಯಿಲ್ಲದೇ ಯಿದ್ದರೂ, ಕರ್ಮೋದಯದಿಂದ ಸರ್ವಜ್ಞ ಪ್ರಣೀತ ಪರಮಾಗಮವನ್ನು ನಂಬುವದು ದುರವಗಾಹವಾದ ಪದಾರ್ಥಗಳನ್ನು ನಂಬಿ ನಿಶ್ಚಯಿಸುವದು ಅಥವಾ - ಸರ್ವಜ್ಞ ಪ್ರಣೀತ ಶಾಸ್ತ್ರವನ್ನು ಸಮರ್ಥನೆ ಮಾಡುವದಕ್ಕೋಸ್ಕರಲೂ ತತ್ವವನ್ನು ಪ್ರಕಾಶ ಮಾಡುವದಕ್ಕೋಸ್ಕರಲೂ ಯುಕ್ತಿ ಶಾಸ್ತ್ರ ನೈಗಮಾದಿನಯ ಪ್ರತ್ಯಕ್ಷಾದಿ ಪ್ರಮಾಣ ಇವುಗಳನ್ನು ನಿರಂತರದಲ್ಲು ಚಿಂತಿಸುವದು ಆಜ್ಞಾವಿಚಯ ವೆಂಬ ಧರ್ಮಧ್ಯಾನ ವಾಗುತ್ತದೆ ॥ ೨. ಮೋಕ್ಷ ಮಾರ್ಗವನ್ನು ತಿಳಿಯದೇ ಮೋಕ್ಷಮಾರ್ಗವನ್ನು ಪಡೆಯಬೇಕೆಂಬ ಅಭಿಲಾಷೆಯಿಂದ ಪಳ್ಳೆದಾದಂಥ ಮಾರ್ಗವನ್ನು ತಿಳಿಯದೇ ಉನ್ಮಾರ್ಗದಲ್ಲಿ ಪ್ರವರ್ತಿಸುತ್ತಿಥಾರೆ ಎಂಬುವದೇ ಮೊದಲಾದ ಸನ್ಮಾರ್ಗದ ಅಪಾಯುವನ್ನು ಚಿಂತಿಸುವದು ೨ ನೇ ಅಪಾಯ ವಿಚಯವೆಂಬ ಧರ್ಮಧ್ಯಾನವು ಆಗುತ್ತದೆ ॥ ೩. ಶುದ್ಧ ನಿಶ್ಚಯನಯದಿಂದ ಶುಭಾಶುಭ ಕರ್ಮಗಳನ್ನು ಜೀವನು ಅನುಭವಿದೆ ಇದ್ದಾಗ್ಯು ಈ ಜೀವನು ಅನಾದಿಯಿಂದ ಕರ್ಮ ಬಂಧಕ್ಲೇಶ ವಶನಾಗಿ ಪಾಪ ಕರ್ಮೋದಯದಿಂದ ನರಕಾದಿ ದುಃಖವನ್ನು ಶುಭ ಕರ್ಮೋದಯದಿಂದ ಸ್ವರ್ಗಾದಿ ಸುಖವನ್ನು ಅನುಭವಿಸುತ್ತಾನೆ ಎಂದು ಚಿಂತಿಸುವದು ಅಂದರೆ ಕರ್ಮಗಳ ಫಲ ಪರಿಪಾಕಾದಿ ಚಿಂತನೆಯು ೩ ನೇ ವಿಪಾಕ ವಿಚಯ ವೆಂಬ ಧರ್ಮಧ್ಯಾನ ವಾಗುತ್ತದೆ ॥ ೪. ಲೋಕಾಕಾರವನ್ನು ಲೋಕಾಂತರ್ವರ್

ರ್ತಿಗಳಾದ ಜೀವಾದಿ ತತ್ತ್ವಗಳನ್ನು ಪರಾವರ್ತನೆಯನ್ನು ವಿಚಾರವನ್ನು ನಿರಂತರ ಮಾಡುವದು ೪ ನೇ. ಸಂಸ್ಥಾನ ವಿಚಯ ಧರ್ಮಧ್ಯಾನವು ಆಗುತ್ತದೆ || ಈ ಧರ್ಮಧ್ಯಾನವು ಅವಿರತ, ದೇಶ ವಿರತ, ಪ್ರಮತ್ತ, ಅಪ್ರಮತ್ತ ಈ ಗುಣಸ್ಥಾನದವರಿಗೆ ಆಗುತ್ತದೆ || ೩೬ ||

ಶು ಕ್ಲ ಧ್ಯಾ ನಾ ಧಿ ಕ ರ ಣ ಂ.

ಅ || ಶುಕ್ಲಧ್ಯಾನದ ಒಂದು ಎರಡನೇ ಭೇದಗಳಿಗೆ ಅಧಿಕಾರಿಗಳನ್ನು ಹೇಳುತ್ತಾರೆ.

ಸೂ || ಶುಕ್ಲೇ ಚಾದ್ಯೇ ಪೂರ್ವವಿದಃ || ೩೭ ||

ಟೀ || ಆದ್ಯೇ ಶುಕ್ಲೇ - ಮೊದಲ ಎರಡು ಶುಕ್ಲ ಧ್ಯಾನಗಳು, ಪೂರ್ವವಿದಃ - ಚತುರ್ದಶ ಪೂರ್ವೆಗಳನ್ನು ತಿಳಿಯುವನಿಗೆ, ಚ - ಚ ಶಬ್ದದಿಂದ ಧರ್ಮಧ್ಯಾನವೂ ಕೂಡ ಆಗುತ್ತದೆ ||

ತಾ || ೧ ಪೃಥಕ್ತ್ವ ವಿತರ್ಕ ವಿಚಾರ. ೨ ಏಕತ್ವ ವಿತರ್ಕ ವಿಚಾರ. ಎಂಬ ಎರಡು ಶುಕ್ಲ ಧ್ಯಾನಗಳು ಮತ್ತು ಧರ್ಮಧ್ಯಾನವು ಸಹ ಶ್ರುತಕೇವಲಿಗಳಿಗೆ ಉಂಟಾಗುತ್ತದೆ || ಉಪಶಮಕ್ಷಪಕ ಶ್ರೇಣಿಗಳಲ್ಲಿ ಈ ೨ ಶುಕ್ಲ ಧ್ಯಾನಗಳು ಉಂಟಾಗುತ್ತದೆ. ಶ್ರೇಣ್ಯಾರೋಹಣಕ್ಕೆ ಮುಂಚಿತವಾಗಿ ಧರ್ಮಧ್ಯಾನ ಉಂಟಾಗುತ್ತದೆ || ೩೭ ||

ಅ || ಉಳಿದ ೨ ವಿಧ ಶುಕ್ಲಧ್ಯಾನಗಳಿಗೆ ಅಧಿಕಾರಿಗಳನ್ನು ಹೇಳುತ್ತಾರೆ.

ಸೂ || ಪರೇ ಕೇವಲಿನಃ || ೩೮ ||

ಟೀ || ಪರೇ - ಕಡೆ ಎರಡು ಶುಕ್ಲಧ್ಯಾನಗಳು, ಕೇವಲಿನಃ - ಸಯೋಗಿ ಅಯೋಗಿ ಕೇವಲಿಗಳಿಗೆ ಕ್ರಮವಾಗಿ ಆಗುತ್ತವೆ ||

ತಾ || ೩ ನೇ ಸೂಕ್ಷ್ಮಕ್ರಿಯಾ ಪ್ರತಿಪಾತಿ. ೪ ನೇ ವ್ಯುಪರತ ಕ್ರಿಯಾ ನಿವೃತ್ತಿ ಎಂಬ ೨ ಶುಕ್ಲಧ್ಯಾನಗಳು ಸಯೋಗಿ ಅಯೋಗಿ ಕೇವಲಿ ಗುಣಸ್ಥಾನದವರಿಗೆ ಕ್ರಮವಾಗಿ ಆಗುತ್ತದೆ || ೩೮ ||

ಅ || ಶುಕ್ಲಧ್ಯಾನ ಭೇದಗಳನ್ನು ಹೇಳುತ್ತಾರೆ.

ಸೂ || ಪೃಥಕ್ತ್ವೈಕತ್ವವಿತರ್ಕ ಸೂಕ್ಷ್ಮಕ್ರಿಯಾ ಪ್ರತಿಪಾತಿವ್ಯುಪರತಕ್ರಿಯಾ ನಿವೃತ್ತೀನಿ || ೩೯ ||

ಟೀ ॥ ಪೃಥಕ್ತ್ವೈಕತ್ವ ವಿತರ್ಕ ಸೂಕ್ಷ್ಮಕ್ರಿಯಾ ಪ್ರತಿಪಾತಿ ವ್ಯುಪರತಕ್ರಿಯಾ ನಿವೃತ್ತೀನಿ - ಪೃಥಕ್ತ್ವ - ಪೃಥಕ್ತ್ವ ವಿತರ್ಕವು, ಏಕತ್ವ ವಿತರ್ಕ - ಏಕತ್ವ ವಿತರ್ಕವು, ಸೂಕ್ಷ್ಮಕ್ರಿಯಾ ಪ್ರತಿಪಾತಿ - ಸೂಕ್ಷ್ಮಕ್ರಿಯಾ ಪ್ರತಿಪಾತಿಯು, ವ್ಯುಪರತ ಕ್ರಿಯಾನಿವೃತ್ತೀನಿ - ವ್ಯುಪರತಕ್ರಿಯಾ ನಿವೃತ್ತಿಯು ಎಂದು ಶುಕ್ಲಧ್ಯಾನವು ೪ ಪ್ರಕಾರವು ॥

ಅ ॥ ಈ ಶುಕ್ಲಧ್ಯಾನಗಳಿಗೆ ಅವಲಂಬನೆಯನ್ನು ಹೇಳುತ್ತಾರೆ.

ಸೂ ॥ ತ್ರ್ಯೇಕಯೋಗ ಕಾಯಯೋಗಾಯೋಗಾನಾಂ ॥ ೪೦ ॥

ಟೀ ॥ ತ್ರ್ಯೇಕ ಯೋಗಕಾಯ ಯೋಗಾಯೋಗಾನಾಂ - ತ್ರಿ - ಮೂರು ಯೋಗವುಳ್ಳವರು, ಏಕ ಯೋಗ-ಮೂರುಯೋಗಗಳಲ್ಲಿ ಯಾವದಾದರು ಒಂದು ಯೋಗವುಳ್ಳವರು, ಅಯೋಗಾನಾಂ - ಯೋಗವಿಲ್ಲದವರು ಇವರುಗಳಿಗೆ ( ನಾಲ್ಕು ಶುಕ್ಲಧ್ಯಾನಗಳು ಕ್ರಮವಾಗಿ ಆಗುತ್ತವೆ ॥

ತಾ ॥ ಮೂರು ಯೋಗ ( ಮನವಚನಕಾಯ ) ವುಳ್ಳಂಥಾವರಿಗೆ ಪೃಥಕ್ತ್ವ ವಿತರ್ಕ ವಿಚಾರವೆಂಬ ೧ ನೇ ಶುಕ್ಲಧ್ಯಾನ ಉಂಟಾಗುತ್ತದೆ ॥ ಮೂರು ಯೋಗದಲ್ಲಿ ಯಾವದಾದರು ಒಂದುಯೋಗ ವುಳ್ಳಂಥಾವರಿಗೆ ಏಕತ್ವ ವಿತರ್ಕ ವಿಚಾರವೆಂಬ ೨ ನೇ ಶುಕ್ಲಧ್ಯಾನ ಉಂಟಾಗುತ್ತದೆ ॥ ಕಾಯ ಯೋಗವುಳ್ಳಂಥಾವರಿಗೆ ಸೂಕ್ಷ್ಮಕ್ರಿಯಾ ಪ್ರತಿಪಾತಿ ಎಂಬ ೩ ನೇ ಶುಕ್ಲಧ್ಯಾನ ವುಂಟಾಗುತ್ತದೆ ॥ ಯೋಗರಹಿತರಾದಂಥಾವರಿಗೆ ವ್ಯುಪರತಕ್ರಿಯಾ ನಿವೃತ್ತಿ ಎಂಬ ೪ ನೇ ಶುಕ್ಲಧ್ಯಾನ ವುಂಟಾಗುತ್ತದೆ ॥ ೪೦ ॥

ಅ ॥ ಮೊದಲ ಎರಡು ಶುಕ್ಲಧ್ಯಾನಕ್ಕೆ ವಿಶೇಷವನ್ನು ಹೇಳುತ್ತಾರೆ.

ಸೂ ॥ ಏಕಾಶ್ರಯೇ ಸವಿತರ್ಕ ವಿಚಾರೇ ಪೂರ್ವೇ ॥ ೪೧ ॥

ಟೀ ॥ ಪೂರ್ವೇ - ಪ್ರಥಮಗಳಾದ ಪೃಥಕ್ತ್ವ ವಿತರ್ಕ ವಿಚಾರ, ಏಕತ್ವ ವಿತರ್ಕ ವಿಚಾರ ಎಂಬ ಎರಡು ಶುಕ್ಲಧ್ಯಾನಗಳು, ಏಕಾಶ್ರಯೇ-ಶ್ರುತಜ್ಞಾನ ಸಂಪನ್ನರಾದಂಥಾವರುಗಳನ್ನೇ ( ಶ್ರುತಕೇವಲಿಗಳನ್ನೇ) ಆಶ್ರಯವಾಗಿ ವುಳ್ಳಂಥಾವುಗಳಾಗಿಯು, ಸವಿತರ್ಕ ವಿಚಾರೇ - ಸವಿತರ್ಕ- ಶ್ರುತಜ್ಞಾನವು, ವಿಚಾರೇ- ಅರ್ಥವ್ಯಂಜನಯೋಗ ಸಂಕ್ರಾಂತಿಯು ಇವುಗಳೊಡನೆ ಕೂಡಿದಂಥಾವುಗಳು ಆಗುತ್ತವೆ ॥

ತಾ || ೧ ನೇ ಪೃಥಕ್ತ್ವ ವಿತರ್ಕ ವಿಚಾರವು. ಏಕತ್ವ ವಿತರ್ಕ ವಿಚಾರವೆಂಬ ಎರಡು ಶುಕ್ಲಧ್ಯಾನಗಳು ಶ್ರುತಜ್ಞಾನದೊಡನೆ ಕೂಡಿ ವರ್ತಿಸುತ್ತಿರುವವೆ. ಅರ್ಥ ವ್ಯಂಜನಯೋಗಸಂಕ್ರಾಂತಿಯಿಂದಲೂ ಕೂಡಿ ಇರುತ್ತವೆ || ೪೧ ||

ಅ || ಎರಡನೇ ಶುಕ್ಲಧ್ಯಾನಕ್ಕೆ ವಿಚಾರವಿಲ್ಲವೆಂದು ಹೇಳುತ್ತಾರೆ.

ಸೂ || ಅವಿಚಾರಂ ದ್ವಿತೀಯಂ || ೪೨ ||

ಟೀ || ದ್ವಿತೀಯಂ - ಎರಡನೆ ಏಕತ್ವ ವಿತರ್ಕ ವಿಚಾರವು, ಅವಿಚಾರಂ - ವಿಚಾರ ರಹಿತವಾದಂಥಾದ್ದು ಆಗುತ್ತದೆ ||

ತಾ || ಪ್ರಥಮ ಶುಕ್ಲಧ್ಯಾನವು ವಿತರ್ಕ - ವಿಚಾರ. ಈ ಎರಡರೊಡನೆ ಕೂಡಿರುವಂಥಾದ್ದು || ಎರಡನೇ ಶುಕ್ಲಧ್ಯಾನವು ವಿತರ್ಕವೆಂಬ ಒಂದರೊಡನೆ ಕೂಡಿದಂಥಾದ್ದು || ೪೨ ||

ಅ || ವಿತರ್ಕ ಪದದ ಅರ್ಥವನ್ನು ಹೇಳುತ್ತಾರೆ.

ಸೂ || ವಿತರ್ಕಃ ಶ್ರುತಂ || ೪೩ ||

ಟೀ || ವಿತರ್ಕಃ - ವಿತರ್ಕವೆಂಬುವದು, ಶ್ರುತಂ - ಮತಿಪೂರ್ವಕವಾದ ಶ್ರುತಜ್ಞಾನವು || ವಿತರ್ಕವೆಂದರೆ ಶ್ರುತಜ್ಞಾನಕ್ಕೆ ಹೆಸರು, ಮತ್ತು ಶಬ್ದಪ್ರಯೋಗದಲ್ಲಿ ಕೂಡಿದ ಊಹೆಗೂ ವಿತರ್ಕವೆನ್ನುವದುಂಟು ||

ಅ || ವಿಚಾರವೆಂಬ ಪದದ ಅರ್ಥವನ್ನು ಹೇಳುತ್ತಾರೆ.

ಸೂ || ವಿಚಾರೋಽರ್ಥವ್ಯಂಜನಯೋಗ ಸಂಕ್ರಾನ್ತಿಃ || ೪೪ ||

ಟೀ || ಅರ್ಥವ್ಯಂಜನ ಯೋಗಸಂಕ್ರಾಂತಿಃ - ಅರ್ಥ - ಧ್ಯಾನಿಸಲ್ಪಡುವ ದ್ರವ್ಯವು ಗುಣವು ಪರ್ಯಾಯವು, ವ್ಯಂಜನ - ಆಗಮ ವಚನವು, ಯೋಗ - ಮನವಚನ ಕಾಯಯೋಗವೆಂಬ ಇವುಗಳ, ಸಂಕ್ರಾಂತಿಃ - ಪರಿವರ್ತನೆಯು, ವಿಚಾರಃ - ವಿಚಾರವೆಂದು ಹೇಳಲ್ಪಡುತ್ತದೆ || ತಾ || ವಿಚಾರವು - ಅರ್ಥಸಂಕ್ರಾನ್ತಿ, ವ್ಯಂಜನ ಸಂಕ್ರಾಂತಿ, ಯೋಗಸಂಕ್ರಾನ್ತಿ ಎಂದು ೩ ವಿಧವು || ಧ್ಯೇಯ ದ್ರವ್ಯವನ್ನು ಬಿಟ್ಟು ಪರ್ಯಾಯವನ್ನು ಧ್ಯಾನಿಸುವದು, ಪರ್ಯಾಯವನ್ನು ಬಿಟ್ಟು ದ್ರವ್ಯವನ್ನು ಧ್ಯಾನಿಸುವದು, ಯಾವದೋ ಅದೇ ೧ ನೇ ಅರ್ಥ ಸಂಕ್ರಾಂತಿಯು || ಒಂದು ಶ್ರುತಜ್ಞಾನದ ಶಬ್ದವನ್ನು ಅವಲಂಬಿಸಿ ಮತ್ತೊಂದು

ಶ್ರುತಜ್ಞಾನದ ಶಬ್ದವನ್ನು ಆಶ್ರಯಿಸುವದು ಈ ಪ್ರಕಾರವಾಗಿ ಶ್ರುತಜ್ಞಾನ ಶಬ್ದಗಳನ್ನು ಒಂದನ್ನು ಬಿಟ್ಟು ಮತ್ತೊಂದನ್ನು ಧ್ಯಾನಿಸುವದು ಯಾವದೋ ಅದೇ ೨ ನೇ ವ್ಯಂಜನ ಸಂಕ್ರಾಂತಿಯು ‖ ಕಾಯ ಯೋಗವನ್ನು ಬಿಟ್ಟು ಮನೋ ಯೋಗವನ್ನು ಗ್ರಹಿಸುವದು, ಮನೋಯೋಗವನ್ನು ಬಿಟ್ಟು ಕಾಯಯೋಗವನ್ನು ಗ್ರಹಿಸುವದು, ಕಾಯಯೋಗವನ್ನು ಬಿಟ್ಟು ವಚನಯೋಗವನ್ನು ಗ್ರಹಿಸುವದು ಈಪ್ರಕಾರ ಒಂದು ಯೋಗವನ್ನು ಬಿಟ್ಟು ಮತ್ತೊಂದು ಯೋಗವನ್ನು ಗ್ರಹಿಸುವದು ಯಾವದೋ ಅದೇ ೩ ನೇ ಯೋಗಸಂಕ್ರಾಂತಿಯು ‖ ಈ ಪ್ರಕಾರ ಪರಿವರ್ತನೆ ಯಾಗುವದಕ್ಕೆ ವಿಚಾರವೆಂದು ತಿಳಿಯುವದು ‖ ಈ ಎರಡು ಪ್ರಕಾರವಾದ ತಪಸ್ಸುಗಳು ಹೊಸದಾಗಿಬರುವ ಕರ್ಮಾಸ್ರವ ನಿರೋಧಕ್ಕೆ ಕಾರಣವಾಗಿರುವದ್ದರಿಂದ ಸಂವರೆಯೂ, ಪೂರ್ವಕರ್ಮ ನಷ್ಟದಿಂದ ನಿರ್ಜರೆಯೂ ಸಹ ಆಗುತ್ತದೆ ‖ ೪೪ ‖

## ನಿ ರ್ಜ ರ ಸ್ಥಾ ನಾ ಧಿ ಕ ರ ಣ ಂ.

ಅ ‖ ಸಮ್ಯಗ್ದೃಷ್ಟಿಗಳಿಗೆ ನಿರ್ಜರೆಯಲ್ಲಿ ತಾರತಮ್ಯವೆಂದು ಹೇಳುತ್ತಾರೆ.

ಸೂ ‖ ಸಮ್ಯಗ್ದೃಷ್ಟಿಶ್ರಾವಕ ವಿರತಾನನ್ತವಿಯೋಜಕ ದರ್ಶನಮೋಹ ಕ್ಷಪಕೋಪ ಶಮಕೋಪಶಾಂತ ಮೋಹ ಕ್ಷಪಕ ಕ್ಷೀಣಮೋಹಜಿನಾಃ ಕ್ರಮಶೋ ಸಂಖ್ಯೇಯ ಗುಣ ನಿರ್ಜರಾಃ ‖ ೪೫ ‖

ಟೀ ‖ ಸಮ್ಯಗ್ದೃಷ್ಟಿಶ್ರಾವಕವಿರತಾನನ್ತವಿಯೋಜಕದರ್ಶನೆ ಮೋಹಕ್ಷಪಕೋಪಶಮ ಕೋಪ ಶಾಂತ ಮೋಹ ಕ್ಷಪಕಕ್ಷೀಣ ಮೋಹಜಿನಾಃ - ಸಮ್ಯಗ್ದೃಷ್ಟಿ - ಸಮ್ಯಗ್ದೃಷ್ಟಿಯು, ಶ್ರಾವಕ - ದೇಶವ್ರತಿಯು, ವಿರತ - ಪ್ರಮತ್ತ ಮೊದಲಾದ ಮಹಾವ್ರತಿಯು, ಅನಂತ ವಿಯೋಜಕ - ಅನಂತಾನು ಬಂಧಿಗಳನ್ನು ಬಿಟ್ಟು ವುಳಿದ ಹನ್ನೆರಡು ಕಷಾಯವುಳ್ಳ ಸಂಯತನು, ದರ್ಶನಮೋಹಕ್ಷಪಕ - ಮೂರುವಿಧ ದರ್ಶನಮೋಹನೀಯ ಕರ್ಮವನ್ನು ಕೆಡಿಸುವಂಥಾವನು, ಉಪಶಮಕ - ಚಾರಿತ್ರ ಮೋಹನೀಯವನ್ನು ಉಪಶಮಿಸುವಂಥಾವನು, ಉಪಶಾಂತ - ಉಪಶಾಂತ ಕಷಾಯನು, ಕ್ಷಪಕ - ಚಾರಿತ್ರ

ಮೋಹನೀಯುವನ್ನು ಕೆಡಿಸುವಂಥಾವನು, ಕ್ಷೀಣ ಮೋಹ - ಕ್ಷೀಣ ಕ ಷಾಯುನು, ಜಿನಾಃ - ಜಿನರು ಇವರುಗಳು, ಕ್ರಮಶಃ - ಕ್ರಮದಿಂದ, ಅಸಂಖ್ಯೇಯ ಗುಣ ನಿರ್ಜರಾಃ - ಅಸಂಖ್ಯಾತ ಗುಣಶ್ರೇಣಿ ಕರ್ಮನಿಜರೆ ಯುಳ್ಳಂಥಾವರುಗಳು ||

ತಾ || ಸಮ್ಯಗ್ದೃಷ್ಟಿಗಿಂತ ದೇಶ ವಿರತನು ಅಸಂಖ್ಯಾತ ಗುಣ ಕರ್ಮ ನಿರ್ಜರೆಯುಳ್ಳಂಥಾವನಾಗಿ ಆಗುತ್ತಾನೆ. ದೇಶ ವಿರತನಗಿಂತ ೬ ನೇ ಗುಣಸ್ಥಾನದವನಾದ ಪ್ರಮತ್ತನು ಅಸಂಖ್ಯಾತ ಗುಣ ಕರ್ಮ ನಿರ್ಜರೆಯುಳ್ಳಂಥಾವ ನಾಗುತಿತ್ತಾನೆ. ಯಿದೇಮೇರೆ ಮೇಲೆ ಹೇಳಿರುವ ಈ ವ್ವೊಬ್ಬರಗಿಂತ ಒಬ್ಬರು ಅಸಂಖ್ಯಾತ ಗುಣ ಕರ್ಮ ನಿರ್ದರೆ ಯುಳ್ಳಂ ಥಾವರುಗಳು ಆಗುತ್ತಾರೆ || ೪೫ ||

ನಿ ಗ್ರ ೯ ಂ ಥಾ ಧಿ ಕ ರ ಣ ಂ.

ಅ || ನಿರ್ಗ್ರಂಥರಲ್ಲಿ ಗುಣ ಭೇದವಲ್ಲದೆ ಸಮ್ಯಗ್ದೃಷ್ಟಿಗಳಂತೆ ಜಾತ್ಯಂತರ ತ್ವವಿಲ್ಲವೆಂದು ಹೇಳುತ್ತಾರೆ.

ಸೂ || ಪುಲಾಕ ವಕುಶ ಕುಶೀಲ ನಿರ್ಗ್ರಂಥ ಸ್ನಾತಕಾ ನಿರ್ಗ್ರಂಥಾಃ || ೪೬ ||

ಟೀ || ಪುಲಾಕ ವಕುಶ ಕುಶೀಲ ನಿರ್ಗ್ರಂಥಸ್ನಾತಕಾಃ- ಪುಲಾಕ- ಪುಲಾಕರು, ವಕುಶ - ವಕುಶರು, ಕುಶೀಲ - ಕುಶೀಲರು, ನಿರ್ಗ್ರಂಥ- ನಿರ್ಗ್ರಂಥರು, ಸ್ನಾತಕಾಃ - ಸ್ನಾತಕರು ಇವರುಗಳು, ನಿರ್ಗ್ರಂಥಾಃ - ಜಿನ ಮುನಿಗಳು ||ತಾ || ಜಿನಮುನಿಗಳು ಐದು ಪ್ರಕಾರವಾಗಿಧಾರೆ || ೧. ಉತ್ತರಗುಣಭಾವನೆ ಯಿಲ್ಲದೆ ಮೂಲಗುಣಗಳಲ್ಲಿ ಯಾವದರಲ್ಲಾದರು ಪರಿಪೂರ್ಣವಾಗದೇ ಯಿರುವಂಥಾವರು ಯಾವದರಲ್ಲಾದರು ದೋಷ ಯುಕ್ತರಾದಂಥಾವರುಆದರೆ ಪುಲಾಕರೆಂದು ಹೆಸರು||೨. ಪರಿಪೂರ್ಣ ವ್ರತಗಳುಳ್ಳವರಾಗಿದ್ದುಕೊಂಡಿದ್ದರೂ ಶರೀರೋಪಕರಣಸಂಸ್ಕಾರ ಯುಶೋವಿಭೂತಿಗಳಲ್ಲಿ ಆಸಕ್ತರಾದವರಿಗೆ ವಕುಶರೆಂದುಹೆಸರು. ಉಪಕರಣ ವಕುಶರು, ಶರೀರ ವಕುಶರು ಎಂದು ೨ ಭೇದವು || ೩. (೧) ಪ್ರತಿಸೇವನಾ ಕುಶೀಲ (೨) ಕಷಾಯು ಕುಶೀಲ ಎಂದು ಕುಶೀಲರಲ್ಲಿ ೨ ಭೇದವು|| ಸಂಪೂರ್ಣ ಮೂಲೋತ್ತರ ಗುಣವುಳ್ಳವರಾಗಿಯು ಬಿಡಲ್ಪಟ್ಟಪರಿಗ್ರಹ

ವಿಲ್ಲದವರಾಗಿಯೂ ಯೊವದಾದರು ಕಾರಣದಿಂದ ಉತ್ತರಗುಣವಿನಾಶ ಕರು ಆದವರು ಪ್ರತಿಸೇವನಾ ಕುಶೀಲರು || (೨) ಸಂಜ್ವಲನ ಕಷಾಯೋದಯ ಮಾತ್ರಕ್ಕೆ ಅಧೀನರಾಗಿರುವ ಜಿನಮುನಿಗಳು ಕಷಾಯ ಕುಶೀಲರೆಂದು ಹೇಳಲ್ಪಡುತ್ತಾರೆ ‖ ೪. ಅಂತರ್ಮುಹೂರ್ತದಿಂದ ಮೇಲೆ ಕೇವಲ ದರ್ಶನ ಮೊದಲಾದವನ್ನು ಪಡೆಯುವದರಲ್ಲಿ ಯಿರುವ ಕ್ಷೀಣ ಕಷಾಯದವರು ನಿರ್ಗ್ರಂಥರೆಂಬುವರು ‖ ೫. ಸ್ನಾತಕಾಃ - ಸಯೋಗಿ ಕೇವಲಿ ಅಯೋಗಿ ಕೇವಲಿ ಇವರುಗಳಿಗೆ ಸ್ನಾತಕರೆಂದು ಹೆಸರು ‖ ಈ ೫ ಜನರಿಗೂ ನಿರ್ಗ್ರಂಥರೆಂದೇ ಹೆಸರು. ಆದರೆ ಜಘನ್ಯಮಧ್ಯಮೋತ್ಕೃಷ್ಟ ಚಾರಿತ್ರ ಭೇದವುಳ್ಳಂಥಾವರಾಗಿ ನೈಗಮ ನಯಾಪೇಕ್ಷೆಯಿಂದ ನಿರ್ಗ್ರಂಥರೆಂದು ಹೇಳಲ್ಪಡುತ್ತಾರೆ ‖ ೪೬ ||

ಅ ‖ ಪುಲಾಕಾದಿಗಳಲ್ಲಿ ಇನ್ನು ಭೇದವಿಧಿಯಿಂದು ಹೇಳುತ್ತಾರೆ.

ಸೂ ‖ ಸಂಯಮ ಶ್ರುತ ಪ್ರತಿಸೇವನಾ ತೀರ್ಥ ಲಿಂಗ ಲೇಶ್ಯೋಪಪಾದ ಸ್ಥಾನವಿಕಲ್ಪತಸ್ಸಾಧ್ಯಾಃ ‖ ೪೭ ‖

ಟೀ ‖ ಸಂಯಮ ಶ್ರುತಪ್ರತಿಸೇವನಾ ತೀರ್ಥ ಲಿಂಗಲೇಶ್ಯೋಪಪಾದಸ್ಥಾನ ವಿಕಲ್ಪತಃ - ಸಂಯಮ - ಸಾಮಾಯಿಕ ಮೊದಲಾದ ಚಾರಿತ್ರಗಳು, ಶ್ರುತ-ಆಚಾರಾಂಗಾದಿಗಳು, ಪ್ರತಿಸೇವನಾ - ದೋಷಸೇವನೆಯು, ತೀರ್ಥ - ತೀರ್ಥಕರುಗಳ ಶ್ರೀ ವಿಹಾರಕಾಲವು, ಲಿಂಗ - ಎರಡು ಪ್ರಕಾರ ಲಿಂಗವು, ಲೇಶ್ಯ - ಷಡ್ಲೇಶ್ಯವು, ಉಪಪಾದ - ಜಘನ್ಯಮಧ್ಯಮೋತ್ಕೃಷ್ಟಗಳಾದಂಥಾ ವುಪಪಾದ ಜನ್ಮವು, ಸ್ಥಾನ - ನಾನಾಪ್ರಕಾರವಾದ ಚಾರಿತ್ರಸ್ಥಾನವು ಇವುಗಳ, ವಿಕಲ್ಪತಃ - ಈ ಎಂಟು ಭೇದದದ್ದೆಶೆಯಿಂದ, ಸಾಧ್ಯಾಃ - ಪುಲಾಕಾದಿಗಳು ಸಾಧಿಸುವಪಕ್ಕೆ ಯೋಗ್ಯರಾದಂಥಾವರುಗಳು || ೪೭ ||

ಇತಿ ತತ್ವಾರ್ಥಾಧಿಗಮೇ ಮೋಕ್ಷಶಾಸ್ತ್ರೇ ನವಮೋಧ್ಯಾಯಃ.



## ಅಥ ದಶಮೋಽಧ್ಯಾಯ ಪ್ರಾರಂಭಃ.

### ಕೇ ವ ಲಾ ಧಿ ಕ ರ ಣ ೦.

ಅ ॥ ಕೇವಲಜ್ಞಾನೋತ್ಪತ್ತಿಗೆ ಕಾರಣವನ್ನು ಹೇಳುತ್ತಾರೆ.

ಸೂ ॥ ಮೋಹಕ್ಷಯಾಜ್ಜ್ಞಾನದರ್ಶನಾವರಣಾಂತರಾಯಕ್ಷಯಾಚ್ಚ ಕೇವಲಂ ॥ ೧ ॥

ಟೀ ॥ ಮೋಹಕ್ಷಯಾತ್ - ಮೋಹನೀಯ ಕರ್ಮದ ನಾಶದ್ದೆಶೆಯಿಂದ, ಜ್ಞಾನದರ್ಶನಾವರಣಾಂತರಾಯ ಕ್ಷಯಾತ್ - ಜ್ಞಾನ-ಜ್ಞಾನಾವರಣೀಯ ಕರ್ಮವು, ದರ್ಶನಾವರಣ - ದರ್ಶನಾವರಣೀಯ ಕರ್ಮವು, ಅಂತರಾಯ - ಅಂತರಾಯಕರ್ಮವು ಇವುಗಳ, ಕ್ಷಯಾಚ್ಚ - ನಿಶ್ಶೇಷವಾಗಿ ನಾಶವಾದ್ದರ ದೆಶೆಯಿಂದಲೂ ಕೂಡ, ಕೇವಲಂ - ಕೇವಲ ಜ್ಞಾನವು, ಆಗುತ್ತದೆ ॥

ತಾ ॥ ಜ್ಞಾನಾವರಣೀಯ ದರ್ಶನಾವರಣೀಯ ಮೋಹನೀಯ ಅಂತರಾಯ ಈ ೪ ಕರ್ಮಗಳು ಆತ್ಮನಗುಣಗಳನ್ನು ಕೆಡಿಸುವದ್ದರಿಂದ ಇವುಗಳಿಗೆ ಘಾತಿಕರ್ಮಗಳೆಂದು ಹೆಸರು. ಈ ಘಾತಿ ಕರ್ಮಗಳನ್ನು ಸಂಪೂರ್ಣವಾಗಿ ನಾಶಮಾಡಿದರೆ ಕೇವಲಜ್ಞಾನ ಉಂಟಾಗುತ್ತದೆ ॥ ೧ ॥

### ಮೋ ಕ್ಷಾ ಧಿ ಕ ರ ಣ ೦.

ಅ ॥ ಮೋಕ್ಷಪದದ ಅರ್ಥವನ್ನು ಲಕ್ಷಣವನ್ನು ಹೇಳುತ್ತಾರೆ.

ಸೂ ॥ ಬಂಧಹೇತ್ವಭಾವನಿರ್ಜರಾಭ್ಯಾಂ ಕೃತ್ಸ್ನಕರ್ಮವಿಪ್ರಮೋಕ್ಷೋ ಮೋಕ್ಷಃ ॥ ೨ ॥

ಟೀ ॥ ಬಂಧಹೇತ್ವಭಾವನಿರ್ಜರಾಭ್ಯಾಂ - ಬಂಧ - ಪ್ರಕೃತಿಸ್ಥಿತಿ ಅನುಭಾಗ ಪ್ರದೇಶ-ಬಂಧಗಳಗೆ, ಹೇತು - ಕಾರಣಗಳಾದಂಥಾ ಮಿಥ್ಯಾತ್ವ ಅವಿರತ ಮೊದಲಾದವುಗಳ, ಅಭಾವ - ನಾಶವು, ನಿರ್ಜರಾಭ್ಯಾಂ - ಪೂರ್ವದಲ್ಲಿ ಸಂಚಿತವಾಗಿದ್ದ ಕರ್ಮಗಳ ನಾಶವು ಇವುಗಳಿಂದ, ಕೃತ್ಸ್ನಕರ್ಮ ವಿಪ್ರಮೋಕ್ಷಃ - ಕೃತ್ಸ್ನ = ಸಮಸ್ತವಾದಂಥಾ, ಕರ್ಮ - ಜ್ಞಾನಾವರಣಾದಿ ಕರ್ಮಗಳ, ವಿಪ್ರಮೋಕ್ಷಃ - ನಿಶ್ಶೇಷವಾಗಿ ನಾಶಮಾಡೋಣವು. ಮೋಕ್ಷಃ - ಮೋಕ್ಷವು ಇಂತೆಂದು ಹೇಳಲ್ಪಡುತ್ತದೆ ॥

ತಾ ॥ ಮಿಥ್ಯಾತ್ವ ಅವಿರತ, ಪ್ರಮಾದ, ಕಷಾಯಯೋಗ ಎಂಬುವ

ಇವುನಾಲ್ಕು ಬಂಧಹೇತುಗಳಾಗುತ್ತವೆ. ಇವುಗಳು ನಾಶವಾದರೆ ಹೊಸ ದಾಗಿ ಕರ್ಮಾಸ್ರವ ವಾಗುವದಿಲ್ಲ. ತಪಸ್ಸು ಮೊದಲಾದವುಗಳಿಂದ ಪೂರ್ವದಲ್ಲಿ ಸಂಚಿತವಾಗಿದ್ದ ಕರ್ಮಗಳು ನಿರ್ಜರೆಯಾಗುತ್ತವೆ || ೧ ಬಂಧ ಹೇತ್ವಭಾವ. ೨ ನಿಜರೆ. ಈ ೨ ಕಾರಣದಿಂದ ಸಮಸ್ತವಾದ ಕರ್ಮಗಳು ಒಂದೂ ವುಳಿಯುದಂತೆ ನಾಶವಾಗುವದು ಯಾವದುಂಟೋ ಅದೇ ಮೋಕ್ಷ ವೆಂಬುವದಾಗುತ್ತದೆ. ಆದ್ದರಿಂದ ಆತ್ಮನುನಿಶ್ಶೇಷವಾಗಿ ಕರ್ಮಗಳಿಂದಬಿಡಲ್ಪಟ್ಟರೆ ಅದಕ್ಕೆ ಮೋಕ್ಷವೆಂದು ಹೆಸರು || ೨ ||

ಅ || ಭಾವಕರ್ಮ ನಾಶದಿಂದಲೂ ಮೋಕ್ಷವಾಗುತ್ತೆಂದು ಹೇಳುತ್ತಾರೆ.

ಸೂ || ಔಪ ಶಮಿಕಾದಿ ಭವ್ಯತ್ವಾನಾಂ ಚ || ೩ ||

ಟೀ || ಔಪಶಮಿಕಾದಿ ಭವ್ಯತ್ವಾನಾಂ ಚ - ಔಪಶಮಿಕಾದಿ - ಔಪಶಮಿಕಭಾವವೇ ಮೊದಲಾಗಿ, ಭವ್ಯತ್ವಾನಾಂಚ - ಭವ್ಯತ್ವವನ್ನೇ ಕೊನೆಯಾಗಿ ಇರುವ ಭಾವಗಳ ನಾಶವು, ಮೋಕ್ಷವೆಂಬುವ ದಾಗುತ್ತದೆ || ತಾ || ಔಪಶಮಿಕಾದಿ ಐದು ಭಾವಗಳಲ್ಲಿ ಜೀವತ್ವ ಪಾರಿಣಾಮಿಕ ಭಾವಹೊರ್ತು ಉಳಿದ (ಪಾರಿಣಾಮಿಕ ಭವ್ಯತ್ವ ಮೊದಲಾದ) ಐದು ಭಾವಗಳು ನಿಶ್ಶೇಷವಾಗಿ ಕ್ಷಯ ವಾಗುವದ್ದರಿಂದ ಸ್ವಾತ್ಮೋಪಲಬ್ಧಿ ಸ್ವರೂಪ ಮೋಕ್ಷಪ್ರಾಪ್ತಿಯು ಆಗುತ್ತದೆ || ೩ ||

ಅ || ಹಿಂದೆಹೇಳಿದ್ದಕ್ಕೆ ಅಪವಾದವನ್ನು ಹೇಳುತ್ತಾರೆ.

ಸೂ || ಅನ್ಯತ್ರಕೇವಲಸಮ್ಯಕ್ತ್ವಜ್ಞಾನದರ್ಶನ ಸಿದ್ಧ ತ್ವೇಭ್ಯಃ || ೪ ||

ಟೀ || ಕೇವಲಸಮ್ಯಕ್ತ್ವಜ್ಞಾನದರ್ಶನಸಿದ್ಧತ್ವೇಭ್ಯಃ - ಕೇವಲಸಮ್ಯಕ್ತ್ವ-ಕ್ಷಾಯಿಕಸಮ್ಯಕ್ತ್ವವು, ಜ್ಞಾನ- ಅನಂತಸುಖ ವೀರ್ಯಗರ್ಭೀಕೃತಾನಂತಜ್ಞಾನವು, ದರ್ಶನ - ಅನಂತದರ್ಶನವು, ಸಿದ್ಧತ್ವೇಭ್ಯಃ-ಸ್ವಾತ್ಮೋಪ ಲಬ್ಧಿಸ್ವರೂಪವಾದ ಸಿದ್ಧತ್ವವು ಎಂಬ ಇವುಗಳದೆಶೆಯಿಂದ, ಅನ್ಯತ್ರ- ಉಳಿದ ಔಪಶಮಿಕಕ್ಷಾಯಿಕಮೊದಲಾದ ಭಾವಗಳ ವಿಪ್ರಮೋಕ್ಷವು ಮೋಕ್ಷವಾಗುತ್ತದೆ ||

ತಾ || ಕೆಲವುಹಳೇಪುಸ್ತಕಗಳಲ್ಲಿ ಸೂತ್ರದಲ್ಲಿ ಜ್ಞಾನದರ್ಶನ ಸುಖವೀರ್ಯಸಿದ್ಧತ್ವೇಭ್ಯಃ ಎಂಪು ಇರುತ್ತದೆ. ಈ ಸೂತ್ರದಲ್ಲಿ ಸುಖ

ವೀರ್ಯಗಳನ್ನು ಪ್ರತ್ಯೇಕಹೇಳದೇಯಿದ್ದದ್ದರಿಂದ ಅನಂತಜ್ಞಾನದಲ್ಲೇ ಅನಂತಸುಖಅನಂತವೀರ್ಯಗಳುಗರ್ಭೀಕರಿಸಿಕೊಂಡಿವೆಯೆಂದು ತಿಳಿಯುವದು ॥ ಕ್ಷಾಯಿಕಸಮ್ಯಕ್ತ್ವ, ಅನಂತಜ್ಞಾನ, ಅನಂತಸುಖ, ಅನಂತವೀರ್ಯ, ಅನಂತದರ್ಶನ, ಸ್ವಾತ್ಮೋಪಲಬ್ಧಿಸ್ವರೂಪಸಿದ್ಧತ್ವವೆಂಬುವ ಕ್ಷಾಯಿಕಭಾವಹೊರ್ತು ಉಳಿದ ಔಪಶಮಿಕಾದಿಭಾವಗಳ ನಾಶದಿಂದ ಮೋಕ್ಷವು ಉಂಟಾಗುತ್ತದೆ ॥ ೪ ॥

ಅ ॥ ಕರ್ಮಕ್ಷಯಾನಂತರ ಆತ್ಮನು ಸಿದ್ಧಕ್ಷೇತ್ರದಲ್ಲಿರುತ್ತಾನೆಂದು ಹೇಳುತ್ತಾರೆ.

ಸೂ ॥ ತದನಂತರಮೂರ್ಧ್ವಂಗಚ್ಛತ್ಯಾಲೋಕಾಂತಾತ್ ॥ ೫ ॥

ಟೀ ॥ ತದನಂತರಂ- ಕರ್ಮಕ್ಷಯಾನಂತರದಲ್ಲಿ, (ಪರಮಾತ್ಮನು) ಊರ್ಧ್ವಂ-ಮೇಲೆ, ಗಚ್ಛತಿ-ಹೋಗುತ್ತಾನೆ, ಆ ಲೋಕಾಂತಾತ್-ಆ ಲೋಕದಕಡೆ ಪರ್ಯಂತರದಲ್ಲೂ ॥

ತಾ ॥ ಸಮಸ್ತಕರ್ಮಗಳನ್ನು ನಾಶಮಾಡಿದ ಉತ್ತರಕ್ಷಣದಲ್ಲೇ ಕೃತಕೃತ್ಯನಾದ ಪರಮಾತ್ಮನು ಲೋಕಕ್ಕೆ ಮೇಲ್ಭಾಗದ ಕೊನೆಯಾದ ಮನುಷ್ಯಕ್ಷೇತ್ರವಿಸ್ತಾರವುಳ್ಳ (ಸಿದ್ಧಕ್ಷೇತ್ರ) ತನುವಾತದ ಪರ್ಯಂತರಕ್ಕೆ ಊರ್ಧ್ವಗಮನ ಮಾಡುತ್ತಾನೆ ॥ ೫ ॥

ಅ ॥ ಊರ್ಧ್ವಗಮನಕ್ಕೆ ಕಾರಣವನ್ನು ಹೇಳುತ್ತಾರೆ.

ಸೂ ॥ ಪೂರ್ವಪ್ರಯೋಗಾದಸಂಗತ್ವಾದ್ಬಂಧಚ್ಛೇದಾ
ತ್ತಥಾಗತಿಪರಿಣಾಮಾಚ್ಚ ॥ ೬ ॥

ಟೀ ॥ ಪೂರ್ವಪ್ರಯೋಗಾತ್- ಪೂರ್ವದಲ್ಲಿಮಾಡಿದ ವ್ಯಾಪಾರದ್ದೆಸೆಯಿಂದ, ಅಸಂಗತ್ವಾತ್ - ಸಿಕ್ಕಿಲ್ಲದ್ದರದೆಸೆಯಿಂದ, ಬಂಧಚ್ಛೇದಾತ್-ಬಂಧ - ಕರ್ಮಬಂಧನ, ಚ್ಛೇದಾತ್-ನಾಶದ್ದೆಸೆಯಿಂದ, ತಥಾಗತಿಪರಿಣಾಮಾಚ್ಚ - ಕರ್ಮಗಳ ನಾಶದ್ದೆಸೆಯಿಂದ ಊರ್ಧ್ವಗತಿಸ್ವಭಾವನಾಗುವದ್ದರಿಂದ ಮೇಲಕ್ಕೆ ಹೋಗುತ್ತಾನೆ ॥

ತಾ ॥ ಪೂರ್ವದಲ್ಲಿ ಕರ್ಮಕ್ಷಯನಿಮಿತ್ತವಾಗಿ ಮಾಡಿದಧ್ಯಾನರೂಪಪ್ರಯೋಗದಿಂದಲೂ ಕರ್ಮಭಾರಕಳಿದ್ದರಿಂದಲೂ, ತಿರ್ಯಗ್ಗತಿಕ್ಷೇತ್ರುಕರ್ಮಬಂಧನನಾಶದಿಂದಲೂ ಜೀವನು ಊರ್ಧ್ವಗತಿಸ್ವಭಾವನಾ

ದ್ದರಿಂದಲೂ, ಕರ್ಮಕ್ಷಯವನ್ನು ಮಾಡಿದ ಉತ್ತರಸಮಯದಲ್ಲಿಯೇ ಊರ್ಧ್ವಕ್ಕೆ ಹೋಗುತ್ತಿಧಾನೆ || ೬ ||

ಅ || ಆತ್ಮನ ಊರ್ಧ್ವಗಮನಕ್ಕೆ ದೃಷ್ಟಾಂತರವನ್ನು ಹೇಳುತ್ತಾರೆ.

ಸೂ || ಆವಿದ್ಧಕುಲಾಲಚಕ್ರವದ್ವ್ಯಪಗತಲೇಪಾಲಾಬೂ
ವದೇರಂಡಬೀಜವದಗ್ನಿಶಿಖಾವಚ್ಚ || ೭ ||

ಟೀ || ಆವಿದ್ಧಕುಲಾಲವತ್ = ತಿರಿಗಿಸಲ್ಪಡುವಂಥಾ ಕುಂಬಾರನ ಚಕ್ರದೋಪಾದಿಯಲ್ಲಿ, ವ್ಯಪಗತಲೇಪಾಲಾಬೂವತ್ - ಹೋದಂಥಾ ಮಣ್ಣುಲೇಪವುಳ್ಳಂಥಾ ಸೊರೇದಬುರುಡೆಯೋಪಾದಿಯಲ್ಲಿ, ಏರಂಡಬೀಜವತ್ - ಹರಳಬೀಜದೋಪಾದಿಯಲ್ಲಿ, ಅಗ್ನಿಶಿಖಾವಚ್ಚ - ಅಗ್ನಿಜ್ವಾಲೆಯೋಪಾದಿಯಲ್ಲಿ ಮುಕ್ತಜೀವನಿಗೆ ಊರ್ಧ್ವಗಮನವು ಆಗುತ್ತದೆ ||೭||

ತಾ || ಕುಂಬಾರನು ಕೈಯ್ಯಲ್ಲಿಗುವ ದೊಣ್ಣೆಯಿಂದ ಚಕ್ರವನ್ನು ತಿರಿಗಿಸುವದ್ದರಿಂದ ತಿರುಗುತ್ತದೆ.ಆತನುಕೈಯಲ್ಲಿರುವ ದೊಣ್ಣೆಯಿಂದ ತಿರಿಗಿಸುವದುಬಿಟ್ಟನಂತರವು ಪೂರ್ವದಪ್ರಯೋಗವಶದಿಂದ ಆ ಸಂಸ್ಕಾರ ನಾಶವಾಗುವವರಿಗೂ ತಿರುಗುತಾತ್ತ ಇದೆ. ಅದರಂತೆಸಂಸ್ಕಾರದಲ್ಲಿ ಯುದ್ದಂಥಾ ಆತ್ಮನಿಂದ ಮೋಕ್ಷವನ್ನು ಪಡೆಯುವದಕ್ಕೋಸ್ಕರವಾಗಿ ಬಹುಶ ಯಾವದುಧ್ಯಾನಿಸಲ್ಪಟ್ಟಿತೋ ಆ ಧ್ಯಾನಯಿಲ್ಲದೇ ಯಿರುವಕಾಲದಲ್ಲಿಯೂ ಆ ಧ್ಯಾನಸಂಸ್ಕಾರಯಿರುವ ಪರ್ಯಂತರ ಮುಕ್ತನಾದ ಸಿದ್ಧಪರಮೇಷ್ಠಿಗಳಿಗೆ ಊರ್ಧ್ವಗಮನವು ಉಂಟಾಗುತ್ತದೆ || ಮಣ್ಣಿನಿಂದ ಲೇಪಿಸಲ್ಪಟ್ಟ ಭಾರವಾಗಿರುವ ಸೊರೇದಬುರುಡೆಯು ಜಲದಲ್ಲಿ ಕೆಳಗೆ ಮುಳಿಗಿದಂಥಾದ್ದಾಗಿ ಆ ಜಲದ ದ್ರವದಿಂದ ಮಣ್ಣುಕರಗಿ ಅನಂತರ ಲಘುವಾದಂಥಾದ್ದಾಗಿ ಊರ್ಧ್ವಕ್ಕೆಹ್ಯಾಗೆ ಬರುತ್ತಿಧೆಯೋ ಹಾಗೆ ಕರ್ಮಗಳ ಭಾರವಿಂದ ಸಂಸಾರವಲ್ಲಿಮುಳುಗಿ ಕೊಂಡಿದ್ದಂಥಾ ಆತ್ಮನು ಧ್ಯಾನಾದಿಸಾಮಗ್ರಿಗಳಿಂದ ಆ ಕರ್ಮಭಾರವು ನಾಶವಾದನಂತರ ಲಘುವಾಗಿ ಊರ್ಧ್ವಗಮನವನ್ನು ಪಡೆಯುತ್ತಿಧಾನೆ || ಬೀಜಕ್ಕೆ ಕೋಶಗಳಾಗಿರುವ ಶಿಪ್ಪೆಗಳು ಹೋಗುವದ್ದರಿಂದ ಹರಳಬೀಜವು ಆ ಕ್ಷಣದಲ್ಲಿಯೇಹ್ಯಾಗೆ ಊರ್ಧ್ವಕ್ಕೆ ಹೋಗುತ್ತಿದೆಯೋ ಹಾಗೆ ಮನುಷ್ಯಾದಿಗತಿಗಳನ್ನು ಪಡೆಯಿಸುವ ಗತಿಜಾತ್ಯಾದಿ ಸಮಸ್ತಕರ್ಮಬಂಧನದ ನಾಶೆ

ದಿಂದ ಊರ್ಧ್ವಕ್ಕೆ ಗಮನಮಾಡುತ್ತಾನೆ || ಥಾಳಿಸಂಬಂಧವಿಲ್ಲದ ದೀಪದಜ್ವಾಲೆಯು ಸ್ವಭಾವದಿಂದ ಹ್ಯಾಗೆಊರ್ಧ್ವಕ್ಕೆ ಹೋಗುತ್ತಿಧೆಯೋ ಹಾಗೆ ಮುಕ್ತಾತ್ಮನುಕೂಡಾ ನಾನಾಪ್ರಕಾರವಾದ ಗತಿಗಳಿಗೆ ಕಾರಣವಾದ ಕರ್ಮಗಳ ನಾಶನದಿಂದ ಊರ್ಧ್ವಗತಿ ಸ್ವಭಾವನಾದಕಾರಣ ಊರ್ಧ್ವವನ್ನೇಕುರಿತು ಹೋಗುತ್ತಾನೆ || ೭ ||

ಅ || ಊರ್ಧ್ವಗಮನಸ್ವಭಾವವಿದ್ದು ಲೋಕಾಂತವಾದ ತನುವಾತಕ್ಕಿಂತಲೂ ಊರ್ಧ್ವಭಾಗದಲ್ಲಿ ಹೋಗದೇಇರುವದಕ್ಕೆ ಕಾರಣವನ್ನು ಹೇಳುತ್ತಾರೆ.

ಸೂ || ಧರ್ಮಾಸ್ತಿಕಾಯಾಭಾವಾತ್ || ೮ ||

ಟೀ || ಧರ್ಮಾಸ್ತಿಕಾಯಾಭಾವಾತ್ - ಧರ್ಮಾಸ್ತಿಕಾಯ-ಗಮನಕ್ಕೆ ಕಾರಣವಾಗಿರುವ ಧರ್ಮದ್ರವ್ಯವು, ಅಭಾವಾತ್-ಲೋಕದಿಂದಹೊರಗೆ ಯಿಲ್ಲದೇಯಿರುವದರದೆಶೆಯಿಂದ ಸಿದ್ಧಪರಮೇಷ್ಠಿಗಳಿಗೆ ಲೋಕದಿಂದ ಹೊರಗೆಗಮನಉಂಟಾಗುವದಿಲ್ಲ ||ತಾ|| ಜೀವಪುದ್ಗಲಗಳ ಗಮನಕ್ಕೆ ಕಾರಣವಾದ ಧರ್ಮದ್ರವ್ಯವುಲೋಕದಿಂದ ಹೊರಗೆಯಿಲ್ಲದೇಯಿರುವದ್ದರಿಂದ ಸಿದ್ಧಪರಮೇಷ್ಠಿಗಳಿಗೆ ಲೋಕದಿಂದ ಹೊರಗೆ ಗಮನಉಂಟಾಗುವದಿಲ್ಲ || ೮ ||

ಅ || ಮುಕ್ತಜೀವಗಳ ವಿಷಯವನ್ನುಹೇಳುತ್ತಾರೆ.

ಸೂ || ಕ್ಷೇತ್ರಕಾಲಗತಿಲಿಂಗತೀರ್ಥ ಚಾರಿತ್ರಪ್ರತ್ಯೇಕ ಬುದ್ಧಬೋಧಿತಜ್ಞಾನಾವಗಾಹನಾಂತರಸಂಖ್ಯಾಲ್ಪಬಹುತ್ವತಃ ಸಾಧ್ಯಾಃ || ೯ ||

ಟೀ || ಕ್ಷೇತ್ರಕಾಲಗತಿಲಿಂಗತೀರ್ಥಚಾರಿತ್ರಪ್ರತ್ಯೇಕ ಬುದ್ಧಬೋಧಿತಜ್ಞಾನಾವಗಾಹನಾಂತರಸಂಖ್ಯಾಲ್ಪಬಹುತ್ವತಃ-ಕ್ಷೇತ್ರ - ಸ್ವಕ್ಷೇತ್ರಪರಕ್ಷೇತ್ರವು, ಕಾಲ-ಸಮಯುಮೊದಲಾದಕಾಲವು, ಗತಿ-ಗತಿಯು, ಲಿಂಗ-ಲಿಂಗವು, ತೀರ್ಥ-ತೀರ್ಥವು, ಚಾರಿತ್ರ-ಐದುಪ್ರಕಾರ ಚಾರಿತ್ರವು, ಪ್ರತ್ಯೇಕಬುದ್ಧ - ಪರೋಪದೇಶವಿಲ್ಲದೇತಿಳಿಯೋಣವು, ಬೋಧಿತ-ಪರೋಪದೇಶದಿಂದ ತಿಳಿಯೋಣವು, ಜ್ಞಾನ-ಐದುಪ್ರಕಾರವಾದ ಜ್ಞಾನವು, ಅವಗಾಹನ-ಅವಗಾಹನವು, ಅಂತರ-ಅಂತರವು, ಸಂಖ್ಯಾ-ಸಂ

ಖ್ಯೆಯು, ಅಲ್ಪಬಹುತ್ವತಃ-ಅಲ್ಪಬಹುತ್ವವು ಇವುಗಳ ದೆಶೆಯಿಂದ, ಸಾಧ್ಯಾಃ-ಸಿದ್ಧಪರಮೇಷ್ಠಿಗಳು ಸಾಧಿಸುವದಕ್ಕೆ ಯೋಗ್ಯರಾದಂಥಾವರುಗಳು ಆಗುತ್ತಾರೆ ॥ ತಾ॥ ಸಿದ್ಧಪರಮೇಷ್ಠಿಗಳಲ್ಲಿ ಯಾವಭೇದವುಯಿಲ್ಲ. ಕ್ಷೇತ್ರಾದಿ ೧೩ ಕಾರಣಗಳಿಂದ ತಿಳಿಯುವದಕ್ಕೆ ಯೋಗ್ಯರಾದಂಥಾವರುಗಳು ಆಗುತ್ತಾರೆ ॥ ೯ ॥

ಇತಿತತ್ವಾರ್ಥಾಧಿಗಮೇ ಮೋಕ್ಷಶಾಸ್ತ್ರೇ ದಶಮೋಧ್ಯಾಯಃ

ಆನಂದವರ್ಷೇ ಷಷ್ಟಮಿಚಂದ್ರವಾರೇ।
ನಂದೀಶ್ವರೇ ಕಾರ್ತಿಕಶುಕ್ಲಪಕ್ಷೇ ॥
ತತ್ವಾರ್ಥಸೂತ್ರಸ್ಯ ಲಿಲೇಖ ಟೀಕಾಂ ।
ಕರ್ಣಾಟಕಾಮಾರ್ಹತಪದ್ಮರಾಜಃ॥
ಕಾಶ್ಯಪಾನ್ವಯ ವಿಪ್ರೇಣ ಬ್ರಹ್ಮಸೂರಿತನೂಭುವಾ ॥
ವೀರಾಬ್ದೇ ಸಚಮಾರೇ ಚ ಶಾಸ್ತ್ರಮೇತತ್ಸಮುದ್ರಿತಂ ॥

ಇದು ಶ್ರೀಮದ್ಭಗವದುಮಾಸ್ವಾಮಿ ಪ್ರಭೃತಿ ಮುನಿಜನಪಾದಪಯೋಜಭೃಂಗಾಯಮಾನ ಶ್ರೀಮದಾರ್ಹತದ್ವಿಜೋತ್ತಮ ಬ್ರಹ್ಮಸೂರಪಂಡಿತಾತ್ಮಜ ಪದ್ಮರಾಜ ಪಂಡಿತ ವಿರಚಿತ ತತ್ವಾರ್ಥಸೂತ್ರ ಕರ್ಣಾಟಕವ್ಯಾಖ್ಯಾನಸಂಪೂರ್ಣಮಾದುದು.



ದಶಾಧ್ಯಾಯಪರಿಚ್ಛಿನ್ನೇ ತತ್ವಾರ್ಥೇ ಪಠಿತೇ ಸತಿ ।
ಉಪವಾಸಫಲಂ ತಸ್ಯ ಭಾಷಿತಂ ಮುನಿಪುಂಗವೈಃ ॥

ತಾ ॥ ಈ ತತ್ವಾರ್ಥಸೂತ್ರದ ಹತ್ತು ಅಧ್ಯಾಯಗಳನ್ನು ಸಾಂಗವಾಗಿ ಒಂದಾವರ್ತಿ ಓದುವಂಥಾವರಿಗೆ ಒಂದುಉಪವಾಸ ಮಾಡಿದ ಫಲಬರುತ್ತದೆ ಎಂಬುವದಾಗಿ ಮುನಿಶ್ರೇಷ್ಠರುಗಳಿಂದ ಹೇಳಲ್ಪಟ್ಟಿರುತ್ತದೆ ॥

ಸಂಪೂರ್ಣಂ

ಭದ್ರಂಭೂಯಾತ್.